

ಸಾರನಾಥದ ಬುದ್ಧ

*Copyright :* Archæological Survey of India.

ಪಾಲಿ — ಕನ್ನಡ ಅನುವಾದ ಮಾಲೆ: ೧೯೪೧ರ ಪ್ರಕಟಣೆ

# ಜಾತಕ ಕತೆಗಳು

ಅನುವಾದಕ — ಸಂಪಾದಕ

**ಜಿ. ಪಿ. ರಾಜರತ್ನಂ**



**ಶಾಕ್ಯ ಸಾಹಿತ್ಯ ಮಂಟಪ**

ಮಲ್ಲೇಶ್ವರ, ಬೆಂಗಳೂರು

೧೯೪೧

PĀḶI—KANNAḌA TRANSLATION SERIES

# JĀTAKA KATHEGAḶU

OR

## STORIES FROM THE JĀTAKA

BEING

## FIFTY SELECT JĀTAKAS

IN

## KANNAḌA

FROM THE ORIGINAL PĀLI

TRANSLATOR—EDITOR

G. P. RĀJARATNAṂ, M.A.

ŚĀKYA SĀHITYA MAṆṬAPAṂ

MALLEŚWARAṂ, BANGALORE, S. INDIA

1941

ನಮ್ಮ ನಾಡಿನ ನಂದಾದೀಪಗಳಲ್ಲಿ

ಇಬ್ಬರಾದ

**ದಿವಂಗತ ಪಂಜೆ ಮಂಗೇಶರಾಯರು**

ಮತ್ತು

**ದಿವಂಗತ ಟಿ. ಎಸ್. ವೆಂಕಣ್ಣಯ್ಯನವರು**

ಇವರಿಗೆ

ಪ್ರೀತಿಯ ಭಕ್ತಿಯ ಕಾಣಿಕೆ

# ‘ಶಾಕ್ಯ ಸಾಹಿತ್ಯ ಮಂಟಪ’ದ
# ಇದುವರೆಗಿನ ಬೌದ್ಧ, ಜೈನ ಕಾರ್ಯಗಳು

---

**೧೯೩೭.**

ಫೆಬ್ರುವರಿ:— **ಬುದ್ಧವಚನ ಪರಿಚಯ** ... ... **೨೧೦ ಪುಟ.**

**ಮಿಲಿಂದ ಪ್ರಶ್ನೆ** .... ... ... **೧೩೪ ಪುಟ.**

**ಪಾಲಿ ಪಜ್ಜ ಪುಷ್ಪಾಂಜಲಿ** ... .... **೬೪ ಪುಟ.**

ಮೂರು ಪಾಲಿ ಸೂತ್ರಗಳು ... .... ೮೧ ಪುಟ.

ಏಪ್ರಿಲ್:— ಶಾಕ್ಯ ಸಾಹಿತ್ಯ ಮಂಟಪದ ಒಂದು ಪ್ರಕರಣ ೩೨ ಪುಟ.

ಧರ್ಮ — ಸಾಹಿತ್ಯ — ದೃಷ್ಟಿ ... ೪೮ ಪುಟ.

ಬುದ್ಧನ ಕಾಲದ ತೀರ್ಥಕರರೂ ತೀರ್ಥಕರರರೂ ೧೨೨ ಪುಟ.

ಅಕ್ಟೋಬರ್:— ಮಹಾವೀರನ ಮಾತುಕತೆ ... ೪ ಚಿತ್ರ ... ೧೩೧ ಪುಟ.

**೧೯೩೮.**

ಜನವರಿ:— ಶ್ರೀ ಗೋಮಟೇಶ್ವರ ... ೧೮ ಚಿತ್ರ . ೯೦ ಪುಟ.

ಏಪ್ರಿಲ್:— ಭಗವಾನ್ ಮಹಾವೀರ .. ೨ ಚಿತ್ರ ... ೩೨ ಪುಟ.

**೧೯೪೦.**

ಜನವರಿ:— **ಬುದ್ಧನ ಕತೆಗಳು** ... ... ೩೨ ಚಿತ್ರ ... ೨೭೦ ಪುಟ.

ಮೇ:— **ವೈಶಾಖ ಶುಕ್ಲ ಪೂರ್ಣಿಮಾ ...** .... ೯೬ ಪುಟ.

ಅಕ್ಟೋಬರ್:— ಶ್ರೀ ಪಾರ್ಶ್ವನಾಥ ಚಂಪೂ ... ೧ ಚಿತ್ರ ... ೬೪ ಪುಟ.

**೧೯೪೧.**

ಮೇ:— **ಜಾತಕ ಕತೆಗಳು** .... ೬ ಚಿತ್ರ .... ೩೦೦ ಪುಟ.

# ಬಿನ್ನಹ

ಇಂದು ಪುನಃ ವೈಶಾಖ ಶುಕ್ಲ ಪೂರ್ಣಿಮೆ: ಭಗವಂತನಾದ ಗೌತಮ ಬುದ್ಧನು ಜನಿಸಿದ ದಿವಸ, ಆತನು ಬೋಧಿಯನ್ನು ಸಂಪಾದಿಸಿದ ದಿವಸ, ಆತನು ಮಹಾಪರಿನಿರ್ವಾಣವನ್ನು ಪಡೆದ ದಿವಸ. ಇಂತಹ ಮಹಾ ದಿವಸದಲ್ಲಿ ಈ "**ಜಾತಕ ಕತೆಗಳು**" ಪುಸ್ತಕವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದ ಸಯ್ಪು ನನ್ನದು.

"**ಜಾತಕ**"ಗಳನ್ನು ಕುರಿತು ಹೇಳಬೇಕಾದ ಪರಿಚಯದ ಮಾತುಗಳನ್ನು ಹಿಂದಿನ "**ಬುದ್ಧನ ಕತೆಗಳು**" ಪುಸ್ತಕದ ಮುನ್ನುಡಿಯಲ್ಲಿ ಹೇಳಿರುವದರಿಂದ, ಚರ್ವಿತಚರ್ವಣ ಬೇಕಾಗಿಲ್ಲ. "'**ಜಾತಕ**'ಗಳು ಎಂದರೆ ಬುದ್ಧನ ಪೂರ್ವಜನ್ಮಗಳ ಕತೆಗಳು. ಮುಂದೆ ಬುದ್ಧನಾಗುವವನಿಗೆ ಹಿಂದಿನ ಜನ್ಮಗಳಲ್ಲಿ **ಬೋಧಿಸತ್ತ್ವ, ಮಹಾಸತ್ತ್ವ** ಎಂದೂ ಹೆಸರು" ಎಂದು ತಿಳಿದುಕೊಂಡರೆ, ಇಲ್ಲಿಗೆ ಸಾಕು. ಈ "**ಜಾತಕ ಕತೆಗಳು**" ಪುಸ್ತಕವನ್ನು "**ಬುದ್ಧನ ಕತೆಗಳು—ಎರಡನೆಯ ಭಾಗ**" ಎಂದು ಗಣಿಸಬಹುದು. ಅಲ್ಲಿ ಅರುವತ್ತಾರು ಕತೆಗಳನ್ನು ಕೊಟ್ಟಿತ್ತು; ಅಂತಹವೇ ಇನ್ನೂ ಐವತ್ತು ಕತೆಗಳನ್ನು ಇಲ್ಲಿ ಕೊಟ್ಟಿದೆ. ಆದರೆ, ಇಲ್ಲಿ, ಹಿಂದೆ ತೋರಿಸಿದ್ದಂತೆ ಜಾತಕದ ಗದ್ಯ ಪದ್ಯಗಳನ್ನು ಪ್ರತ್ಯೇಕವಾಗಿ ತೋರಿಸದೆ, ಪುನರುಕ್ತವಾಗದಂತೆ ಎರಡನ್ನೂ ಸೇರಿಸಿಕೊಂಡು ಅನುವಾದ ಮಾಡಿದ್ದೇನೆ.

ಈ ಪುಸ್ತಕವನ್ನು ಪ್ರಕಟಿಸುವುದಕ್ಕೆ ಹಲವರು ಹಿತವರು ಎಂದಿನಂತೆ ಈ ವರ್ಷವೂ ಧನಸಹಾಯ ಮಾಡಿದ್ದಾರೆ:

ರಾವ್‌ಬಹದ್ದೂರ್ ಡಾ|| ಸಿ. ಬಿ. ರಾಮರಾಯರು ಬಿ. ಎ., ಎಂ. ಡಿ., ಶ್ರೀ. ಎಸ್. ಜಿ. ಶಾಸ್ತ್ರಿಗಳು, ಬಿ.ಎ., ಎಂ.ಎಸ್‌ಸಿ., ಎಫ್.ಸಿ.ಎಸ್., ಮುಂತಾದ ಮಿತ್ರರು ರೂ. ೧೦೦

ಶಿವಮೊಗ್ಗೆಯ ಶ್ರೀ ಭೂಪಾಳಂ ಚಂದ್ರಶೇಖರಯ್ಯನವರು ರೂ. ೨೦

ಉತ್ತರ ಕನ್ನಡಾ ಶಿರಾಳಿ ಮಠದ ಶ್ರೀಮದಾನಂದಾಶ್ರಮ ಸ್ವಾಮಿಜೀಯವರು ರೂ. ೧೫

ಆರು ಜನ ಹಿತವರು, ಮಿತ್ರರು ರೂ. ೬೦

ಇಪ್ಪತ್ತು ಜನ ಹಿತವರು, ಮಿತ್ರರು ರೂ. ೧೦೦

ಇದರ ಜೊತೆಗೆ, 'ಶಾಕ್ಯಮಂಟಪ'ದ ಇದುವರೆಗಿನ ಮೂರು ವರ್ಷಗಳ ಕಾರ್ಯಕ್ಕಾಗಿ,

ಶ್ರೀಮನ್ನಿಡುಮಾಮಿಡಿ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳು ರೂ. ೪೦

ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಶಿವಕುಮಾರಸ್ವಾಮಿಗಳು ರೂ. ೨೫

ಬೆಂಗಳೂರಿನ ಪ್ರಸಿದ್ಧ ವ್ಯಾಪಾರಿಗಳಾದ ಶ್ರೀ ರಾಮಚಂದ್ರರಾವ್ ಸಿಂಧೆ ಅವರು ರೂ. ೨೫

— ಹೀಗೆ ಕೊಟ್ಟು ಉಪಕಾರ ಮಾಡಿದ್ದಾರೆ.

Archæological Survey of India, ಮತ್ತು Government Museum, Madras, ಇವರುಗಳು ಈ ಪುಸ್ತಕವನ್ನು ಚಿತ್ರಗಳಿಂದ ಅಲಂಕರಿಸಲು ಅಪ್ಪಣೆ ಕೊಟ್ಟು ನೆರವಾಗಿದ್ದಾರೆ.

ನಮ್ಮ ಬೆಂಗಳೂರು ಬಿ. ಬಿ. ಡಿ. ಪ್ರೆಸ್ಸಿನವರಂತೂ, ಪುಸ್ತಕ ಪ್ರಕಟಣೆಗೆ ಬೇಕಾದ ಹಣ ಎಂದಿನಂತೆ ಸಾಲದೆ ಬಂದರೂ, ಹೇಗೋ ಸವರಿಸಿಕೊಂಡು, ಹಿಡಿದ ಕೆಲಸವನ್ನು ಇಷ್ಟು ಚೆನ್ನಾಗಿ, ಇಷ್ಟು ಸ್ವಲ್ಪವೇ ಕಾಲದಲ್ಲಿ ಮುದ್ರಿಸಿ ಮುಗಿಸಿ ಕೊಟ್ಟಿದ್ದಾರೆ.

ಇವರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

**'ಶಾಕ್ಯ ಸಾಹಿತ್ಯ ಮಂಟಪ'**
ವೈಶಾಖ ಶುಕ್ಲ ಪೂರ್ಣಿಮೆ
೧೦. ೫. ೧೯೪೧.

**ಜಿ. ಪಿ. ರಾಜರತ್ನಂ.**

# ವಿಶ್ವಂತರ ಜಾತಕ

[ಜಾತಕಗಳಲ್ಲೆಲ್ಲಾ ಬಹು ದೊಡ್ಡದಾದ ಜಾತಕ, ವಿಶ್ವಂತರ ಜಾತಕ. ಮಕ್ಕಳು ಕೂಡ ಓದುವುದಕ್ಕೆ ಅನುಕೂಲವಾಗಲೆಂದು ಈ ದೊಡ್ಡಕತೆಯನ್ನು ಚಿಕ್ಕಚಿಕ್ಕ ಚೂರುಗಳಾಗಿ ಒಡೆದಿದ್ದೇನೆ. ಅಲ್ಲದೆ, ವಿಶ್ವಂತರನು ಹಿಂದಿನ ಜನ್ಮಗಳಲ್ಲಿ ಏನಾಗಿದ್ದ ನೆಂಬುದನ್ನೂ ಮುಂದೆ ಏನಾದನೆಂಬುದನ್ನೂ ಸಂಕ್ಷೇಪವಾಗಿ ತಿಳಿಸಿದ್ದೇನೆ.]

### ಭಾಗ ಒಂದು


ವಿಶ್ವಂತರನ ತಾಯಿ ಸ್ಪೃಶತೀ ... ೧
ಕುಮಾರ ವಿಶ್ವಂತರ ... ೪
ವಿಶ್ವಂತರನ ಆನೆಯ ದಾನ . ೮
ಶಿಬಿಗಳ ಕ್ರೋಧ .... ೧೧
ರಾಜಶಾಸನ ... ೧೨
ಮಾದ್ರಿಯ ಮನಸ್ಸು .... ೧೪
ಸ್ಪೃಶತೀದೇವಿಯ ಶೋಕ ... ೧೬
ಸಪ್ತ ಶತಕ ಮಹಾದಾನ ... ೧೯
ಪತಿವ್ರತೆ ಮಾದ್ರಿ ... ೨೦
ವನಪ್ರಯಾಣ ... ೨೪
ಕುದುರೆ ರಥಗಳ ದಾನ .... ೨೫
ಚೇತರಾಷ್ಟ್ರದಲ್ಲಿ .... ೨೬
ವಂಕಪರ್ವತದ ದಾರಿ ... ೨೯
ವಂಕಪರ್ವತದಲ್ಲಿ ವಾಸ .... ೩೧


### ಭಾಗ ಎರಡು


ದುರ್ನಿವಿಷ್ಟ ಗ್ರಾಮದ ಜೂಜಕ ೩೪
ವಂಕಪರ್ವತದ ದಾರಿಯಲ್ಲಿ ... ೩೭
ಚೇತಪುತ್ರ . ೩೮
ಆಶ್ರಮವರ್ಣನೆ . ೪೦
ಅಚ್ಯುತ ಋಷಿ .. ೪೧
ಮಾದ್ರಿಯ ಕನಸು .. ೪೩
ಜೂಜಕನ ಭಿಕ್ಷೆ .... ೪೪
ಮಕ್ಕಳ ಮಹಾದಾನ .... ೪೬
ಮಕ್ಕಳ ವಿಲಾಪ .... ೪೯
ಮಾದ್ರಿಯ ಕಳವಳ .... ೫೩
ಮಾದ್ರಿಯ ಮಹಾಪ್ರಲಾಪ .... ೫೫
ಮಾದ್ರಿಯ ಅನುಮೋದನೆ .... ೬೦
ಶಕ್ರನು ಬೇಡಿದ ಭಿಕ್ಷೆ ... ೬೨
ಶಕ್ರನು ಕೊಟ್ಟ ವರ .. ೬೫

# ಭಾಗ ಮೂರು


ಜೇತುತ್ತರ ನಗರದಲ್ಲಿ ಜೂಜಕ .... ೬೭
ಮಕ್ಕಳ ಬಿಡುಗಡೆ ... ೬೮
ಸಂಜಯನ ಪ್ರಯಾಣ .... ೭೦
ವಿಶ್ವಂತರ ದರ್ಶನ .... ೭೪
ಮಾದ್ರೀ ವಿಶ್ವಂತರರ ಅಭಿಷೇಕ .... ೭೭
ಜೇತುತ್ತರ ನಗರಕ್ಕೆ ಪ್ರಯಾಣ ... ೮೦


## ವಿಶ್ವಂತರನ ಪೂರ್ವೋತ್ತರ ಕಥೆ

### ಪೂರ್ವ ಕಥೆ


ಸುಮೇಧ ಬ್ರಾಹ್ಮಣ .... ೮೨
ದೀಪಂಕರ ಬುದ್ಧ .... ೮೩
ಸುಮೇಧನ ಸೇವೆ .... ೮೩
ಸುಮೇಧನ ಸಂಕಲ್ಪ .... ೮೪
ದೀಪಂಕರನ ಆಶ್ವಾಸನೆ .... ೮೫
ಪಾರಮಿತೆಗಳ ಚಿಂತನೆ .... ೮೬
ದೀಪಂಕರನ ಅನಂತರದ ಬುದ್ಧರ ಕಾಲದಲ್ಲಿ .... ೮೯


### ಉತ್ತರ ಕಥೆ


ತುಶಿತ ಸ್ವರ್ಗದಲ್ಲಿ ... ೯೨
ಬೋಧಿಸತ್ತ್ವನ ಅವತಾರ .... ೯೩
ಬೋಧಿಸತ್ತ್ವನ ಜನನ .... ೯೫
ಗೌತಮ ಬುದ್ಧ ... ೯೭
ವಿಶ್ವಂತರನ ಬಳಗ . . ೯೮



ವಿಶ್ವಂತರನು ದಾನಶಾಲೆಗೆ ಹೋಗುತ್ತಿರುವುದು

# ದಾನವೀರ ವಿಶ್ವಂತರ

## ವಿಶ್ವಂತರನ ತಾಯಿ ಸ್ಪೃಶತೀ

ಇಂದಿಗೆ ತೊಂಬತ್ತೊಂದು ಕಲ್ಪಗಳ ಹಿಂದೆ ವಿಪಶ್ಯಿನ್ ಎಂಬ ಗುರು ಲೋಕದಲ್ಲಿ ಉದಿಸಿದನು. ಆತನು ಒಂದು ಸಲ ಬಂಧುಮತೀ ನಗರದ ಬಳಿಯ ಕ್ಷೇಮಾ ಎಂಬ ಜಿಂಕೆಗಳ ವನದಲ್ಲಿ ವಿಹಾರಮಾಡು ತ್ತಿರುವಾಗ ಬಂಧುಮತೀರಾಜನಿಗೆ ಇನ್ನೊಬ್ಬರಾಜನು ಬಹು ಬೆಲೆ ಯುಳ್ಳ ಚಂದನಸಾರವನ್ನೂ ಒಂದುನೂರುಸಾವಿರ ಬೆಲೆಬಾಳುವ ಚಿನ್ನದ ಮಾಲೆಯನ್ನೂ ಕಳುಹಿಸಿದನು. ಅವುಗಳನ್ನು ಬಂಧುಮತೀರಾಜನು ತನ್ನ ಇಬ್ಬರು ಹೆಣ್ಣುಮಕ್ಕಳಿಗೆ ಕೊಡಬಯಸಿ, ಹಿರಿಯವಳಿಗೆ ಚಂದನ ಸಾರವನ್ನೂ ಕಿರಿಯವಳಿಗೆ ಸುವರ್ಣಮಾಲೆಯನ್ನೂ ಕೊಟ್ಟನು. ಅವರಿಬ್ಬರೂ “ ಇದನ್ನು ನಾವು ನಮ್ಮ ಶರೀರದಲ್ಲಿ ತಾಳುವುದು ಬೇಡ. ಇದರಿಂದ ಗುರುವನ್ನೇ ಪೂಜಿಸೋಣ ” ಎಂದು ಚಿಂತಿಸಿ, “ ಅಪ್ಪ, ಈ ಚಂದನಸಾರದಿಂದಲೂ ಸುವರ್ಣಮಾಲೆಯಿಂದಲೂ ದಶಬಲನನ್ನು ಪೂಜಿಸುವೆವು ” ಎಂದು ರಾಜನಿಗೆ ತಿಳಿಸಿದರು. ರಾಜನು ಅದನ್ನು ಕೇಳಿ, ಒಳ್ಳೆಯದೆಂದು ಒಪ್ಪಿದನು. ಹಿರಿಯವಳು ಚಂದನಸಾರವನ್ನು ಪುಡಿಮಾಡಿಸಿ, ಅದನ್ನು ಚಿನ್ನದ ಕರಡಿಗೆಯಲ್ಲಿ ತುಂಬಿಸಿದಳು. ಚಿಕ್ಕ ವಳು ಸುವರ್ಣಮಾಲೆಯನ್ನು ಎದೆಮುಚ್ಚುವಮಾಲೆಯಾಗಿ ಮಾಡಿಸಿ, ಅದನ್ನು ಚಿನ್ನದ ಸಂಪುಟದಲ್ಲಿ ಹಿಡಿಸಿದಳು. ಅನಂತರ ಅವರಿಬ್ಬರೂ ಜಿಂಕೆಗಳ ವನಕ್ಕೆ ವಿಹಾರಹೋದರು. ಅಲ್ಲಿ ಹಿರಿಯವಳು ಚಂದನ ಚೂರ್ಣದಿಂದ ದಶಬಲನ ಚಿನ್ನದ ಬಣ್ಣದ ಶರೀರವನ್ನು ಪೂಜಿಸಿ, ಉಳಿದ ಚೂರ್ಣವನ್ನು ಗಂಧಕುಟಿಯಲ್ಲಿ ಚಿಮುಕಿಸಿ, “ ಸ್ವಾಮಿ, ಮುಂದೆ ನಾನು ನಿನ್ನಂತಹ ಬುದ್ಧನ ತಾಯಿಯಾಗುವಂತಾಗಲಿ ” ಎಂದು ಪ್ರಾರ್ಥಿಸಿದಳು. ಕಿರಿಯವಳು ತಥಾಗತನ ಸುವರ್ಣವರ್ಣದ ಶರೀರ ವನ್ನು ತಾನು ಮಾಡಿಸಿದ ಎದೆಮುಚ್ಚುವಮಾಲೆಯಿಂದ ಪೂಜಿಸಿ, “ ಸ್ವಾಮಿ, ನನಗೆ ಅರ್ಹತ್ತ್ವ ಪ್ರಾಪ್ತಿಯಾಗುವ ವರೆಗೂ ಈ ಆಭರಣ

ನನ್ನ ಶರೀರದಿಂದ ಬಿಟ್ಟುಹೋಗದಿರಲಿ" ಎಂದು ಪ್ರಾರ್ಥಿಸಿದಳು. ಗುರುವು ಅವರಿಬ್ಬರ ಪ್ರಾರ್ಥನೆಗಳನ್ನೂ ಅನುಮೋದಿಸಿದನು.

ಅವರಿಬ್ಬರೂ ಆಯುಸ್ಸು ಇರುವವರೆಗೆ ಇದ್ದು, ಬಳಿಕ ದೇವ ಲೋಕದಲ್ಲಿ ಹುಟ್ಟಿದರು. ಅವರಲ್ಲಿ ಹಿರಿಯಕ್ಕನು ದೇವಲೋಕದಿಂದ ಮನುಷ್ಯಲೋಕಕ್ಕೂ ಮನುಷ್ಯಲೋಕದಿಂದ ದೇವಲೋಕಕ್ಕೂ ಓಡಿ ಯಾಡುತ್ತ, ತೊಂಬತ್ತೊಂದು ಕಲ್ಪಗಳ ಕಡೆಯಲ್ಲಿ ಬುದ್ಧನ ತಾಯಿ ಯಾದ ಮಾಯಾದೇವಿಯಾದಳು. ಚಿಕ್ಕತಂಗಿಯೂ ಹಾಗೆಯೇ ಓಡಿ ಯಾಡುತ್ತ ಕಶ್ಯಪದಶಬಲನ ಕಾಲದಲ್ಲಿ ಕಿಕಿರಾಜನ ಮಗಳಾಗಿ ಹುಟ್ಟಿದಳು. ಹುಟ್ಟುವಾಗಲೇ ಅವಳ ಎದೆಯ ಮೇಲೆ ಚಿತ್ರಕರ್ಮದಿಂದ ಮಾಡಿದಂತಹ ಎದೆಮುಚ್ಚುವ ಮಾಲೆಯಿತ್ತು. ಅದರಿಂದ ಆಕೆಗೆ ಉರಚ್ಛದಾ ಎಂದು ಹೆಸರಾಯಿತು. ಆಕೆ ಹದಿನಾರನೆಯ ವಯಸ್ಸಿ ನಲ್ಲಿ ಗುರುವಿನ ಉಪದೇಶವನ್ನು ಕೇಳಿ ಧರ್ಮದಲ್ಲಿ ನಡೆಯತೊಡಗಿ ದಳು. ಕ್ರಮವಾಗಿ ಧರ್ಮವನ್ನು ಆಚರಿಸಿ, ಕಡೆಗೆ ಅರ್ಹತ್ತ್ವವನ್ನು ಪಡೆದಳು.

ಕಿಕಿರಾಜನಿಗೆ ಶ್ರಮಣೀ, ಶ್ರಮಣಾ, ಗುಪ್ತಾ, ಭಿಕ್ಷುದಾಸಿಕಾ, ಧರ್ಮಾ, **ಸುಧರ್ಮಾ** ಮತ್ತು ಸಂಘದಾಸೀ ಎಂಬ ಏಳು ಜನ ಮಕ್ಕಳಾ ದರು. ಇವರೇ ಗೌತಮಬುದ್ಧನ ಕಾಲದಲ್ಲಿ ಕ್ಷೇಮಾ, ಉತ್ಪಲವರ್ಣಾ ಪಟಾಚಾರಾ, ಗೌತಮಾ, ಧರ್ಮದತ್ತಾ, **ಮಹಾಮಾಯಾ** ಮತ್ತು ವಿಶಾಖಾ ಎಂಬವರಾದರು. ಇವರಲ್ಲಿ ಸುಧರ್ಮಾ ಎಂಬವಳು ದಾನಾದಿ ಪುಣ್ಯಗಳನ್ನು ಮಾಡಿ, ವಿಪಶ್ಯಿಯೆಂಬ ಬುದ್ಧನಿಗೆ ನಡೆಸಿದ ಚಂದನ ಚೂರ್ಣಪೂಜೆಯ ಫಲವಾಗಿ ರಕ್ತಚಂದನ ರಸದಿಂದ ಚೆನ್ನಾಗಿ ತಳಿಯ ಲ್ಪಟ್ಟಂತಹ ಶರೀರವನ್ನು ಪಡೆದು, ದೇವತೆಗಳಲ್ಲೂ ಮನುಷ್ಯರಲ್ಲೂ ಓಡಿಯಾಡುತ್ತ, ಅನಂತರ ದೇವರಾಜನಾದ ಶಕ್ರನ ಪಟ್ಟದ ರಾಣಿಯಾಗಿ ಹುಟ್ಟಿದಳು. ಅಲ್ಲಿ ಅವಳು ತನ್ನ ಆಯುಸ್ಸು ಇರುವವರೆಗೆ ಇದ್ದಳು. ಅನಂತರ ಅವಳ ಆಯುಸ್ಸು ಕಡಿಮೆಯಾದುದನ್ನು ತಿಳಿದು, ಶಕ್ರನು ಅವಳನ್ನು ಮಹಾಯಶಸ್ಸಿನಿಂದ ನಂದನವನೋದ್ಯಾನಕ್ಕೆ ಕರೆದುಕೊಂಡು ಹೋದನು.

ಅಲ್ಲಿ ಅಲಂಕರಿಸಿದ ಹಾಸಿಗೆಯಲ್ಲಿ ಅವಳು ಮಲಗಿರಲು, ತಾನು ಆ ಹಾಸಿಗೆಯ ಬಳಿ ಕುಳಿತು "ಭದ್ರೆ, ನಿನಗೆ ಹತ್ತು ವರ ಕೊಡುವೆನು, ತೆಗೆದುಕೊ. ಮನೋಹರೆ, ಭೂಮಿಯಲ್ಲಿ ನಿನ್ನ ಮನಸ್ಸಿಗೆ ಪ್ರಿಯವಾದ ವರಗಳನ್ನು ಆರಿಸಿಕೊ" ಎಂದನು.

ಆಕೆಯು ತಾನು ಸ್ವರ್ಗದಿಂದ ಚ್ಯುತಿಹೊಂದುವುದಕ್ಕೆ ಕಾರಣ ವನ್ನು ತಿಳಿಯದೆ "ದೇವರಾಜ, ನಿನಗೆ ನಮಸ್ಕಾರ. ಗಾಳಿಯು ವೃಕ್ಷ ವನ್ನು ಹೋಗಲಾಡಿಸುವಂತೆ ನೀನು ಈ ರಮ್ಯವಾದ ಸ್ಥಳದಿಂದ ನನ್ನನ್ನು ಹೋಗಲಾಡಿಸಲು ನಾನೇನು ಪಾಪಮಾಡಿದೆ?" ಎಂದಳು.

ಅದಕ್ಕೆ ಶಕ್ರನು "ನೀನೇನೂ ಪಾಪ ಮಾಡಿಲ್ಲ. ನೀನು ನನಗೆ ಅಪ್ರಿಯಳಲ್ಲ. ನಿನ್ನ ಪುಣ್ಯ ಕ್ಷೀಣವಾಗಿದೆ. ನಿನ್ನ ಮರಣ ಸಮೀಪಿಸಿದೆ. ನಾವು ಇನ್ನು ಅಗಲುವೆವು. ಅದಕ್ಕಾಗಿ, ನಾನು ಕೊಡುವ ಹತ್ತು ವರ ಗಳನ್ನು ತೆಗೆದುಕೊಳ್ಳೆಂದು ಹೇಳುವೆನು" ಎಂದನು.

ಆಕೆಯು ಶಕ್ರನ ಆ ಮಾತುಗಳನ್ನು ಕೇಳಿ, ತನಗೆ ಮರಣವು ನಿಶ್ಚಯವೆಂದು ತಿಳಿದು "ಸರ್ವ ಭೂತೇಶ್ವರನಾದ ಶಕ್ರ, ನನಗೆ ನೀನು ವರ ಕೊಟ್ಟೆ. ನಿನಗೆ ಮಂಗಳವಾಗಲಿ. ಶಿಬಿರಾಜನ ಮನೆ ನನಗಾಗಲಿ. ನೀಲಿ ಕಣ್ಣೂ ನೀಲಿ ಹುಬ್ಬೂ ಇದ್ದು, ಜಿಂಕೆಯಂತೆ ನೀಲಾಕ್ಷಿ ನಾನು ಆಗುವಂತಾಗಲಿ. ಜಿಪುಣತನವಿಲ್ಲದೆ, ಬೇಡಿದವರಿಗೆ ಬೇಡಿದುದನ್ನು ಕೊಟ್ಟು, ಪ್ರತಿರಾಜರಿಂದ ಪೂಜೆ ಪಡೆದು, ಕೀರ್ತಿ ಯಶಸ್ಸುಗಳಿಂದ ಕೂಡಿದ ಮಗನು ನನಗಾಗಲಿ. ನಾನು ಗರ್ಭ ಧರಿಸಿದರೂ ನನ್ನ ನಡು ತೆಳ್ಳಗಿರಲಿ, ಕಡೆದ ಬಿಲ್ಲಿನಂತೆ ಸಮವಾಗಿರಲಿ. ನನ್ನ ಸ್ತನಗಳು ಜೋಲು ಬೀಳದಿರಲಿ. ನನಗೆ ನರೆಗೂದಲು ಬರದಿರಲಿ. ನನ್ನ ಚರ್ಮ ಎಂದೆಂದೂ ನುಣುಪಾಗಿರಲಿ. ವಧೆಗೆ ಒಳಗಾದವರನ್ನು ಬಿಡಿಸುವ ಶಕ್ತಿ ನನಗೆ ಬರಲಿ. ನಾನು ಶಿಬಿರಾಜನ ಮನೆಯಲ್ಲಿ ಅಗ್ರಮಹಿಷಿಯಾಗುವಂತಾಗಲಿ" ಎಂದು ಹತ್ತು ವರಗಳನ್ನು ಕೇಳಿಕೊಂಡಳು.

ದೇವರಾಜನೂ ಶಚೀಪತಿಯೂ ಆದ ಮಘವಾನನು, ವಾಸ ವನು, ಶಕ್ರನು "ಸರ್ವಾಂಗ ಶೋಭನೆ, ನಾನು ನಿನಗೆ ಕೊಟ್ಟ ಈ

ಹತ್ತು ವರಗಳು ಎಲ್ಲವೂ ಶಿಬಿರಾಜನ ರಾಜ್ಯದಲ್ಲಿ ನಿನಗೆ ಲಭಿಸುವುವು" ಎಂದು ಅನುಮೋದಿಸಿದನು.

ಆಕೆಯು ಹೀಗೆ ವರಗಳನ್ನು ಕೊಂಡು, ಅಲ್ಲಿಂದ ಚ್ಯುತಳಾಗಿ ಮದ್ರರಾಜನ ಅಗ್ರಮಹಿಷಿಯ ಹೊಟ್ಟೆಯಲ್ಲಿ ಹುಟ್ಟಿದಳು. ಹುಟ್ಟಿದಂದು ಚಂದನಚೂರ್ಣ ಚಿಮುಕಿಸಿದಂತಹ ಶರೀರವಿದ್ದುದರಿಂದ, ಅವಳಿಗೆ ಸ್ಪೃಶತೀ ಎಂದು ನಾಮಕರಣ ಮಾಡಿದರು. ಅವಳು ಮಹಾಪರಿವಾರದೊಡನೆ ಬೆಳೆದು ಹದಿನಾರರ ವೇಳೆಗೆ ಉತ್ತಮ ರೂಪವತಿಯಾದಳು. ಅವಳನ್ನು ಜೇತುತ್ತರ ನಗರದ ಶಿಬಿ ಮಹಾರಾಜನು ತನ್ನ ಮಗನಾದ ಸಂಜಯ ಕುಮಾರನಿಗೆ ತಂದುಕೊಂಡು, ಅವನಿಗೆ ಕೊಡೆಯನ್ನು ಎತ್ತಿಸಿ, ಅವಳನ್ನು ಹದಿನಾರು ಸಾವಿರ ಸ್ತ್ರೀಯರಿಗೆ ಹಿರಿಯಳನ್ನಾಗಿ ಮಾಡಿ ಅಗ್ರಮಹಿಷಿಯ ಸ್ಥಾನದಲ್ಲಿರಿಸಿದನು.

ಹೀಗೆ ಅವಳು ಸ್ವರ್ಗದಿಂದ ಚ್ಯುತಳಾಗಿ, ಕ್ಷತ್ರಿಯಕುಲದಲ್ಲಿ ಹುಟ್ಟಿ, ಶಿಬಿರಾಷ್ಟ್ರದ ಜೇತುತ್ತರನಗರದಲ್ಲಿ ಸಂಜಯನನ್ನು ಸೇರಿದಳು. ಅವಳು ಸಂಜಯನಿಗೆ ಪ್ರಿಯೆಯಾದಳು, ಬೇಕಾದವಳಾದಳು.

## ಕುಮಾರ ವಿಶ್ವಂತರ

ಶಕ್ರನು ಸ್ಪೃಶತೀದೇವಿಯನ್ನು ಗಮನಿಸಿ "ನಾನು ಇವಳಿಗೆ ಕೊಟ್ಟ ವರಗಳಲ್ಲಿ ಒಂಬತ್ತು ವರ ತುಂಬಿತು. ಒಳ್ಳೆಯ ಮಗನಾಗಬೇಕೆಂಬ ಇನ್ನೊಂದು ವರ ತುಂಬಿಲ್ಲ. ಅದನ್ನೂ ಕೈಗೂಡಿಸುವೆನು" ಎಂದು ಚಿಂತಿಸಿದನು. ಆ ಕಾಲದಲ್ಲಿ ಮಹಾಸತ್ತ್ವನು ತ್ರಯಸ್ತ್ರಿಂಶಸ್ ದೇವಲೋಕದಲ್ಲಿ ವಾಸಿಸುತ್ತಿದ್ದನು. ಅವನ ಆಯುಸ್ಸು ಕ್ಷಯಿಸುತ್ತ ಬಂದಿತ್ತು. ಶಕ್ರನು ಅದನ್ನು ತಿಳಿದು, ಅವನ ಬಳಿ ಹೋಗಿ "ಮಾರಿಷ, ನೀನು ಮನುಷ್ಯಲೋಕಕ್ಕೆ ಹೋಗುವುದು ತಕ್ಕುದು. ಅಲ್ಲಿ ಶಿಬಿರಾಜನ ಅಗ್ರಮಹಿಷಿಯಾದ ಸ್ಪೃಶತಿಯ ಹೊಟ್ಟೆಯಲ್ಲಿ ಜನ್ಮ ತಾಳುವುದು ತಕ್ಕುದು" ಎಂದು ಅವನಿಂದಲೂ ಅವನಂತೆಯೇ ಅಲ್ಲಿಂದ ಚ್ಯುತಿ ಹೊಂದುವ ಇತರ ಆರುಸಾವಿರ ದೇವತೆಗಳಿಂದಲೂ ಪ್ರತಿಜ್ಞೆಯನ್ನು ಕೊಂಡು ಸ್ವಸ್ಥಾನಕ್ಕೆ ಹೋದನು.

ಮಹಾಸತ್ತ್ವನು ಅಲ್ಲಿ ಚ್ಯುತಿಹೊಂದಿ ಶಿಬಿರಾಜನ ಮನೆಯಲ್ಲಿ ಜನ್ಮತಾಳಿದನು. ಉಳಿದ ದೇವಪುತ್ರರೂ ಆರುಸಾವಿರ ಅಮಾತ್ಯರ ಮನೆಗಳಲ್ಲಿ ಜನಿಸಿದರು. ಮಹಾಸತ್ತ್ವನು ತಾಯಿಯ ಗರ್ಭಕ್ಕೆ ಬಂದಾಗ ಸ್ಪೃಶತೀದೇವಿಗೆ ಬಯಕೆಯಾಯಿತು. ನಾಲ್ಕು ನಗರದ್ವಾರಗಳಲ್ಲೂ ನಗರಮಧ್ಯದಲ್ಲೂ ತನ್ನ ಮನೆಬಾಗಿಲಿನಲ್ಲೂ ಒಟ್ಟು ಆರು ದಾನಶಾಲೆ ಗಳನ್ನು ಮಾಡಿಸಿ, ದಿವಸಕ್ಕೆ ಆರುನೂರುಸಾವಿರಗಳನ್ನು ದಾನಮಾಡುವ ಮನಸ್ಸು ಅವಳಿಗೆ ಆಯಿತು. ರಾಜನು ಅವಳ ಬಯಕೆಯನ್ನು ಕೇಳಿ, ನೈಮಿತ್ತಿಕರನ್ನು ಪ್ರಶ್ನಿಸಿ, "ಮಹಾರಾಜ, ದಾನ ಕೊಡುವದರಲ್ಲಿಯೇ ಬಹುವಾಗಿ ಸಂತೋಷಪಡುವ ಮಹಾಸತ್ತ್ವನು ದೇವಿಯ ಗರ್ಭದಲ್ಲಿ ಜನ್ಮ ತಾಳಿರುವನು. ಆತನಿಗೆ ದಾನದಲ್ಲಿ ತೃಪ್ತಿಯೆಂಬುದೆ ಇಲ್ಲ" ಎಂದು ಅವರು ಹೇಳಿದುದನ್ನು ಕೇಳಿ, ಸಂತುಷ್ಟನಾಗಿ ಆಕೆ ಹೇಳಿದ ಪ್ರಕಾರ ದಾನಗಳನ್ನೂ ನಡೆಸಿದನು.

ಬೋಧಿಸತ್ತ್ವನು ಗರ್ಭಕ್ಕೆ ಅವತರಿಸಿದ ಕಾಲದಿಂದ ರಾಜನ ಆದಾಯಕ್ಕೆ ಅಳತೆಯಿಲ್ಲವಾಯಿತು. ಅವನ ಪುಣ್ಯದ ಪ್ರಭಾವದಿಂದ ಸಕಲ ಜಂಬೂದ್ವೀಪದ ರಾಜರೂ ಗೌರವದಿಂದ ಅನೇಕ ವಸ್ತುಗಳನ್ನು ಅವನಿಗೆ ಕಳುಹಿಸುತ್ತಿದ್ದರು.

ದೇವಿಯು ಗರ್ಭ ಧರಿಸಿ ಹತ್ತು ತಿಂಗಳು ತುಂಬಿದ ಮೇಲೆ, ನಗರವನ್ನು ಕಾಣಬೇಕೆಂದು ಬಯಸಿ ರಾಜನಿಗೆ ತಿಳಿಸಿದಳು. ರಾಜನು ನಗರವನ್ನು ದೇವನಗರದಂತೆ ಅಲಂಕಾರಮಾಡಿಸಿ, ದೇವಿಯನ್ನು ಉತ್ತಮ ರಥದಲ್ಲಿ ಏರಿಸಿ, ನಗರದ ಸುತ್ತ ತಿರುಗಾಡಿಸಿದನು. ವೈಶ್ಯರ ಬೀದಿಯ ನಡುವನ್ನು ಸೇರುವ ಕಾಲದಲ್ಲಿ ಆಕೆಗೆ ಪ್ರಸವವೇದನೆಯುಂಟಾಯಿತು. ರಾಜನಿಗೆ ತಿಳಿಸಿದರು. ಅವನು ವೈಶ್ಯರ ಬೀದಿಯಲ್ಲಿಯೇ ಸೂತಿಗೃಹವನ್ನು ಮಾಡಿಸಿದನು. ಅವಳು ಅಲ್ಲಿ ಮಗನನ್ನು ಹೆತ್ತಳು. ಮಹಾಸತ್ತ್ವನು ತಾಯ ಹೊಟ್ಟೆಯಿಂದ ಹೊರಬರುವಾಗ ಶುದ್ಧನಾಗಿ ಅರಳಿದ ಕಣ್ಣು ಗಳೊಡನೆ ಹೊರಗೆ ಬಂದನು. ಬಂದೊಡನೆ ತಾಯಿಯ ಕಡೆ ಕೈನೀಡಿ "ಅಮ್ಮ, ದಾನ ಕೊಡುವೆನು. ಏನಾದರೂ ಉಂಟೆ?" ಎಂದನು. ಆಗ ಅವಳು "ಕಂದ, ಬೇಕಾದಂತೆ ದಾನಕೊಡು" ಎಂದು ಅವನ ನೀಡಿದ

ಕೈಯಲ್ಲಿ ಸಾವಿರದ ಚೀಲವನ್ನಿಟ್ಟಳು. ಮಹಾಸತ್ತ್ವನು ವೈಶ್ಯವೀಥಿಯಲ್ಲಿ ಹುಟ್ಟಿದುದರಿಂದ ಅವನ ನಾಮಕರಣದಿವಸ ಅವನಿಗೆ ವೈಶ್ಯಾಂತರ* ನೆಂದು ಹೆಸರಿಟ್ಟರು.

ಮಹಾಸತ್ತ್ವನು ಹುಟ್ಟಿದ ದಿವಸವೇ ಗಗನದಲ್ಲಿ ಸಂಚರಿಸುವ ಒಂದು ಆನೆಯು ಮಂಗಲಲಕ್ಷಣಗಳುಳ್ಳ ಒಂದು ಅಚ್ಚಬಿಳಿಯ ಆನೆ ಮರಿಯನ್ನು ಕರೆತಂದು ಪಟ್ಟದಾನೆಯ ಸ್ಥಾನದಲ್ಲಿಟ್ಟು ಹೋಯಿತು. ಅದು ಮಹಾಸತ್ತ್ವನಿಗೋಸ್ಕರವಾಗಿಯೇ ಬಂದುದರಿಂದ ಅದಕ್ಕೆ 'ಪ್ರತ್ಯಯ'ವೆಂದು ಹೆಸರಿಟ್ಟರು.

ರಾಜನು ಮಹಾಸತ್ತ್ವನಿಗೋಸ್ಕರ ದೋಷಗಳಿಲ್ಲದೆ ಸಿಹಿಯಾದ ಹಾಲಿರುವ ಅರುವತ್ತುನಾಲ್ವರು ದಾದಿಯರನ್ನು ಇರಿಸಿದನು. ಅವನೊಡನೆ ಜನ್ಮತಾಳಿದ ಆರುಸಾವಿರ ಮಕ್ಕಳಿಗೂ ದಾದಿಯರನ್ನು ಇರಿಸಿದನು. ಅವನು ಆರುಸಾವಿರ ಮಕ್ಕಳ ಮಹಾಪರಿವಾರದೊಡನೆ ಬೆಳೆಯುತ್ತಿದ್ದನು. ರಾಜನು ಅವನಿಗೆ ನೂರುಸಾವಿರ ಬೆಲೆಬಾಳುವ ಕುಮಾರಾಭರಣವನ್ನು ಮಾಡಿಸಿದ್ದನು. ಕುಮಾರನು ತನ್ನ ನಾಲ್ಕು ಐದನೆಯ ವರ್ಷಕಾಲದಲ್ಲಿ ಅವುಗಳನ್ನು ಕಳಚಿ ತನ್ನ ದಾದಿಯರಿಗೆ ಕೊಟ್ಟನು. ಅವರು ಪುನಃ ಕೊಟ್ಟರೂ ಕೊಳ್ಳಲಿಲ್ಲ. ಅವರು ಆ ನಡತೆಯನ್ನು ರಾಜನಿಗೆ ತಿಳಿಸಿದರು. ರಾಜನು "ನನ್ನ ಮಗನು ಕೊಟ್ಟ ದಾನ ಒಳ್ಳೆಯ ದಾನ, ಉತ್ತಮವಾದ ದಾನ" ಎಂದು, ಬೇರೆ ಆಭರಣಗಳನ್ನು ಮಾಡಿಸಿದನು. ಕುಮಾರನು ಅವುಗಳನ್ನೂ ದಾದಿಯರಿಗೆ ದಾನಮಾಡಿದನು. ಕಿರಿಯಂದಿನಲ್ಲಿ ಹೀಗೆಯೇ ಒಂಬತ್ತು ಬಾರಿ ತನ್ನ ಆಭರಣಗಳನ್ನು ದಾನಮಾಡಿದನು.

ಎಂಟು ವರ್ಷ ವಯಸ್ಸಾದಾಗ ಕುಮಾರನು ಒಮ್ಮೆ ಹಾಸಿಗೆಯಲ್ಲಿ ಮಲಗಿ "ನಾನು ನನ್ನಿಂದ ಹೊರಗಾದ ವಸ್ತುಗಳನ್ನೇ ದಾನಕೊಡು ತ್ತಿದ್ದೇನೆ. ಇದರಿಂದ ನನಗೆ ತೃಪ್ತಿಯಿಲ್ಲ. ನನ್ನದೇ ಆದುದನ್ನು ನಾನು ಕೊಡಬಯಸುವೆನು. ಯಾರಾದರೂ ನನ್ನ ಹೃದಯವನ್ನು ಬೇಡಿದರೆ, ಎದೆಯನ್ನು ಸೀಳಿ ಹೃದಯವನ್ನು ಹೊರಗೆ ತೆಗೆದು ಕೊಡುವೆನು. ಕಣ್ಣ

*ಇವನಿಗೆ ವಿಶ್ವಂತರನೆಂದೂ ನಾಮಾಂತರವುಂಟು. ಇದನ್ನೆ ಮುಂದೆ ಬಳಸಿದೆ.

ಗಳನ್ನು ಬೇಡಿದರೆ, ಕಣ್ಣುಗಳನ್ನು ಕಿತ್ತು ಕೊಡುವೆನು. ಶರೀರಮಾಂಸವನ್ನು ಬೇಡಿದರೆ, ಸಕಲಶರೀರದಿಂದ ಮಾಂಸವನ್ನು ಕತ್ತರಿಸಿ ಕೊಡುವೆನು" ಎಂದು ಚಿಂತಿಸಿದನು.

ಅವನು ಹೀಗೆ ಸಹಜವಾಗಿ ಸರಸಚಿತ್ತದಿಂದ ಚಿಂತಿಸುತ್ತಿರಲು ಈ ಮಹಾಪೃಥ್ವಿ ಮದಿಸಿದ ಆನೆಯಂತೆ ಗರ್ಜಿಸುತ್ತ ನಡನಡುಗಿತು. ಪರ್ವತರಾಜನಾದ ಸುಮೇರು ನೆನೆಸಿದ ಬೆತ್ತದ ಕುಡಿಯಂತೆ ಬಗ್ಗಿ ಕುಣಿಯುವುದೋ ಎಂಬಹಾಗೆ ಜೇತುತ್ತರನಗರದ ಕಡೆ ಮುಖ ತಿರುಗಿಸಿ ನಿಂತಿತು. ನೆಲ ನಡುಗಿದ ಶಬ್ದಕ್ಕೆ ಆಕಾಶ ಗುಡುಗಿ ಕ್ಷಣಕಾಲ ಮಳೆ ಸುರಿಯಿತು. ಮಿಂಚು ಹೊಳೆಯಿತು. ಸಾಗರ ಕದಡಾಯಿತು. ದೇವ ರಾಜನಾದ ಶಕ್ರನು ತೋಳು ತಟ್ಟಿದನು. ಮಹಾ ಬ್ರಹ್ಮನು "ಭಲೆ! ಭಲೆ!" ಎಂದನು. ಬ್ರಹ್ಮಲೋಕದವರೆಗೂ ಏಕ ಕೋಲಾಹಲವಾಯಿತು.

ಹದಿನಾರು ವರ್ಷದ ವೇಳೆಗೆ ಬೋಧಿಸತ್ವನು ಎಲ್ಲ ವಿದ್ಯೆಗಳಲ್ಲೂ ಪಾರಂಗತನಾದನು. ತಂದೆಯು ಅವನಿಗೆ ರಾಜ್ಯವನ್ನು ಕೊಡಬಯಸಿ, ತಾಯಿಯೊಡನೆ ಆಲೋಚನೆಮಾಡಿ, ಮದ್ರರಾಜಕುಲದಿಂದ ತನ್ನ ಮಾವನ ಮಗಳಾದ ಮಾದ್ರಿಯೆಂಬವಳನ್ನು ಕರೆತಂದು, ಹದಿನಾರುಸಾವಿರ ಸ್ತ್ರೀಯರಿಗೆ ಹಿರಿಯರಾಣಿ ಮಾಡಿ, ಮಹಾಸತ್ವನಿಗೆ ರಾಜ್ಯಾಭಿಷೇಕ ಮಾಡಿದನು. ಮಹಾಸತ್ವನು ರಾಜ್ಯದಲ್ಲಿ ಪ್ರತಿಷ್ಠಿತನಾದ ಕಾಲದಿಂದ ದಿನವೂ ಆರುನೂರುಸಾವಿರಗಳನ್ನು ಕೊಡುತ್ತ ಮಹಾದಾನವನ್ನು ನಡೆಸುತ್ತಿದ್ದನು.

ಕೆಲವು ಕಾಲದನಂತರ ಮಾದ್ರೀದೇವಿ ಮಗನನ್ನು ಹೆತ್ತಳು. ಅವನಿಗೆ ಕಾಂಚನಜಾಲದ ಹೊದಿಕೆ ಹೊದಿಸಿದರು. ಅದರಿಂದ ಅವನಿಗೆ ಜಾಲಿಕುಮಾರನೆಂದೇ ಹೆಸರಿಟ್ಟರು. ಅವನು ಹೆಜ್ಜೆಯಿಡುವ ವೇಳೆಗೆ ಮಾದ್ರೀದೇವಿ ಮಗಳನ್ನು ಹೆತ್ತಳು. ಅವಳಿಗೆ ಕೃಷ್ಣಾಜಿನ ಹೊದಿಸಿದುದರಿಂದ ಕೃಷ್ಣಾಜಿನೆಯೆಂದೇ ಅವಳಿಗೆ ಹೆಸರಾಯಿತು.

ಮಹಾಸತ್ವನು ತಿಂಗಳಿಗೆ ಆರು ಸಲ ಅಲಂಕರಿಸಿದ ಆನೆಯ ಮೇಲೇರಿ ಆರು ದಾನಶಾಲೆಗಳನ್ನೂ ಅವಲೋಕಿಸುತ್ತಿದ್ದನು.

## ವಿಶ್ವಂತರನ ಆನೆಯ ದಾನ

ಆಗ ಕಾಳಿಂಗರಾಷ್ಟ್ರದಲ್ಲಿ ಮಳೆ ಬೀಳಲಿಲ್ಲ. ಸಸ್ಯಗಳು ಮೊಳೆಯಲಿಲ್ಲ. ಮಹಾಕ್ಷಾಮ ತೊಡಗಿತು. ಮನುಷ್ಯರು ಜೀವಿಸಲಾರದೆ ಕಳ್ಳತನ ಮಾಡತೊಡಗಿದರು. ದುರ್ಭಿಕ್ಷೆಯಿಂದ ಪೀಡಿತರಾದ ಜನರೆಲ್ಲರೂ ರಾಜಾಂಗಣದಲ್ಲಿ ಒಟ್ಟುಗೂಡಿ ದೂರು ಹೇಳಿಕೊಂಡರು. ರಾಜನು ಅದನ್ನು ಕೇಳಿ, 'ಏನಪ್ಪದಿರ?' ಎಂದೆನ್ನಲು, ಅವರು ಇದ್ದುದನ್ನು ತಿಳಿಸಿದರು. ರಾಜನು 'ಒಳ್ಳೆಯದಪ್ಪ, ಮಳೆ ಹುಯಿಸುವೆನು' ಎಂದು ಅವರನ್ನು ಕಳುಹಿಸಿ, ಪಂಚಶೀಲಗಳನ್ನು ಕೈಕೊಂಡು ಉಪವಾಸ ಮಾಡಿದನು, ಆದರೂ ಮಳೆ ಹುಯ್ಯಲಿಲ್ಲ. ಅವನು ನಗರದವರನ್ನೆಲ್ಲ ಕರೆದು 'ನಾನು ಶೀಲಗಳನ್ನು ಕೈಕೊಂಡು ಏಳು ದಿವಸ ಉಪವಾಸ ಮಾಡಿದರೂ ಮಳೆ ಹುಯ್ಯಲಿಲ್ಲ. ಏನು ಮಾಡತಕ್ಕದು?' ಎಂದು ಪ್ರಶ್ನಿಸಿದನು. ಜನರು 'ದೇವ, ನೀನು ಮಳೆ ಹುಯಿಸಲಾರೆಯಾದರೆ ಹೀಗೆ ಮಾಡು. ಜೇತುತ್ತರನಗರದಲ್ಲಿರುವ ಸಂಜಯರಾಜಪುತ್ರನಾದ ವಿಶ್ವಂತರನಿಗೆ ದಾನದಲ್ಲಿ ಬಹು ಪ್ರೀತಿ. ಅವನ ಬಳಿ ಅಚ್ಚಬಿಳಿಯ ಪಟ್ಟದಾನೆಯಿದೆ. ಅದು ಹೋದ ಕಡೆಯಲ್ಲೆಲ್ಲ ಮಳೆ ಬೀಳುತ್ತದೆ. ಬ್ರಾಹ್ಮಣರನ್ನು ಕಳುಹಿಸಿ ಆ ಆನೆಯನ್ನು ಬೇಡಿಸಿ ತರಿಸು' ಎಂದರು. ರಾಜನು ಒಳ್ಳೆಯದೆಂದು ಅವರ ಮಾತಿಗೆ ಸಮ್ಮತಿಸಿ, ಬ್ರಾಹ್ಮಣರನ್ನೆಲ್ಲ ಕರೆದು, ಅವರಲ್ಲಿ ಎಂಟು ಜನರನ್ನು ಆರಿಸಿ, ಅವರ ವೆಚ್ಚಕ್ಕೆ ಕೊಟ್ಟು, 'ಹೋಗಿ. ವಿಶ್ವಂತರನ ಆನೆಯನ್ನು ಬೇಡಿ ತನ್ನಿ' ಎಂದು ಕಳುಹಿಸಿದನು.

ಆ ಬ್ರಾಹ್ಮಣರು ಕ್ರಮವಾಗಿ ಜೇತುತ್ತರನಗರಕ್ಕೆ ಹೋಗಿ, ದಾನಶಾಲೆಯಲ್ಲಿ ಕೊಟ್ಟ ದಾನವನ್ನುಂಡು, ತಮ್ಮ ಮೈಮೇಲೆ ದೂಳು ಚೆಲ್ಲಿಕೊಂಡು, ಕೆಸರು ಬಳಿದುಕೊಂಡು, ಹುಣ್ಣಿಮೆಯ ದಿನ ರಾಜನ ಆನೆಯನ್ನು ಬೇಡಬಯಸಿ ರಾಜನು ದಾನಶಾಲೆಗೆ ಬರುವ ವೇಳೆಯಲ್ಲಿ ನಗರದ ಪೂರ್ವದ ಬಾಗಿಲಿಗೆ ಬಂದರು. ರಾಜನು ದಾನಶಾಲೆಗಳನ್ನು ತಿರುಗಿನೋಡುವೆನೆಂದು ಬೆಳಗಿನ ವೇಳೆಯಲ್ಲಿಯೇ ಹದಿನಾರು ಗಂಧದ ನೀರಿನ ಕೊಡಗಳಿಂದ ಸ್ನಾನಮಾಡಿ, ಉಂಡು, ಅಲಂಕರಿಸಿಕೊಂಡು,

ಅಲಂಕಾರವಮಾಡಿದ ಆನೆಯ ಹೆಗಲಮೇಲೆ ಕುಳಿತು ಪೂರ್ವದ ಬಾಗಿಲಿಗೆ ಬಂದನು. ಬ್ರಾಹ್ಮಣರು ಅಲ್ಲಿ ಅವನನ್ನು ಕಾಣಲು ಅವಕಾಶ ಸಿಕ್ಕದೆ, ದಕ್ಷಿಣದ ಬಾಗಿಲಿಗೆ ಹೋಗಿ ಎತ್ತರವಾದ ಪ್ರದೇಶದಲ್ಲಿ ನಿಂತು, ರಾಜನು ಪೂರ್ವದ ಬಾಗಿಲಿನಲ್ಲಿ ದಾನವನ್ನು ನೋಡಿಕೊಂಡು ದಕ್ಷಿಣದ ಬಾಗಿಲಿಗೆ ಬರುವ ವೇಳೆಯಲ್ಲಿ ಕೈಗಳನ್ನು ಹರಡಿ 'ವಿಶ್ವಂತರನಿಗೆ ಜಯವಾಗಲಿ' ಎಂದರು.

ಮಹಾಸತ್ತ್ವನು ಆ ಬ್ರಾಹ್ಮಣರನ್ನು ಕಂಡು, ಆನೆಯನ್ನು ಅವರು ನಿಂತ ಬಳಿಗೆ ನಡೆಯಿಸಿ, ಆನೆಯ ಹೆಗಲಮೇಲೆ ಕುಳಿತಂತೆಯೇ 'ಬೆಳೆದ ಹುಲ್ಲಿನಂತಹ ಉಗುರು ಕೂದಲುಗಳನ್ನು ಹೊಂದಿ, ಹಲ್ಲಿನಲ್ಲಿ ಕೊಳೆ ತಾಳಿ, ತಲೆಯಲ್ಲಿ ದೂಳು ತಾಳಿ, ಬಲಗೈಯನ್ನು ಮೇಲೆತ್ತಿ, ನನ್ನನ್ನು ಏನು ಬೇಡುವಿರಿ, ಬ್ರಾಹ್ಮಣರೆ ?' ಎಂದು ಪ್ರಶ್ನಿಸಿದನು.

ಅದನ್ನು ಕೇಳಿ ಬ್ರಾಹ್ಮಣರು "ದೇವ, ಶಿಬಿರಾಷ್ಟ್ರವರ್ಧನ, ನಾವು ರತ್ನವನ್ನು ಬೇಡುವೆವು. ನೇಗಿಲಿನಂತೆ ದಂತವಿರುವ ಈ ಭಾರಹೊರುವ ಉತ್ತಮವಾದ ಆನೆಯನ್ನು ಕೊಡು" ಎಂದರು.

ಮಹಾಸತ್ತ್ವನು ಅವರ ಮಾತು ಕೇಳಿ "ನಾನು ತಲೆ ಮೊದಲಾಗಿ ನನ್ನದೇ ಆದವುಗಳನ್ನು ದಾನಕೊಡಲು ಬಯಸುವೆನು. ಇವರು ನನ್ನಿಂದ ಹೊರಗಾದವುಗಳನ್ನೇ ಯಾಚಿಸುವರು. ಇವರ ಮನೋರಥವನ್ನು ಪೂರೈಸುವೆನು" ಎಂದು ಚಿಂತಿಸಿ, "ಏರಲು ಯೋಗ್ಯವಾದ ಈ ಕೊಂಬಿನ ಮದದಾನೆಯನ್ನು, ಈ ಬ್ರಾಹ್ಮಣರು ಯಾಚಿಸುವುದನ್ನು ದೃಢಮನಸ್ಸಿನಿಂದ ಕೊಡುವೆನು" ಎಂದು, ತ್ಯಾಗದಲ್ಲಿಯೇ ಮನಸ್ಸುಳ್ಳವನಾದ ಆ ಶಿಬಿರಾಷ್ಟ್ರವರ್ಧನನು ಆನೆಯ ಹೆಗಲಿನಿಂದ ಇಳಿದು ಅದನ್ನು ಆ ಬ್ರಾಹ್ಮಣರಿಗೆ ದಾನಕೊಟ್ಟನು.

ಆ ಆನೆಯ ನಾಲ್ಕು ಕಾಲುಗಳ ಅಲಂಕಾರ ನಾನೂರುಸಾವಿರ ಬೆಲೆಬಾಳುವಂತಹದು. ಎರಡು ಪಕ್ಕಗಳ ಅಲಂಕಾರಕ್ಕೆ ಇನ್ನೂರು ಸಾವಿರ ಬೆಲೆ. ಕೆಳಹೊಟ್ಟೆಯ ಕಂಬಳಿಗೆ ನೂರುಸಾವಿರ. ಬೆನ್ನಿನ ಮುಕ್ತಾಜಾಲ, ಕಾಂಚನಜಾಲ, ಮಣಿಜಾಲಗಳೆಂಬ ಮೂರು ಜಾಲಗಳಿಗೆ

ಮುನ್ನೂರುಸಾವಿರ. ಎರಡು ಕಿವಿಗಳ ಅಲಂಕಾರಕ್ಕೆ ಇನ್ನೂರುಸಾವಿರ. ಬೆನ್ನಿನಲ್ಲಿ ಹಾಸಿದ ಕಂಬಳಿಗೆ ನೂರುಸಾವಿರ. ಕುಂಭಾಲಂಕಾರಕ್ಕೆ ನೂರುಸಾವಿರ. ಇನ್ನು ಮೂರು ಅಲಂಕಾರಕ್ಕೆ ಮುನ್ನೂರುಸಾವಿರ. ಕರ್ಣಾಲಂಕಾರ ಚೂಡಾಲಂಕಾರಗಳಿಗೆ ಇನ್ನೂರು ಸಾವಿರ. ಎರಡು ದಂತಗಳ ಅಲಂಕಾರಕ್ಕೆ ಇನ್ನೂರುಸಾವಿರ. ಸೊಂಡಿಲಿನ ಸ್ವಸ್ತಿಕಾಲಂಕಾರಕ್ಕೆ ನೂರುಸಾವಿರ. ಬಾಲದ ಅಲಂಕಾರಕ್ಕೆ ನೂರುಸಾವಿರ. ಉಳಿದ ಅನರ್ಘವಾದ ವಸ್ತುಗಳಿಗೂ ಮೈಯ ಮೇಲಿನ ಆಭರಣಗಳಿಗೂ ಇಪ್ಪತ್ತುನೂರುಸಾವಿರ. ಹತ್ತುವ ಏಣಿಗೆ ನೂರುಸಾವಿರ. ಆನೆಯ ಊಟದ ಗಡಿಗೆಗೆ ನೂರುಸಾವಿರ. ಇವುಗಳಲ್ಲದೆ ಛತ್ರದ ಮೇಲಿನ ಮಣಿ, ಮುಕ್ತಾಹಾರದಲ್ಲಿಯ ಮಣಿ, ಅಂಕುಶದಲ್ಲಿಯ ಮಣಿ, ಆನೆಯ ಕತ್ತಿನ ಮುಕ್ತಾಹಾರದಲ್ಲಿಯ ಮಣಿ, ಆನೆಯ ಕುಂಭದಲ್ಲಿಯ ಮಣಿ— ಎಂಬ ಆರು ಅನರ್ಘಗಳ ಜೊತೆಗೆ ಏಳನೆಯ ಅನರ್ಘವಾದ ಆನೆಯನ್ನೂ ವಿಶ್ವಂತರನು ಬ್ರಾಹ್ಮಣರಿಗೆ ಕೊಟ್ಟನು. ಇದರ ಜೊತೆಗೆ ಐನೂರು ಆನೆಯ ಪರಿಚಾರಕರನ್ನೂ ಮಾವುತರನ್ನೂ ಆನೆಕಾಯುವವರನ್ನೂ ದಾನಕೊಟ್ಟನು.

ಹೀಗೆ ವಿಶ್ವಂತರನು ಕೊಟ್ಟ ಮಹಾದಾನವನ್ನು ಕಂಡು ಎಲ್ಲರೂ ಬೆಚ್ಚಿ ಬೆದರಿದರು. ಎಲ್ಲರಿಗೂ ರೋಮಾಂಚವಾಯಿತು. ಭೂಮಿ ನಡನಡುಗಿತು. ಶಿಬಿರಾಷ್ಟ್ರವರ್ಧನನು ಆ ಆನೆಯನ್ನು ದಾನಕೊಟ್ಟಾಗ ಜೇತುತ್ತರನಗರವು ಕಲಕಿಹೋಯಿತು. ಊರಿನ ಜನರೆಲ್ಲ ಗುಂಪಾಗಿ ಸೇರಿದರು. ಮಹಾಕೋಲಾಹಲವಾಯಿತು.

ಬ್ರಾಹ್ಮಣರು ದಕ್ಷಿಣದ್ವಾರದ ಬಳಿ ಆನೆಯನ್ನು ಪಡೆದು, ಅದನ್ನು ಏರಿಕೊಂಡು ನಗರದ ನಡುವಣಿಂದ ಹೋದರು. ಮಹಾಜನರು ಅವರನ್ನು ಕಂಡು "ಬ್ರಾಹ್ಮಣರೆ, ನಮ್ಮ ಆನೆಯನ್ನು ಏರಿಕೊಂಡು ಎಲ್ಲಿಗೊಯ್ಯುತ್ತಿರುವಿರಿ?" ಎಂದು ಕೇಳಿದರು. ಅದಕ್ಕೆ ಅವರು "ವಿಶ್ವಂತರ ಮಹಾರಾಜನು ಈ ಆನೆಯನ್ನು ನಮಗೆ ದಾನಮಾಡಿದನು. ಅದನ್ನು ಕಟ್ಟಿಕೊಂಡು ನಿಮಗೇನು?" ಎಂದು ಕೈಗಳನ್ನು ವಿಕಾರಮಾಡಿ ಅವರನ್ನು ಅಣಕಿಸಿ, ನಗರದ ಉತ್ತರದ್ವಾರದಿಂದ ಹೊರಟುಹೋದರು.

## ಶಿಬಿಗಳ ಕ್ರೋಧ

ಬ್ರಾಹ್ಮಣರು ಆನೆಯನ್ನು ಕೊಂಡುಹೋದರು. ವಿಶ್ವಂತರನ ಆ ದಾನದಿಂದ ಜೇತುತ್ತರನಗರದವರ ಮನಸ್ಸು ಕಲಕಿಹೋಯಿತು. ಅವರೆಲ್ಲರೂ ಒಟ್ಟಾಗಿ ಸಂಜಯ ಮಹಾರಾಜನ ಹತ್ತಿರ ಬಂದರು. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಮಾಹುತರು, ಯೋಧರು, ರಥಿಕರು, ಪದಾತಿಗಳು ಎಲ್ಲರೂ ತಮ್ಮ ಆನೆ ಹೋದುದನ್ನು ಕಂಡು, ಸಂಜಯನ ಬಳಿ ಬಂದು "ದೇವ, ನಿನ್ನ ರಾಷ್ಟ್ರ ಧ್ವಂಸವಾಯಿತು. ರಾಷ್ಟ್ರವೆಲ್ಲವೂ ಪೂಜೆಮಾಡುತ್ತಿದ್ದ ನಮ್ಮ ಆನೆಯನ್ನು ನಿನ್ನ ಮಗ ವಿಶ್ವಂತರನು ಏಕೆ ದಾನಮಾಡಿದ? ನಮ್ಮ ಆನೆ ನೇಗಿಲಿನಂತಹ ಕೊಂಬಿನದು, ಏರಲು ಯೋಗ್ಯವಾದುದು. ಎಲ್ಲ ಯುದ್ಧಗಳಲ್ಲಿಯೂ ಗೆಲ್ಲುವಂತಹ ನಮ್ಮ ಅಚ್ಚ ಬಿಳಿಯ ಆನೆಯನ್ನು ನಿನ್ನ ಮಗನು ಏಕೆ ದಾನಮಾಡಿದ? ಶತ್ರುಗಳನ್ನು ಮರ್ದಿಸುವ ಉದ್ದ ಕೊಂಬಿನ ನಮ್ಮ ಮದದಾನೆ ಕೈಲಾಸದಂತೆ ಬಿಳುಪಾದುದು. ಹಳದಿ ಕಂಬಳಿ ಹೊದಿಸಿದ ಆ ಶ್ರೇಷ್ಠವಾದ ರಾಜವಾಹನವನ್ನು ನಿನ್ನ ಮಗ ಬ್ರಾಹ್ಮಣರಿಗೆ ದಾನಮಾಡಿದನು. ಅದರ ಜೊತೆಗೆ ಚಾಮರ, ಬಿಳಿಯ ಕೊಡೆ, ಹಾಸಿದ ವಸ್ತುಗಳು, ಆನೆಯವೈದ್ಯ, ಆನೆಯ ಕಾವಲಿನವರನ್ನೂ ಕೊಟ್ಟನು. ದಾನ ಕೊಡತಕ್ಕುದಾದರೆ ಬ್ರಾಹ್ಮಣರಿಗೆ ಅರ್ಹವಾದ ಅನ್ನ ಪಾನಗಳನ್ನೂ ವಸ್ತ್ರಪೀಠಗಳನ್ನೂ ಕೊಡಲಿ. ಶಿಬಿರಾಷ್ಟ್ರವರ್ಧನನಾದ ಸಂಜಯ, ನಿನ್ನ ವಂಶದಲ್ಲಿ ರಾಜನಾದ ನಿನ್ನ ಮಗ ವಿಶ್ವಂತರನು ಆನೆಯನ್ನು ಏಕೆ ದಾನ ಕೊಡುವನು? ನೀನು ಶಿಬಿಗಳ ಈ ಮಾತನ್ನು ನಡೆಸದಿದ್ದರೆ, ಶಿಬಿಗಳು ನಿನ್ನ ಮಗನೊಡನೆ ನಿನ್ನನ್ನೂ ಕೈವಶಪಡಿಸಿಕೊಳ್ಳುವರೆಂದು ತಿಳಿದುಕೊ" ಎಂದರು.

ರಾಜನು ಅವರ ಮಾತು ಕೇಳಿ "ಇವರು ವಿಶ್ವಂತರನನ್ನು ಕೊಲ್ಲ ಬಯಸುವರು" ಎಂದು ತಿಳಿದುಕೊಂಡು, "ಈ ಜನಪದ ನನಗೆ ಬೇಡ, ರಾಷ್ಟ್ರ ಬೇಕಾದರೂ ನಾಶವಾಗಲಿ. ಶಿಬಿಗಳ ಮಾತಿಗೋಸ್ಕರ ದೋಷವಿಲ್ಲದ ರಾಜಪುತ್ರನನ್ನು ಅವನ ರಾಷ್ಟ್ರದಿಂದ ಹೊರಗೋಡಿಸವೊಲ್ಲೆ. ಅವನು ನನ್ನ ಔರಸಪುತ್ರ, ನನ್ನ ಸ್ವಂತ ಮಗ. ನಾನು ಅವನನ್ನು ಶಿಕ್ಷಿಸುವುದಿಲ್ಲ. ಒಳ್ಳೆಯ ನಡೆವಳಿಕೆಯುಳ್ಳ ಅವನನ್ನು ಶಿಕ್ಷಿಸಿದರೆ ನನ್ನ

ಹೆಸರು ಹಾಳಾಗುವುದು, ಬಹು ಪಾಪವಾಗುವುದು. ಇಂತಹ ವಿಶ್ವಂತರನನ್ನು ನಾನು ಹೇಗೆ ಶಸ್ತ್ರದಿಂದ ಕೊಲ್ಲಲಿ ?" ಎಂದನು.

ಶಿಬಿಗಳು "ಅವನನ್ನು ದಂಡಿಸುವುದು ಬೇಡ. ಶಸ್ತ್ರವೂ ಬೇಡ, ಬಂಧನವೂ ಬೇಡ. ಅವನನ್ನು ರಾಷ್ಟ್ರದಿಂದ ಹೊರಗೆ ಕಳುಹಿಸು. ವಂಕ ಪರ್ವತದಲ್ಲಿ ವಾಸಮಾಡಲಿ" ಎಂದು ಹೇಳಿದರು.

ಸಂಜಯರಾಜನು "ಶಿಬಿಗಳು ಇದನ್ನು ಬಯಸುವುದಾದರೆ, ನಾನು ಅದಕ್ಕೆ ಎದುರು ಹೇಳುವುದಿಲ್ಲ. ಈ ರಾತ್ರಿ ಅವನು ಇಲ್ಲಿ ಇರಲಿ, ಬೇಕಾದುದನ್ನು ಅನುಭವಿಸಲಿ. ಈ ರಾತ್ರಿ ಮುಗಿದು ಬೆಳಗಾದ ಬಳಿಕ ಶಿಬಿಗಳೆಲ್ಲ ಸೇರಿ ಅವನನ್ನು ರಾಷ್ಟ್ರದಿಂದ ಹೊರಗಟ್ಟಲಿ" ಎಂದು ಕೇಳಿಕೊಂಡನು. ಅವರು 'ಒಂದು ರಾತ್ರಿ ಮಾತ್ರ ತಂಗಲಿ' ಎಂದು ರಾಜನ ಮಾತಿಗೆ ಒಪ್ಪಿದರು.

**ರಾಜಶಾಸನ**

ರಾಜನು ಅವರನ್ನು ಬೀಳ್ಕೊಟ್ಟು, ಮಗನಿಗೆ ಶಾಸನ ಕಳುಹಿಸುವುದಕ್ಕಾಗಿ ಒಬ್ಬ ಅಧಿಕಾರಿಯನ್ನು ಕರೆಯಿಸಿ, "ಅಯ್ಯ, ಬೇಗ ವಿಶ್ವಂತರನ ಬಳಿ ಹೋಗಿ, 'ದೇವ, ಶಿಬಿಗಳಿಗೆಲ್ಲ ನಿನ್ನ ಮೇಲೆ ಕ್ರೋಧವುಂಟಾಗಿದೆ. ಈ ರಾತ್ರಿ ಕಳೆದು ಬೆಳಗಾದ ಬಳಿಕ ಶಿಬಿಗಳೆಲ್ಲರೂ ಸೇರಿ ನಿನ್ನನ್ನು ರಾಷ್ಟ್ರದಿಂದ ಹೊರಗಟ್ಟುವರು' ಎಂದು ತಿಳಿಸು" ಎಂದನು.

ಆ ಅಧಿಕಾರಿಯು ಹಾಗೆಯೆ ಆಗಲೆಂದು ಒಪ್ಪಿದನು. ನೀರಿನಲ್ಲಿ ತಲೆಗೆ ಸ್ನಾನಮಾಡಿ, ಮಣಿಕುಂಡಲಗಳನ್ನು ತೊಟ್ಟು, ಅಲಂಕರಿಸಿದ ಆನೆಯ ಮೇಲೇರಿ ವಿಶ್ವಂತರನು ವಾಸಿಸುತ್ತಿದ್ದ ನಗರಭಾಗಕ್ಕೆ ಬಂದನು. ಬಂದು, ಅಮಾತ್ಯರ ಬಳಗದ ನಡುವೆ ದೇವೇಂದ್ರನಂತಿದ್ದ ಕುಮಾರನನ್ನು ಕಂಡು, ಕಣ್ಣೀರು ಸುರಿಸುತ್ತ "ದೇವ, ದುಃಖದ ಸುದ್ದಿ ತಿಳಿಸುವೆನು ; ನನ್ನ ಮೇಲೆ ಕೋಪಗೊಳ್ಳಬೇಡ. ನೀನು ನನ್ನ ಒಡೆಯ, ಮಹಾರಾಜ. ನಾನು ಬೇಡಿದುದನ್ನೆಲ್ಲ ನೀನು ಒದಗಿಸಿಕೊಟ್ಟಿರುವೆ. ನಿನಗೆ ನಾನು ದುಃಖದ ಸುದ್ದಿ ತಿಳಿಸುವೆನು. ಸೈರಿಸಬೇಕು" ಎಂದು ರಾಜಶಾಸನವನ್ನು ತಿಳಿಸಿದನು.

ಮಹಾಸತ್ತ್ವನು ಆ ಶಾಸನವನ್ನು ಕೇಳಿ "ಶಿಬಿಗಳಿಗೇಕೆ ನನ್ನ ಮೇಲೆ ಕ್ರೋಧ? ನಾನು ಏನು ಪಾಪಮಾಡಿದುದೂ ಕಾಣೆ. ಶಿಬಿಗಳು ನನ್ನನ್ನು ಏಕೆ ಓಡಿಸುವರು? ವಿವರಿಸು" ಎಂದನು.

"ನೀನು ಆನೆಯನ್ನು ದಾನಕೊಟ್ಟುದರಿಂದ ಶಿಬಿಗಳಿಗೆ ನಿನ್ನ ಮೇಲೆ ಕ್ರೋಧ. ಅದರಿಂದ ನಿನ್ನನ್ನು ಓಡಿಸುವರು" ಎಂದು ಆ ಅಧಿಕಾರಿಯೆಂದನು.

ಮಹಾಸತ್ತ್ವನು ಸಮಾಧಾನಚಿತ್ತನಾಗಿ "ನಾನು ಹೃದಯವನ್ನಾಗಲಿ ಕಣ್ಣನ್ನಾಗಲಿ ದಾನ ಕೊಡುವೆನು. ಹೀಗಿರುವಲ್ಲಿ ಹಣ, ಚಿನ್ನ, ಮುತ್ತು, ವೈಡೂರ್ಯ, ಮಣಿ ಮೊದಲಾದ ನನ್ನವಲ್ಲದರ ಗೊಡವೆ ನನಗೇಕೆ? ಯಾರಾದರೂ ಬೇಡಬಂದರೆ, ನನ್ನ ಬಲದೋಳನ್ನಾದರೂ ಹಿಂಜರಿಯದೆ ಕೊಡುವೆನು. ನನ್ನ ಮನಸ್ಸು ದಾನದಲ್ಲಿ ಸಂತೋಷಪಡುವುದು. ಬೇಕಾದರೆ ಶಿಬಿಗಳೆಲ್ಲರೂ ಸೇರಿ ನನ್ನನ್ನು ಹೊರಗಟ್ಟಲಿ, ಕೊಲ್ಲಲಿ; ನನ್ನನ್ನು ಏಳಾಗಿಯಾದರೂ ಸೀಳಲಿ, ನಾನು ದಾನವನ್ನು ನಿಲ್ಲಿಸವೊಲ್ಲೆ" ಎಂದನು.

ಆ ಅಧಿಕಾರಿಯು ಅವನು ಹೇಳಿದುದನ್ನುಕೇಳಿ, ರಾಜನೂ ನಗರದವರೂ ಹೇಳದಿದ್ದರೂ ತಾನೇ "ಕೊಂತಿಮಾರ ತೀರದಲ್ಲಿ, ಆರಂಜರಗಿರಿಯ ಬಳಿ, ಹೊರಗಟ್ಟಲ್ಪಟ್ಟವರು ಹೋಗುವಲ್ಲಿಗೆ ನೀನು ಹೋಗಬೇಕೆಂದು ರಾಜನೂ ನಗರದವರೂ ಹೇಳಿದರು" ಎಂದನು.

ಬೋಧಿಸತ್ತ್ವನು "ಒಳ್ಳೆಯದು. ದೋಷಮಾಡಿದವರು ಹೋಗುವ ಮಾರ್ಗದಿಂದ ನಾನು ಹೋಗುತ್ತೇನೆ. ನಗರದವರು ಬೇರೆ ಯಾವ ದ್ವೇಷದಿಂದಲೂ ನನ್ನನ್ನು ಹೊರಗಟ್ಟುತ್ತಿಲ್ಲ. ನಾನು ಆನೆಯನ್ನು ದಾನ ಮಾಡಿದುದರಿಂದ ಅಟ್ಟುತ್ತಿದ್ದಾರೆ. ಆದುದರಿಂದ ಸಪ್ತಶತಕವೆಂಬ ಮಹಾದಾನವನ್ನು ಕೊಡಲು ನಗರದವರು ನನಗೆ ಒಂದು ದಿವಸದ ಅವಕಾಶ ಕೊಡಲಿ. ನಾಳೆ ದಾನ ಕೊಟ್ಟು ಮೂರನೆಯ ದಿವಸ ನಾನು ಹೋಗುತ್ತೇನೆ" ಎಂದನು.

ಆ ಅಧಿಕಾರಿಯು "ಒಳ್ಳೆಯದು, ದೇವ. ನಗರದವರಿಗೆ ತಿಳಿಸುವೆನು" ಎಂದು ಹೇಳಿ ಹೊರಟನು.

ಮಹಾಸತ್ತ್ವನು ಅವನನ್ನು ಬೀಳ್ಕೊಟ್ಟು, ತನ್ನ ಸೈನ್ಯಗುಪ್ತನನ್ನು ಕರೆಕಳುಹಿ, "ನಾನು ನಾಳೆ ಸಪ್ತಶತಕವೆಂಬ ದಾನವನ್ನು ಕೊಡುತ್ತೇನೆ. ಏಳುನೂರು ಆನೆ, ಏಳುನೂರು ಕುದುರೆ, ಏಳುನೂರು ರಥ, ಏಳುನೂರು ಸ್ತ್ರೀ, ಏಳುನೂರು ಗೋವು, ಏಳುನೂರು ದಾಸರು, ಏಳುನೂರು ದಾಸಿಯರು— ಇಷ್ಟನ್ನು ಒದಗಿಸು. ನಾನಾ ಪ್ರಕಾರವಾದ ಅನ್ನಪಾನಾದಿಗಳನ್ನೂ ದಾನಕ್ಕೆ ಯೋಗ್ಯವಾದ ಉಳಿದೆಲ್ಲವನ್ನೂ ಸಿದ್ಧಗೊಳಿಸು" ಎಂದು ಸಪ್ತಶತಕ ಮಹಾದಾನವನ್ನು ಏರ್ಪಡಿಸಿ, ಅಮಾತ್ಯರನ್ನು ಬೀಳ್ಕೊಂಡು ಮಾದ್ರಿಯ ವಾಸಸ್ಥಾನಕ್ಕೆ ಹೋದನು.

## ಮಾದ್ರಿಯ ಮನಸ್ಸು

ವಿಶ್ವಂತರನು ಸರ್ವಾಂಗಶೋಭನೆಯಾದ ಮಾದ್ರೀದೇವಿಯನ್ನು ಕರೆದು, ಶ್ರೀಶಯನದ ಮೇಲೆ ಕುಳ್ಳಿರಿಸಿ, ಅವಳೊಡನೆ ಮಾತನಾಡುತ್ತ "ನಿನ್ನ ತಂದೆಯ ಮನೆಯಿಂದ ಹಣವನ್ನೂ ಚಿನ್ನವನ್ನೂ ಬಹು ಮುತ್ತು ವೈಡೂರ್ಯಗಳನ್ನೂ ತಂದಿರುವೆ. ನನ್ನಿಂದಲೂ ಪಡೆದಿರುವೆ. ಅವೆಲ್ಲವನ್ನೂ ನಿಧಿಯಾಗಿ ಇರಿಸು" ಎಂದನು.

ಮಾದ್ರಿಯು "ಎಲ್ಲಿ ನಿಧಿಯಾಗಿ ಇಡಲಿ, ದೇವ?" ಎಂದು ಕೇಳಿದಳು.

ವಿಶ್ವಂತರನು "ಮಾದ್ರಿ, ಯೋಗ್ಯರೂ ಶೀಲವಂತರೂ ಆದವರಿಗೆ ದಾನ ಕೊಡು. ಎಲ್ಲ ಪ್ರಾಣಿಗಳಿಗೂ ದಾನ ಕೊಡುವುದಕ್ಕಿಂತ ಮೇಲಾದ ಕಾರ್ಯವಿಲ್ಲ" ಎಂದನು.

ಮಾದ್ರಿಯು ಅವನ ಮಾತನ್ನು ಒಪ್ಪಿದಳು.

ಅನಂತರ ವಿಶ್ವಂತರನು ಅವಳಿಗೆ ಬುದ್ಧಿ ಹೇಳುತ್ತ, "ಮಾದ್ರಿ, ಮಕ್ಕಳಲ್ಲಿಯೂ ಅತ್ತೆಮಾವಂದಿರಲ್ಲಿಯೂ ದಯೆಯಿಡು. ನಿನ್ನ ಪತಿಯಾಗತಕ್ಕವನನ್ನು ಸತ್ಕರಿಸಿ ಸೇವಿಸು. ನಾನು ಅಗಲಿದ ಮೇಲೆ ನಿನ್ನ ಪತಿಯಾಗುವೆನೆಂದು ಯಾರೂ ಬರದಿದ್ದರೆ, ಬೇರೆ ಪತಿಯನ್ನು ಹುಡುಕು. ನಾನಿಲ್ಲದೆ ಕೃಶಳಾಗಬೇಡ" ಎಂದನು.

ಆಗ ಮಾದ್ರಿ "ವಿಶ್ವಂತರನೇಕೆ ಇಂತಹ ಮಾತನಾಡುವನು?" ಎಂದು ಚಿಂತಿಸಿ, "ಇಂತಹ ಅಯುಕ್ತವಾದ ಮಾತನ್ನು ಏಕೆ ಹೇಳುವೆ, ದೇವ?" ಎಂದು ಕೇಳಿದಳು.

ಅದಕ್ಕೆ ಮಹಾಸತ್ತ್ವನು "ಭದ್ರೆ, ನಾನು ಆನೆಯನ್ನು ದಾನ ಕೊಟ್ಟುದರಿಂದ ಶಿಬಿಗಳು ಕ್ರೋಧಗೊಂಡು ನನ್ನನ್ನು ರಾಷ್ಟ್ರದಿಂದ ಹೊರಗಟ್ಟುವರು. ನಾಳೆ ನಾನು ಸಪ್ತಶತಕ ಮಹಾದಾನವನ್ನು ಕೊಟ್ಟು, ಮೂರನೆಯ ದಿನ ನಗರದಿಂದ ಹೊರಟುಹೋಗುವೆನು. ಕ್ರೂರ ಮೃಗಗಳು ತುಂಬಿ ಘೋರವಾದ ಕಾಡಿಗೆ ನಾನು ಹೋಗುವೆನು. ಆ ಮಹಾವನದಲ್ಲಿ ಏಕಾಕಿಯಾಗಿ ನಾನು ವಾಸಿಸುವುದು ಸಂಶಯ" ಎಂದನು.

ಮಾದ್ರಿಯು "ಇಲ್ಲದ ಮಾತು ಹೇಳಬೇಡ. ಪಾಪ ನುಡಿಯ ಬೇಡ. ನೀನು ಏಕಾಕಿಯಾಗಿ ಹೋಗುವುದು ಧರ್ಮವಲ್ಲ, ಮಹಾರಾಜ. ನೀನು ಹೋಗುವಲ್ಲಿ ನಾನೂ ಹೋಗುವೆನು. ಮರಣವಾದರೆ ನಿನ್ನೊಡನೆ ಮರಣವಾಗಲಿ, ಜೀವಿತವಾದರೆ ನಿನ್ನೊಡನೆ ಜೀವಿತವಾಗಲಿ. ನೀನಿಲ್ಲದೆ ಬದುಕಿರುವುದಕ್ಕಿಂತ ನಿನ್ನೊಡನೆ ಮರಣವೇ ಮೇಲು. ನೀನಿಲ್ಲದೆ ಬದುಕುವುದಕ್ಕಿಂತ ಒಂದೇ ಉರಿಯ ಬೆಂಕಿಯಲ್ಲಿ ಸಾಯುವುದು ಮೇಲು. ಗಿರಿದುರ್ಗಗಳನ್ನೂ ತಗ್ಗುತಿಟ್ಟುಗಳನ್ನೂ ಜಯಿಸುತ್ತ, ಹೆಣ್ಣಾನೆಯು ಕೊಂಬಿನ ಕಾಡಾನೆಯನ್ನು ಹಿಂಬಾಲಿಸುವಂತೆ, ಮಕ್ಕಳನ್ನೂ ಕರೆದುಕೊಂಡು ನಾನು ನಿನ್ನನ್ನು ಅನುಸರಿಸುವೆನು. ನಿನಗೆ ಭಾರವಿಲ್ಲದಂತೆ ಬರುತ್ತೇನೆ. ನಾನು ನಿನಗೆ ಭಾರವಾಗುವುದಿಲ್ಲ, ವಿಶ್ವಂತರ" ಎಂದು ಹೇಳಿ, ಹಿಂದೆ ತಾನು ನೋಡಿದ್ದಳೋ ಎಂಬಂತೆ ಹಿಮವಂತ ಪ್ರದೇಶವನ್ನು ವರ್ಣಿಸತೊಡಗಿದಳು.

"ಮಂಜುಳವಾಗಿ ಪ್ರಿಯವಾಗಿ ನುಡಿಯುವ ಈ ಕುಮಾರರನ್ನು ಕಾಣುತ್ತಿದ್ದರೆ ಕಾಡಿನಲ್ಲಿ ರಾಜ್ಯದ ಸ್ಮರಣೆಯೇ ಬರುವುದಿಲ್ಲ. ಕಾಡಿನಲ್ಲಿ ಒಂದು ಮನೆಕಟ್ಟಿಕೊಂಡು, ಮನೆಯಮುಂದೆ ಈ ಮಕ್ಕಳು ಮಾಲೆಗಳನ್ನು ಧರಿಸಿಕೊಂಡು ಮಂಜುಳವಾಗಿ ಮಾತನಾಡುತ್ತ ಆಡುತ್ತಿದ್ದರೆ ರಾಜ್ಯದ ನೆನಪಾಗದು. ಏಕಾಕಿಯಾಗಿ ಕಾಡಿನಲ್ಲಿ ಅಲೆದಾಡುವ ಅರುವತ್ತು ವರುಷದ ಸಲಗವನ್ನು ಕಂಡಾಗ, ಆನೆಯ ಹಿಂಡು ಬಳಸಿದ ಅರುವತ್ತು

ವಯಸ್ಸಿನ ಆನೆಯ ಘೀಂಕಾರವನ್ನು ಕೇಳಿದಾಗ ರಾಜ್ಯವು ಮರೆತು ಹೋಗುವುದು. ಕಾಡಿನಲ್ಲಿ ಬೇಕುಬೇಕಾದ ಮೃಗಗಳು ಓಡಿಯಾಡುವುವು. ಜಿಂಕೆಗಳು ಚಿಗಿದಾಡುವುವು. ಕಿಂಪುರುಷರು ಗಾನಮಾಡುವರು, ನರ್ತಿಸುವರು. ಹೊಳೆಗಳು ಘೋಷಿಸುತ್ತ ಹರಿಯುವುವು. ಬೆಟ್ಟದ ಗುಹೆಗಳಲ್ಲಿ ಗೂಗೆಗಳು ಧ್ವನಿಮಾಡುವುವು. ಸಿಂಹ, ಹುಲಿ, ಖಡ್ಗಮೃಗ, ಕೋಣ ಮುಂತಾದ ಕಾಡುಮೃಗಗಳ ಕೂಗು ಕಿವಿಗೆ ಬೀಳುವುದು. ಬೆಟ್ಟದ ನೆತ್ತಿಯಲ್ಲಿ ಚಿತ್ರದ ಗರಿಗಳ ನವಿಲು ಕುಣಿಯುವುದು. ಅದರ ಸುತ್ತಲೂ ನೀಲಿಯಕತ್ತಿನ ತಲೆತುದಿಜುಟ್ಟಿನ ಹೆಣ್ಣುನವಿಲುಗಳು ಕುಣಿಯುವುವು. ಹೇಮಂತದಲ್ಲಿ ಹೂಬಿಟ್ಟ ಮರಗಳು ಸುವಾಸನೆ ಬೀರುವುವು, ಇಂದ್ರಗೋಪಕಗಳಿಂದ ನೆಲ ಹಸುರಾಗುವುದು. ಹೇಮಂತ ದಲ್ಲಿ ಕುಟಜ, ಬಿಂಬಜಾಲ, ರೋಮಪದ್ಮಕಗಳು ಅರಳಿ ಸುಗಂಧ ಬೀರುವುವು. ಹೇಮಂತದಲ್ಲಿ ವನವೆಲ್ಲ ಹೂ ಹೆರುವುದು, ಪದ್ಮಗಳು ಅರಳುವುವು. ಇವುಗಳನ್ನು ಕಂಡು ರಾಜ್ಯದ ಸ್ಮರಣೆಯೇ ಬರುವುದಿಲ್ಲ" ಎಂದು ಮಾದ್ರಿಯು ಹಿಮವಂತದಲ್ಲಿ ವಾಸಮಾಡಿದ್ದವಳಂತೆ ಹಿಮವಂತ ವನ್ನು ವರ್ಣಿಸಿದಳು.

## ಸ್ಪೃಶತೀದೇವಿಯ ಶೋಕ

ಅತ್ತ ಸ್ಪೃಶತೀದೇವಿ "ನನ್ನ ಮಗನಿಗೆ ಕಟುವಾದ ಶಾಸನ ವಾಯಿತು. ಅವನೇನು ಮಾಡಿಯಾನು? ಹೋಗಿ ನೋಡುವೆನು" ಎಂದು ಮುಚ್ಚಿದ ಗಾಡಿಯಲ್ಲಿ ಹೊರಟು, ಅಂತಃಪುರದ ಬಾಗಿಲಲ್ಲಿ ನಿಂತು, ಮಗಸೊಸೆಯರ ಮಾತನ್ನು ಕೇಳಿದಳು. ಕೇಳಿ, "ನಾನು ವಿಷ ಕುಡಿಯುವುದಾದರು ಮೇಲು, ಪ್ರಪಾತದಿಂದ ಬೀಳುವುದಾದರು ಲೇಸು, ನೇಣುಹಾಕಿಕೊಳ್ಳುವುದಾದರು ವಾಸಿ. ದೋಷವಿಲ್ಲದ ಕುಮಾರ ವಿಶ್ವಂತರನನ್ನು 'ಏಕೆ ಹೊರಗಟ್ಟುವರು? ವಿಶ್ವಂತರನು ಅಧ್ಯಯನ ಮಾಡುವವನು, ದಾನ ಕೊಡತಕ್ಕವನು, ಬೇಡಿದವರಿಗೆ ನೀಡತಕ್ಕವನು, ಜಿಪುಣತನವಿಲ್ಲದವನು, ಪ್ರತಿರಾಜರಿಂದ ಪೂಜೆಗೊಳ್ಳುವವನು, ಕೀರ್ತಿ ವಂತನಾದವನು. ಯಶಸ್ವಿಯಾದ ಇಂತಹ ನಿರ್ದೋಷಿಯನ್ನು ಏಕೆ

ಹೊರಗಟ್ಟುವರು ? ಕುಮಾರನು ತಾಯಿತಂದೆಯರಿಗೆ ನೆರವಾಗಿರುವವನು, ಕುಲದ ಹಿರಿಯರನ್ನು ಉಪಚರಿಸುವವನು. ಕುಮಾರನು ರಾಜನಿಗೆ ಹಿತ ನಾದವನು, ದೇವಿಗೆ ಇಷ್ಟನಾದವನು, ಜ್ಞಾತಿಗಳಿಗೂ ಸ್ನೇಹಿತರಿಗೂ ಬೇಕಾದವನು, ಸರ್ವರಾಷ್ಟ್ರಕ್ಕೆ ಪ್ರಿಯನಾದವನು. ಇಂತಹ ನಿರ್ದೋಷಿ ಯನ್ನು ಏಕೆ ಹೊರಗಟ್ಟುವರು ? " ಎಂದು, ಕೇಳಿದವರಿಗೆ ಕರುಣೆ ಹುಟ್ಟು ವಂತೆ ಗೋಳಾಡಿ, ಮಗನನ್ನೂ ಸೊಸೆಯನ್ನೂ ಸಂತೈಸಿ ರಾಜನ ಬಳಿಗೆ ಹೋದಳು.

ಸ್ಪೃಶತೀದೇವಿಯು ರಾಜನ ಬಳಿಗೆ ಹೋಗಿ "ನಿರ್ದೋಷಿಯನ್ನು ರಾಷ್ಟ್ರದಿಂದ ಹೊರಗೆ ಹಾಕಿದರೆ, ನಿನ್ನ ರಾಷ್ಟ್ರವು ಕಳಚಿ ನೆಲಕ್ಕೆ ಬಿದ್ದ ಸವಿಮಾವಿನಂತಾಗುವುದು. ನೀರಿಲ್ಲದ ಹಳ್ಳದಲ್ಲಿ ರೆಕ್ಕೆಯ ಬಲ ಹೋದ ಹಂಸವಿರುವಂತೆ, ನೀನು ಅಮಾತ್ಯರಿಂದಲೂದೂರನಾಗಿ ಒಬ್ಬನೇ ಸಂಕಟ ಪಡುವೆ. ನಿನ್ನ ಒಳ್ಳೆಯದನ್ನು ನೀನು ಕಳೆದುಕೊಳ್ಳಬೇಡ, ಮಹಾರಾಜ. ಶಿಬಿಗಳ ಮಾತಿಗೋಸ್ಕರ ಏನೂ ಅರಿಯದವನನ್ನು ಹೊರಗೆ ಅಟ್ಟಬೇಡ" ಎಂದು ಬೇಡಿಕೊಂಡಳು.

ಅದಕ್ಕೆ ರಾಜನು "ನಾನು ಧರ್ಮವನ್ನು ಪೂಜಿಸುತ್ತೇನೆ. ಆದ್ದ ರಿಂದ ನನಗೆ ಪ್ರಾಣಕ್ಕಿಂತಲೂ ಪ್ರಿಯನಾಗಿ ಶಿಬಿಗಳಿಗೆ ಧ್ವಜ ದಂತಿರುವ ನನ್ನ ಮಗನನ್ನು ರಾಜ್ಯದಿಂದ ಹೊರಗೆ ಅಟ್ಟುತ್ತೇನೆ" ಎಂದನು.

ದೇವಿಯು ಅದನ್ನು ಕೇಳಿ "ಅರಳಿದ ಕರ್ಣಿಕಾರಪುಷ್ಪಗಳ ವನದಂತೆ ಧ್ವಜಗಳೂ ಸೇನೆಗಳೂ ಸುತ್ತಿ ಸಂಚರಿಸುತ್ತಿದ್ದ ಕುಮಾರನು ಇಂದು ಒಂಟಿಯಾಗಿ ಹೋಗುವನು. ಇಂದ್ರಗೋಪದಂತಹ ಬಣ್ಣದ ಗಾಂಧಾರದ ಕಂಬಳಿಗಳು ಹಿಂದೆ ಅವನ ಸುತ್ತಲೂ ಕಾಣುತ್ತಿದ್ದವು ; ಅಂಥವನು ಇಂದು ಏಕಾಕಿಯಾಗಿ ಹೋಗುವನು. ಹಿಂದೆ ಆನೆ, ಪಲ್ಲಕ್ಕಿ, ತೇರುಗಳಲ್ಲಿ ಹೋಗುತ್ತಿದ್ದ ವಿಶ್ವಂತರನು ಈಗ ಕಾಲುನಡೆಯಲ್ಲಿ ಹೇಗೆ ಹೋದಾನು ? ಚಂದನವನ್ನು ಲೇಪಿಸಿಕೊಂಡು ನೃತ್ಯಗೀತಗಳಿಂದ ಎಚ್ಚರಗೊಳ್ಳುತ್ತಿದ್ದವನು ಒರಟಾದ ಜಿಂಕೆಯ ಚರ್ಮವನ್ನೂ ಕೊಡಲಿ

ಕಾವಡಿಗಳನ್ನೂ ಹೇಗೆ ಹೊತ್ತಾನು? ಕಾಡಿಗೆ ಹೋಗುವವರಿಗೆ ಕಾಷಾಯವಸ್ತ್ರಗಳನ್ನೂ ಕೃಷ್ಣಾಜಿನಗಳನ್ನೂ ಚೀರಗಳನ್ನೂ ಯಾರೂ ಏಕೆ ತರುವುದಿಲ್ಲ? ರಾಜನು ಚೀರವನ್ನು ಹೇಗೆ ಧರಿಸಿಯಾನು? ದರ್ಭೆಯ ಹುಲ್ಲಿನಿಂದ ಮಾಡಿದ ಚೀರವನ್ನು ಮಾದ್ರಿ ಹೇಗೆ ಧರಿಸಿಯಾಳು? ಕಾಶಿಯವಸ್ತ್ರಗಳನ್ನೂ ಕ್ಷೌಮಕೌಟುಂಬರಗಳನ್ನೂ ಬಳಸುತ್ತಿದ್ದ ಮಾದ್ರಿ ಕುಶಚೀರವನ್ನು ಹೇಗೆ ಬಳಸಿಯಾಳು? ವಾಹನಗಳ ಮೇಲೂ ಪಲ್ಲಕ್ಕಿಯಲ್ಲೂ ತೇರುಗಳಲ್ಲೂ ಹೋಗುತ್ತಿದ್ದ ಆ ಚೆಲುವೆ ಈಗ ಹೇಗೆ ದಾರಿಯಲ್ಲಿ ನಡೆದಾಳು? ಮಾದ್ರಿ ಸುಖದಲ್ಲಿ ಬೆಳೆದವಳು, ಮೃದುವಾದ ಕೈಕಾಲುಗಳುಳ್ಳವಳು. ಚಿನ್ನದ ಪಾದುಕೆ ಮೆಟ್ಟಿದರೂ ನೋಯುತ್ತಿದ್ದಳು. ಅವಳ ಸುತ್ತ ಯಾವಾಗಲೂ ಸಾವಿರಾರು ಸ್ತ್ರೀಯರ ಪರಿವಾರವಿರುತ್ತಿತ್ತು. ಅಂಥವಳು ಇಂದು ಹೇಗೆ ಏಕಾಕಿಯಾಗಿ ನಡೆದುಹೋದಾಳು? ಹಿಂದೆ ನರಿಯ ಕೂಗನ್ನು ಕೇಳಿದರೆ ಬೆದರುತ್ತಿದ್ದಳು. ಗೂಗೆ ಕೂಗಿದರೆ ಭಯಗೊಂಡು ದೆವ್ವ ಮೈಮೇಲೆ ಬಂದಂತೆ ನಡುಗುತ್ತಿದ್ದಳು. ಅಂಥವಳು ಇಂದು ಹೇಗೆ ಕಾಡಿಗೆ ಹೋದಾಳು? ಮರಿಗಳು ನಾಶವಾಗಿ ಶೂನ್ಯವಾದ ಗೂಡನ್ನು ಕಂಡ ಹಕ್ಕಿಯಂತೆ ನಾನು ಶೂನ್ಯವಾದ ಸ್ಥಳವನ್ನು ನೋಡಿ ಚಿರಕಾಲ ದುಃಖದಿಂದ ತಪಿಸುತ್ತೇನೆ. ನನ್ನ ಪ್ರಿಯ ಪುತ್ರನನ್ನು ಕಾಣದೆ ಕೃಶಳಾಗಿ ವಿವರ್ಣವಾಗುತ್ತೇನೆ. ನನ್ನ ಮಗನನ್ನು ಕಾಣದೆ ಅಲೆದಾಡುತ್ತೇನೆ. ಮರಿಗಳನ್ನು ಕಳೆದುಕೊಂಡ ಕುರರಪಕ್ಷಿಯಂತೆ, ನೀರಿಲ್ಲದ ಹಳ್ಳದಲ್ಲಿ ಸೇರಿದ ಚಕ್ರವಾಕದಂತೆ, ನಾನು ತಪಿಸುತ್ತೇನೆ, ಕೃಶಳಾಗುತ್ತೇನೆ, ವಿವರ್ಣವಾಗುತ್ತೇನೆ, ನನ್ನ ಮಗನನ್ನು ಕಾಣದೆ ಅಲೆದಾಡುತ್ತೇನೆ. ಮಹಾರಾಜ, ನನ್ನ ಈ ಗೋಳಾಟವನ್ನು ಕೇಳಿಯೂ ನೀನು ನಿರ್ದೋಷಿಯಾದ ಕುಮಾರನನ್ನು ರಾಷ್ಟ್ರದಿಂದ ಅಟ್ಟಿದರೆ, ನನ್ನ ಜೀವ ಕೊನೆಗಂಡಂತೆಯೇ ಸರಿ" ಎಂದಳು.

ಅವಳ ಪ್ರಲಾಪವನ್ನು ಕೇಳಿ ಅಂತಃಪುರದ ಶಿಬಿಕನ್ಯೆಯರೆಲ್ಲರೂ ಒಟ್ಟಾಗಿ ತೋಳುಗಳನ್ನು ನೀಡಿ ಹಲುಬಿದರು. ಅತ್ತ ವಿಶ್ವಂತರನ ಮನೆಯಲ್ಲಿ ಅವನ ಮಕ್ಕಳೂ ಹೆಂಡಿರೂ ಗಾಳಿಯು ನುಗ್ಗಿ ನುರಿಮಾಡಿದ ಶಾಲವೃಕ್ಷಗಳಂತೆ ನೆಲದ ಮೇಲೆ ಕೆಡೆದಿದ್ದರು.

## ಸಪ್ತಶತಕ ಮಹಾದಾನ

ರಾತ್ರಿ ಕಳೆಯಿತು, ಸೂರ್ಯೋದಯವಾಯಿತು. ವಿಶ್ವಂತರ ರಾಜನು ದಾನಕೊಡಲು ಉಪಕ್ರಮಿಸಿದನು. "ವಸ್ತ್ರ ಬೇಕೆಂದವರಿಗೆ ವಸ್ತ್ರಗಳನ್ನೂ ಕುಡಿಯಬೇಕೆಂದವರಿಗೆ ಕುಡಿಯತಕ್ಕುದನ್ನೂ ಕೊಡಿರಿ; ಊಟ ಬೇಡಿದವರಿಗೆ ಊಟ ನೀಡಿರಿ. ಬಂದ ಯಾಚಕರಾರನ್ನೂ ಅಟ್ಟ ಬೇಡಿರಿ. ಅನ್ನಪಾನಗಳಿಂದ ತೃಪ್ತಿಪಡಿಸಿರಿ. ಚೆನ್ನಾಗಿ ಪೂಜೆಗೊಂಡು ಹೋಗಲಿ" ಎಂದನು.

ಶಿಬಿರಾಷ್ಟ್ರವರ್ಧನನಾದ ಆ ಮಹಾರಾಜನು ಮನೆಬಿಟ್ಟು ತೆರಳುವ ಕಾಲದಲ್ಲಿ ಯಾಚಕರು ಮತ್ತರಾಗಿ ಆಟವಾಡುತ್ತ ಗುಂಪುಸೇರಿದರು. ನಿರ್ದೋಷಿಯಾದ ವಿಶ್ವಂತರನನ್ನು ರಾಷ್ಟ್ರದಿಂದ ಹೊರಗಟ್ಟಿ, ನಾನಾ ಫಲಗಳನ್ನು ಹೊತ್ತ ವೃಕ್ಷವನ್ನು ಕತ್ತರಿಸಿದರು. ಅವನನ್ನು ಹೊರಗಟ್ಟಿ, ಬೇಡಿದುದನ್ನು ಕೊಡುತ್ತಿದ್ದ ಮರವನ್ನು ಕತ್ತರಿಸಿದರು. ಶಿಬಿರಾಷ್ಟ್ರ ವರ್ಧನನು ಮನೆಬಿಟ್ಟು ಹೋಗುವಾಗ ಮುದುಕರೂ ಹುಡುಗರೂ ಮಧ್ಯವಯಸ್ಸಿನವರೂ ತೋಳು ನೀಡಿ ಗೋಳಾಡಿದರು. ಅರಮನೆ ಯವರೂ ಊರಿನ ಹೆಂಗುಸರೂ ಗೋಳಾಡಿದರು. ಬ್ರಾಹ್ಮಣರೂ ಶ್ರಮಣರೂ ಇತರ ಯಾಚಕರೂ "ಇದು ಅಧರ್ಮ" ಎಂದು ಹಲುಬಿದರು.

ವಿಶ್ವಂತರರಾಜನು ತನ್ನ ಮನೆಬಿಟ್ಟು ಹೋಗುವಾಗ ಮೈತುಂಬ ಚಿನ್ನದ ಒಡವೆಗಳಿಂದ ಅಲಂಕರಿಸಿದ ಏಳುನೂರು ಆನೆಗಳನ್ನೂ ಕೈಯಲ್ಲಿ ತೋಮರ ಅಂಕುಶಗಳನ್ನು ಹಿಡಿದ ಅಷ್ಟೇ ಮಂದಿ ಆರೋಹಕರನ್ನೂ ದಾನಮಾಡಿದನು. ಸರ್ವ ಅಲಂಕಾರಗಳನ್ನೂ ತಾಳಿದ ಏಳುನೂರು ಸಿಂಧೂದೇಶದ ವೇಗಶಾಲಿ ಜಾತ್ಯಶ್ವಗಳನ್ನೂ ಕೈಯಲ್ಲಿ ಕತ್ತಿ ಬಿಲ್ಲು ಗಳನ್ನು ಹಿಡಿದ ಸವಾರರನ್ನೂ ದಾನಮಾಡಿದನು. ಸನ್ನದ್ಧವಾಗಿ, ಧ್ವಜವನ್ನು ಹೊತ್ತು, ಹುಲಿ ಚಿರತೆಗಳ ಚರ್ಮ ಹಾಸಿದ ಏಳುನೂರು ರಥಗಳನ್ನೂ ಬಿಲ್ಲು ಹಿಡಿದು ಕವಚ ತೊಟ್ಟ ಸಾರಥಿಗಳನ್ನೂ ದಾನಮಾಡಿ ದನು. ಚಿನ್ನದ ಹಾರಗಳನ್ನೂ ಚಿನ್ನದ ಆಭರಣಗಳನ್ನೂ ಧರಿಸಿ, ಚಿನ್ನಾದ ಬಟ್ಟೆಯುಟ್ಟ ಏಳುನೂರು ಮಂದಿ ಸಣ್ಣನಡುವಿನ ನಗುಮುಖದ ವಿಶಾ ಲಾಕ್ಷಿಯರನ್ನು ಏಳುನೂರು ರಥಗಳಲ್ಲಿರಿಸಿ ದಾನಮಾಡಿದನು. ಹಾಲು

ಕರೆಯುವ ಬೆಳ್ಳಿಯಪಾತ್ರೆಗಳು ಸಹವಾಗಿ ಏಳುನೂರು ಹಸುಗಳನ್ನು ದಾನಮಾಡಿದನು. ದಾಸದಾಸಿಯರನ್ನೂ ಆನೆ ಕುದುರೆ ರಥಗಳನ್ನೂ ಅಲಂಕೃತ ನಾರಿಯರನ್ನೂ ಏಳುನೂರರ ಸಂಖ್ಯೆಯಿಂದ ದಾನ ಮಾಡಿದನು.

ಆ ದಾನವಾದಾಗ ಲೋಕ ಬೆಚ್ಚಿಬೆದರಿತು. ಲೋಕಕ್ಕೆ ರೋಮಾಂಚವಾಯಿತು. ವಿಶ್ವಂತರನು ಆ ಮಹಾದಾನಮಾಡಿ ಕೈಗಳನ್ನು ಮುಗಿದು ತನ್ನ ರಾಷ್ಟ್ರದಿಂದ ಹೊರಟಾಗ ಭೂಮಿ ನಡುಗಿತು.

## ಪತಿವ್ರತೆ ಮಾದ್ರಿ

ವಿಶ್ವಂತರನು ಕ್ಷತ್ರಿಯಕನ್ಯೆಯರೇ ಮೊದಲಾದುವನ್ನು ದಾನ ಮಾಡುವನೆಂದು ಒಂದು ದೇವತೆ ಸಕಲ ಜಂಬೂದ್ವೀಪದ ರಾಜರಿಗೂ ತಿಳಿಸಿತ್ತು. ಆ ದೇವತೆಯ ಪ್ರಭಾವದಿಂದ ಕ್ಷತ್ರಿಯರೆಲ್ಲರೂ ಒಂದು ರಥದಲ್ಲಿ ಬಂದು ಕ್ಷತ್ರಿಯಕನ್ಯೆಯರೇ ಮೊದಲಾದವನ್ನು ದಾನ ತೆಗೆದು ಕೊಂಡು ಹೋದರು. ಹೀಗೆಯೇ ಕ್ಷತ್ರಿಯ ಬ್ರಾಹ್ಮಣ ವೈಶ್ಯ ಶೂದ್ರರೆಲ್ಲರೂ ಅವನ ದಾನವನ್ನು ಪಡೆದು ಹೋದರು. ಅವನು ದಾನ ಕೊಡುತ್ತಿರುವಾಗಲೇ ಸಂಜೆಯಾಯಿತು. ಅವನು ಮೊದಲು ತನ್ನ ಮನೆಗೆ ಹೋಗಿ, 'ತಾಯಿತಂದೆಗೆ ವಂದಿಸಿ ನಾಳೆ ಹೋಗುವೆನು' ಎಂದು, ಅಲಂಕರಿಸಿದ ರಥದಲ್ಲಿ ತಾಯಿತಂದೆಯ ವಾಸಸ್ಥಾನಕ್ಕೆ ಹೋದನು. ಮಾದ್ರೀ ದೇವಿಯು "ನಾನೂ ಇವನೊಡನೆ ಹೋಗಿ ತಾಯಿತಂದೆಯ ಅಪ್ಪಣೆ ಪಡೆಯುವೆನು" ಎಂದು ಅವನೊಡನೆ ಹೋದಳು.

ಮಹಾಸತ್ತ್ವನು ತಂದೆಯಾದ ಸಂಜಯನನ್ನು ವಂದಿಸಿ, "ದೇವ, ನೀನು ನನ್ನನ್ನು ಕಳುಹಿಸುತ್ತೀಯೆ. ನಾನು ವಂಕಪರ್ವತಕ್ಕೆ ಹೋಗುತ್ತೇನೆ. ಮಹಾರಾಜ, ಆಸೆಗಳಿಗೆ ಮಿತಿಯಿಲ್ಲದವರು ಮರಣ ಹೊಂದುತ್ತಾರೆ. ನನ್ನ ನಗರದಲ್ಲಿ ಯಜಮಾನನಾದ ನಾನು ನನ್ನವರನ್ನು ಪೀಡಿಸಿದುದಕ್ಕಾಗಿ ಶಿಬಿಗಳ ಮಾತಿನಂತೆ ನನ್ನ ರಾಷ್ಟ್ರದಿಂದ ಹೊರಗೆ ಹೋಗುತ್ತೇನೆ. ಕಿರುಬಗಳು ತುಂಬಿದ ಕಾಡಿನಲ್ಲಿ ಆ ಪಾಪವನ್ನು ನೀಗುತ್ತೇನೆ. ನೀವು ಕಾಮುಗಳ ಕೊಳೆಯಲ್ಲಿ ಕುಳಿತಿದ್ದರೆ ನಾನು

ಪುಣ್ಯಗಳನ್ನು ಮಾಡುತ್ತೇನೆ” ಎಂದು ನುಡಿದು, ತಾಯ ಬಳಿ ಹೋಗಿ, ಅವಳಿಗೂ ಅದೇ ಮಾತು ತಿಳಿಸಿ, “ಅಮ್ಮ, ಮನೆಬಿಟ್ಟು ಹೀಗೆ ಕಾಡಿಗೆ ಹೋಗುವುದು ನನಗೆ ಇಷ್ಟ. ನನಗೆ ಅಪ್ಪಣೆ ಕೊಡು” ಎಂದು ಬೇಡಿದನು.

ಸ್ಪೃಶತೀದೇವಿ “ಅಪ್ಪಣೆ ಕೊಡುವೆನು, ಕಂದ. ನಿನಗೆ ಮಂಗಳ ವಾಗಲಿ. ಈ ಕಲ್ಯಾಣಿ ಮಾದ್ರಿ ಮಕ್ಕಳೊಡನೆ ಇಲ್ಲಿ ಇರಲಿ. ಕಾಡಿನಲ್ಲಿ ಅವಳೇನು ಮಾಡಿಯಾಳು ? ” ಎಂದಳು.

ಅದಕ್ಕೆ ವಿಶ್ವಂತರನು “ಅವಳ ಇಷ್ಟಕ್ಕೆ ವಿರುದ್ಧವಾಗಿ ಒಬ್ಬ ದಾಸಿಯನ್ನೂ ನಾನು ಕಾಡಿಗೆ ಒಯ್ಯಬಲ್ಲೆ. ಬೇಕಾದರೆ ಹಿಂದೆ ಬರಲಿ. ಬೇಡವಾದರೆ ಇಲ್ಲೆ ಇರಲಿ” ಎಂದನು.

ಮಗನು ಹೇಳಿದುದನ್ನು ಕೇಳಿ, ಮಹಾರಾಜನು “ಮಾದ್ರಿ, ಚಂದನವನ್ನು ಬಳಸುತ್ತಿದ್ದ ನೀನು ದೂಳು ಕೊಳೆ ತಾಳಬೇಡ. ಕಾಶಿಯ ವಸ್ತ್ರಗಳನ್ನು ಧರಿಸುತ್ತಿದ್ದವಳು ಕುಶಚೀರವನ್ನು ಧರಿಸಬೇಡ. ಅರಣ್ಯ ವಾಸ ಬಹು ದುಃಖ. ನೀನು ಹೋಗಬೇಡ, ಮಾದ್ರಿ ” ಎಂದು ಯಾಚಿಸಿದನು.

ಅದಕ್ಕೆ ಸರ್ವಾಂಗಶೋಭನೆಯಾದ ರಾಜಪುತ್ರಿ ಮಾದ್ರಿ “ನನ್ನ ವಿಶ್ವಂತರನಿಲ್ಲದೆ ನಾನು ಸುಖಪಡಲು ಬಯಸುವುದಿಲ್ಲ” ಎಂದಳು.

ಆಗ ಶಿಬಿರಾಷ್ಟ್ರವರ್ಧನನಾದ ಸಂಜಯ ಮಹಾರಾಜನು “ಕಾಡಿನ ಕಷ್ಟಗಳು ಏನೆಂಬುದನ್ನು ಹೇಳುವೆನು, ಕೇಳು, ಮಾದ್ರಿ. ಅಲ್ಲಿ ಸೊಳ್ಳೆಗಳು, ಚಿಟ್ಟೆಗಳು, ದುಂಬಿಗಳು, ಕೀಟಗಳು ಬಹಳ ಹಿಂಸೆಕೊಡುವುವು. ನದಿಗಳ ಬಳಿಯಲ್ಲಿ ಅಜಗರಗಳೆಂಬ ಸರ್ಪಗಳುಂಟು. ಅವುಗಳಿಗೆ ವಿಷವಿಲ್ಲ, ಬಲ ಬಲು ಹೆಚ್ಚು. ಮನುಷ್ಯರಾಗಲಿ ಮೃಗಗಳಾಗಲಿ ಅತಿಹತ್ತಿರ ಬಂದರೆ ಅವು ಅವುಗಳನ್ನು ತಮ್ಮ ಸುರುಳಿಗಳಲ್ಲಿ ಸಿಕ್ಕಿಸಿಕೊಂಡು ತಮ್ಮ ಬಿಲಕ್ಕೆ ಒಯ್ಯುವುವು. ಋಕ್ಷಗಳೆಂಬ ಕಪ್ಪುಕೂದಲಿನ ಮೃಗಗಳೂ ಅಲ್ಲಿವೆ. ಅವುಗಳ ಕಣ್ಣಿಗೆ ಬಿದ್ದ ಮನುಷ್ಯನು ಮರ ಹತ್ತಿ ಹೋದರೂ ಉಳಿಯುವಂತಿಲ್ಲ. ಶ್ರೋತುಂಬರಾನದಿಯ ತೀರದಲ್ಲಿ ಕಾಡುಕೋಣ

ಗಳಿವೆ. ಅವು ತಮ್ಮ ಕೊಂಬುಗಳ ತೀಕ್ಷ್ಣವಾದ ತುದಿಯಿಂದ ತೀವ್ರವಾಗಿ ಹೊಡೆಯುತ್ತವೆ. ಕಾಡಿನಲ್ಲಿ ಕಾಡುಹಸುಗಳ ಗುಂಪನ್ನು ಕಂಡು, ಕರುವನ್ನು ಹುಡುಕುವ ಹಸುವಿನಂತೆ, ನೀನೇನು ಮಾಡುವೆ, ಮಾದ್ರಿ ? ಮರದ ತುದಿಯಲ್ಲಿ ಭಯಂಕರವಾದ ಕೋತಿಗಳು ಹಾರುತ್ತವೆ, ದುಮು ಕುತ್ತವೆ. ಎಂದೂ ಕಾಣದ ಅವುಗಳನ್ನು ಕಂಡು ನಿನಗೆ ಭಯವಾಗು ವುದು, ಮಾದ್ರಿ. ಹಿಂದೆ ಒಂದು ಸಲ ನರಿಯ ಕೂಗು ಕೇಳಿ ಬೆಚ್ಚಿಬಿದ್ದ ನೀನು ವಂಕಪರ್ವತದ ಬಳಿ ಏನು ಮಾಡುವೆ, ಮಾದ್ರಿ ? ನಡುಹಗಲಿನಲ್ಲಿ, ಹಕ್ಕಿಗಳು ಮಲಗಿದ್ದರೂ ಆ ಮಹಾರಣ್ಯವು ಧ್ವನಿಸುತ್ತಿರುವುದು. ಅಲ್ಲೇಕೆ ಹೋಗಬಯಸುವೆ, ಮಾದ್ರಿ ? " ಎಂದನು.

ಅದಕ್ಕೆ ಸರ್ವಾಂಗಶೋಭನೆಯಾದ ರಾಜಪುತ್ರಿ ಮಾದ್ರಿಯು ಅವನನ್ನು ಕುರಿತು "ನೀನು ಹೇಳಿದ ವನಭಯಗಳೆಲ್ಲವೂ ಸಂಭವಿಸಲಿ ಎನ್ನುವೆನು. ನಾನು ಹೋಗಿಯೇ ತೀರುವೆನು, ಮಹಾರಾಜ. ದಾರಿಯಲ್ಲಿ ಹುಲ್ಲಾಗಲಿ, ದರ್ಭೆಯಾಗಲಿ, ಯಾವ ಜೊಂಡೇ ಆಗಲಿ, ಅದನ್ನು ತಳ್ಳಿ ಕೊಂಡು ಮುಂದೆ ಹೋಗುವೆನು ; ನಾನು ಗೊಣಗುವುದಿಲ್ಲ. ಗಂಡನುಳ್ಳ ವಳು ಉಪವಾಸ, ಗೋಮಯ ಬಳಿಯುವುದು, ಅಗ್ನಿ ಪರಿಚರ್ಯೆ ಮಾಡುವುದು, ನೀರು ಸೇದುವುದು ಮೊದಲಾದ ಬಹುಚರ್ಯೆಗಳಿಂದ ಪತಿಯನ್ನು ಮೆಚ್ಚಿಸುವಳು. ಲೋಕದಲ್ಲಿ ಗಂಡನಿಲ್ಲದ ಸ್ಥಿತಿ ಕಷ್ಟ. ಆದ್ದರಿಂದ ನಾನು ಹೋಗಿಯೇ ತೀರುವೆನು, ಮಹಾರಾಜ. ಸ್ತ್ರೀ ವಿಧವೆಯಾದರೆ, ಅವಳ ಉಚ್ಛಿಷ್ಟವನ್ನು ತಿನ್ನಲೂ ಯೋಗ್ಯನಲ್ಲದವನು ಅವಳ ಕೈಯನ್ನು ಹಿಡಿದು ಎಳೆಯುವನು. ವಿಧವೆಯ ಬಾಳು ಬಲು ಕಷ್ಟ. ತಲೆಗೂದಲು ಹಿಡಿದೆತ್ತಿ ನೆಲಕ್ಕುರುಳಿಸುತ್ತಿದ್ದರೂ ಜನರು ನಿಂತು ನೋಡುವರಲ್ಲದೆ ಯಾರೂ ಅವಳ ಸಹಾಯಕ್ಕೆ ಬರುವುದಿಲ್ಲ. ವಿಧವೆಯ ಮಕ್ಕಳು ಲಕ್ಷಣವಾಗಿರಲಿ, ಸೌಭಾಗ್ಯವಂತರಾಗಿರಲಿ, ಕಾಗೆಗಳು ಗೂಗೆ ಯನ್ನು ಎಳೆದಾಡುವಂತೆ ಜನರು ಅವರನ್ನು ಸುಮ್ಮನೆ ಎಳೆದ್ದಾಡುವರು. ಮನೆಯಲ್ಲಿ ಎಷ್ಟೇ ಚಿನ್ನಬೆಳ್ಳಿ ತುಂಬಿರಲಿ, ಅಣ್ಣತಮ್ಮಂದಿರಿಂದಲೂ ಜೊತೆಯ ಹೆಂಗುಸರಿಂದಲೂ ಬೈಗಳು ತಪ್ಪುವುದಿಲ್ಲ. ನೀರಿಲ್ಲದ ನದಿ ಬೋಳು, ರಾಜನಿಲ್ಲದ ರಾಷ್ಟ್ರ ಬೋಳು ; ಹತ್ತುಜನ ಅಣ್ಣತಮ್ಮಂದಿ

ರಿದ್ದರೂ ಗಂಡನಿಲ್ಲದ ಹೆಂಗುಸು ಕೂಡ ಹಾಗೆಯೇ. ರಥಕ್ಕೆ ಧ್ವಜ ಲಾಂಛನ. ಬೆಂಕಿಗೆ ಹೊಗೆ ಗುರುತು. ರಾಷ್ಟ್ರಕ್ಕೆ ರಾಜನಿದ್ದರೆ ಚೆನ್ನ. ಸ್ತ್ರೀಗೆ ಗಂಡನಿದ್ದರೆ ಚೆನ್ನ. ವೈಧವ್ಯ ಬಹಳ ದುಃಖ. ಅದಕ್ಕಾಗಿ ನಾನೂ ಹೋಗುವೆನು, ಮಹಾರಾಜ. ದರಿದ್ರನೊಡನೆ ದರಿದ್ರಳಾಗಿ ಹಣವಂತ ನೊಡನೆ ಹಣವಂತಳಾಗಿ ಕೀರ್ತಿ ಪಡೆದವಳನ್ನು ದೇವತೆಗಳೂ ಹೊಗಳು ವರು. ಅವಳು ಮಾಡಲು ಕಠಿನವಾದುದನ್ನು ಮಾಡುವಳು. ಯಾವಾಗಲೂ ಕಾಷಾಯವನ್ನು ಧರಿಸಿ ನನ್ನ ಸ್ವಾಮಿಯ ಜೊತೆಯಲ್ಲಿರುವೆನು. ವಿಶ್ವಂತರ ನಿಲ್ಲದೆ ಈ ಎಲ್ಲಾ ಪೃಥ್ವಿಯನ್ನು ಕೊಟ್ಟರೂ ಬೇಡ. ವೈಧವ್ಯ ಬಹು ಕಠಿನ; ನಾನು ಹೋಗುವೆನು, ಮಹಾರಾಜ. ನಾನಾ ರತ್ನಗಳಿಂದ ತುಂಬಿ ಬಹುಧನವನ್ನು ಹೊತ್ತು ಸಾಗರದ ವರೆಗು ಹರಡಿರುವ ಈ ಭೂಮಿಯಾದರೂ ಸರಿಯೆ, ನನ್ನ ವಿಶ್ವಂತರನಿಲ್ಲದೆ ನನಗೆ ಬೇಡ. ತನ್ನ ಸ್ವಾಮಿಗೆ ದುಃಖ ಬಂದಾಗ ತಾನು ಸುಖವನ್ನು ಬಯಸುವವಳ ಹೃದಯ ವೆಂತಹದು ? ಅವಳು ಕಠಿನಹೃದಯಿಯಾಗಿರಬೇಕು. ಶಿಬಿರಾಷ್ಟ್ರವರ್ಧನ ನಾದ ವಿಶ್ವಂತರಮಹಾರಾಜನು ಮನೆಬಿಟ್ಟು ಕಾಡಿಗೆ ಹೋಗುವಾಗ ನಾನು ಅವನನ್ನು ಹಿಂಬಾಲಿಸುವೆನು. ನಾನು ಬೇಡಿದುದನ್ನೆಲ್ಲ ಕೊಡು ವವನು ಅವನೆ" ಎಂದಳು.

ಅದಕ್ಕೆ ಸಂಜಯಮಹಾರಾಜನು ಮಾದ್ರಿಯನ್ನು ಕುರಿತು "ಈ ನಿನ್ನ ಚಿಕ್ಕ ಮಕ್ಕಳಾದ ಜಾಲಿ ಕೃಷ್ಣಾಜಿನೆಯರನ್ನು ಇಲ್ಲಿಯೆ ಬಿಟ್ಟು ಹೋಗು. ನಾನು ಅವರನ್ನು ಕಾಪಾಡುತ್ತೇನೆ" ಎಂದನು.

ಅದಕ್ಕೆ ರಾಜಪುತ್ರಿ ಮಾದ್ರಿಯು "ದೇವ, ಜಾಲಿ ಕೃಷ್ಣಾಜಿನೆಯ ರಿಬ್ಬರೂ ನನ್ನ ಪ್ರೀತಿಯ ಮಕ್ಕಳು. ಕಾಡಿನಲ್ಲಿ ಶೋಕಪಡುವ ನನ್ನ ಜೀವಕ್ಕೆ ಅವರು ಗೆಲುವು ತರುವರು" ಎಂದಳು.

ಸಂಜಯಮಹಾರಾಜನು ಅವಳ ಮಾತನ್ನು ಕೇಳಿ "ಶುಚಿಯಾಗಿ ತೆರತೆರದ ಊಟಮಾಡುತ್ತಿದ್ದ ಮಕ್ಕಳು ಕಾಡುಹಣ್ಣುಗಳನ್ನು ಹೇಗೆ ತಾನೆ ತಿನ್ನುವರು ? ಒಳ್ಳೆಯ ಚಿನ್ನದ ಬೆಳ್ಳಿಯ ತಟ್ಟೆಗಳಲ್ಲಿ ತಿನ್ನುತ್ತಿದ್ದ ವರು ಮರದ ಎಲೆಗಳಲ್ಲಿ ಹೇಗೆ ಊಟಮಾಡುವರು ? ಕಾಶಿಯ ವಸ್ತ್ರ ಗಳನ್ನೂ ಕ್ಷೌಮ ಕೌಟುಂಬರಗಳನ್ನೂ ಉಡುತ್ತಿದ್ದವರು ಕುಶಚೀರಗಳನ್ನು

ಹೇಗೆ ಉಟ್ಟಾರು? ವಾಹನಗಳ ಮೇಲೆ, ಪಲ್ಲಕ್ಕಿಯಲ್ಲಿ, ರಥಗಳೊಳಗೆ ಓಡಿಯಾಡುತ್ತಿದ್ದವರು ಕಾಲುನಡೆಯಲ್ಲಿ ಹೇಗೆ ಹೋದಾರು? ಅಗಳಿ ಹಾಕಿದ ಎತ್ತರವಾದ ಕೋಣೆಗಳಲ್ಲಿ ಮಲಗುತ್ತಿದ್ದವರು ಹುಲ್ಲಿನ ಮೇಲೆ ಹೇಗೆ ಮಲಗಿಯಾರು? ಅಗರು ಚಂದನಗಳ ಗಂಧವನ್ನು ಲೇಪಿಸಿಕೊಳ್ಳು ತ್ತಿದ್ದವರು ದೂಳುಕೊಳೆಗಳನ್ನು ಹೇಗೆ ತಾಳಿಯಾರು? ಚಾಮರ ಗಳಿಂದಲೂ ನವಿಲುಗರಿಗಳಿಂದಲೂ ಬೀಸಿಸಿಕೊಂಡು ಸುಖವಾಗಿದ್ದವರು ನೊಣಗಳೂ ಸೊಳ್ಳೆಗಳೂ ಕಚ್ಚುವಾಗ ಏನು ಮಾಡಿಯಾರು?" ಎಂದನು.

## ವನಪ್ರಯಾಣ

ಹೀಗೆ ಅವರು ಮಾತನಾಡುವುದರಲ್ಲಿಯೇ ರಾತ್ರಿ ಬೆಳಗಾಯಿತು. ಬೆಳಗಾಗಲು ಸೂರ್ಯನು ಮೇಲೆಬಂದನು. ಆಗ ನಾಲ್ಕು ಸಿಂಧೂ ದೇಶದ ಕುದುರೆಗಳನ್ನು ಹೂಡಿ ಅಲಂಕರಿಸಿದ ರಥವನ್ನು ಮಹಾಸತ್ತ್ವನಿ ಗಾಗಿ ತಂದು ರಾಜದ್ವಾರದಲ್ಲಿ ನಿಲ್ಲಿಸಿದರು. ಮಾದ್ರಿಯು ಅತ್ತೆಮಾವಂ ದಿರನ್ನು ವಂದಿಸಿ, ಉಳಿದ ಸ್ತ್ರೀಯರನ್ನು ಬೀಳ್ಕೊಂಡು, ತನ್ನ ಇಬ್ಬರು ಮಕ್ಕಳನ್ನು ಕರೆದುಕೊಂಡು ವಿಶ್ವಂತರನಿಗಿಂತ ಮುಂಚೆಯೆ ಹೋಗಿ ರಥ ವೇರಿದಳು. ರಥವೇರಿ "ಮಹಾರಾಜ, ನಮಗಾಗಿ ನೀನು ಗೋಳಾಡ ಬೇಡ, ದುಃಖಿಸಬೇಡ. ನಾನು ಹೇಗೆ ಇರುವೆನೋ ಮಕ್ಕಳೂ ಹಾಗೆಯೇ ಇರುವರು" ಎಂದು ಸಂಜಯನಿಗೆ ಹೇಳಿದಳು.

ವಿಶ್ವಂತರನೂ ತಾನು ಕೊಡಬೇಕೆಂದಿದ್ದ ದಾನವನ್ನು ಕೊಟ್ಟು, ತಾಯಿತಂದೆಯರಿಗೆ ವಂದಿಸಿ, ಅವರಿಗೆ ಪ್ರದಕ್ಷಿಣಮಾಡಿ, ನಾಲ್ಕು ಕುದುರೆ ಹೂಡಿದ ವೇಗವಾದ ರಥವನ್ನು ಹತ್ತಿ, ಹೆಂಡತಿ ಮಕ್ಕಳೊಡನೆ ವಂಕಪರ್ವತಕ್ಕೆ ಹೋಗಲು ಸಿದ್ಧನಾದನು. ಹೊರಡುವಾಗ, ಅಲ್ಲಿ ನೆರೆದಿದ್ದ ಜನರನ್ನು ಉದ್ದೇಶಿಸಿ "ನಾವು ಹೋಗುತ್ತೇವೆ. ನಮ್ಮ ಜನಕ್ಕೆಲ್ಲ ಒಳ್ಳೆಯದಾಗಲಿ. ದಾನ ಕೊಡುವುದೇ ಮೊದಲಾದ ಪುಣ್ಯ ಗಳನ್ನು ನಡೆಸಲು ಮರೆಯಬೇಡಿ" ಎಂದು ಹೇಳಿದನು. ಆಗ ಬೋಧಿ ಸತ್ತ್ವನ ತಾಯಿ "ದಾನಶಾಲಿಯಾದ ನನ್ನ ಮಗನು ದಾನಕೊಡಲಿ" ಎಂದು ಆಭರಣಗಳಿಂದಲೂ ಸಪ್ತರತ್ನಗಳಿಂದಲೂ ತುಂಬಿದ ಬಂಡಿ

ಗಳನ್ನು ಅವನ ಎರಡು ಪಕ್ಕಗಳಲ್ಲೂ ಕಳುಹಿಸಿದಳು. ಅವನಾದರೋ ತನ್ನ ಮೈಮೇಲಿನ ಆಭರಣಗಳನ್ನೂ ಕಳಚಿ ಬಳಿಬಂದ ಯಾಚಕರಿಗೆ ಹದಿನೆಂಟುಬಾರಿ ದಾನಮಾಡಿದನು. ನಗರವನ್ನು ಬಿಟ್ಟು ದೂರ ಹೋದ ಬಳಿಕ, ತಿರುಗಿ ನೋಡಬಯಸಿದನು. ಅವನ ಬಯಕೆಗೆ ಅನುಸಾರವಾಗಿ ಭೂಮಿ ಒಂದು ರಥದ ಅಗಲದಷ್ಟು ಬಿರಿಯಿತು, ಅವನ ರಥ ನಗರದ ಕಡೆಗೆ ಮುಖಮಾಡಿ ನಿಂತಿತು. ಭೂಮಿ ನಡುಗಿತು. ವಿಶ್ವಂತರನು "ನಮ್ಮ ತಂದೆಯಾದ ಶಿಬಿಶ್ರೇಷ್ಠನ ಮನೆಯು ಎಷ್ಟು ರಮ್ಯವಾಗಿ ಕಾಣುವುದು, ನೋಡು, ಮಾದ್ರಿ" ಎಂದನು.

## ಕುದುರೆ ರಥಗಳ ದಾನ

ಅನಂತರ ಮಹಾಸತ್ತ್ವನು ತನ್ನ ಒಡಹುಟ್ಟಿದ ಆರುಸಾವಿರ ಅಮಾತ್ಯರನ್ನೂ ಉಳಿದ ಜನರನ್ನೂ ಹಿಂದಕ್ಕೆ ಕಳುಹಿಸಿ, ರಥವನ್ನು ಮುಂದೆ ಓಡಿಸುತ್ತ, "ಭದ್ರೆ, ಹಿಂದುಗಡೆ ಯಾರಾದರೂ ಯಾಚಕರು ಬಂದರೆ ನೋಡುತ್ತಿರು" ಎಂದು ಮಾದ್ರಿಗೆ ಹೇಳಿದನು. ಅವಳು ನೋಡುತ್ತ ಕುಳಿತಳು. ಆ ವೇಳೆಗೆ, ಅವನ ಸಪ್ತಶತಕ ಮಹಾದಾನಕ್ಕೆ ಬರಲು ಆಗದ ನಾಲ್ವರು ನಗರಕ್ಕೆ ಬಂದು, "ರಾಜನೆಲ್ಲಿ?" ಎಂದು ಪ್ರಶ್ನಿಸಿ, "ದಾನ ಕೊಟ್ಟು ಹೋದ" ಎನ್ನಲು, "ಏನು ತೆಗೆದುಕೊಂಡು ಹೋದ?" ಎಂದು ಕೇಳಿ, "ರಥವನ್ನು ತೆಗೆದುಕೊಂಡು ಹೋದ" ಎನ್ನಲು, "ಕುದುರೆಗಳನ್ನು ಕೇಳೋಣ" ಎಂದು ವಿಶ್ವಂತರನ ಹಿಂದೆ ಹೋದರು. ಅವರು ಬರುವುದನ್ನು ಮಾದ್ರಿ ಕಂಡು "ಯಾಚಕರು, ದೇವ" ಎಂದು ತಿಳಿಸಿದಳು. ಮಹಾಸತ್ತ್ವನು ರಥ ನಿಲ್ಲಿಸಿದನು. ಅವರು ಬಂದು ಕುದುರೆಗಳನ್ನು ಕೇಳಿದರು. ಮಹಾಸತ್ತ್ವನು ನಾಲ್ಕು ಕುದುರೆಗಳನ್ನೂ ಅವರಿಗೆ ಕೊಟ್ಟನು.

ವಿಶ್ವಂತರನು ಕುದುರೆಗಳನ್ನು ದಾನಮಾಡಿದನು. ರಥದ ನೊಗ ಆಕಾಶದಲ್ಲಿಯೇ ನಿಂತಿತು. ಯಾಚಕರು ಹೋದ ಒಡನೆಯೆ ನಾಲ್ವರು ದೇವಪುತ್ರರು ಕೆಂಪುಜಿಂಕೆಗಳ ರೂಪದಲ್ಲಿ ಬಂದು ನೊಗವನ್ನು ಆತು ಕೊಂಡು ಹೊರಟರು. "ನೋಡು, ಮಾದ್ರಿ. ಕೆಂಪುಜಿಂಕೆಗಳ ರೂಪದಿಂದ

ಈ ಚಿತ್ರವಾದ ಕುದುರೆಗಳು ಹೇಗೆ ರಥವನ್ನು ಎಳೆಯುತ್ತಿವೆ” ಎಂದು ವಿಶ್ವಂತರನು ಮಾದ್ರಿಗೆ ತೋರಿಸಿದನು.

ಅವರು ಹೀಗೆಯೇ ಹೋಗುತ್ತಿರಲು, ಇನ್ನೊಬ್ಬ ಯಾಚಕನು ಬಂದು ರಥ ಬೇಡಿದನು. ಮಹಾಸತ್ತ್ವನು ಹೆಂಡತಿ ಮಕ್ಕಳನ್ನು ಇಳಿಸಿ ರಥವನ್ನು ಅವನಿಗೆ ಕೊಟ್ಟನು. ರಥವನ್ನು ದಾನಮಾಡಲು ದೇವಪುತ್ರರು ಅಂತರ್ಧಾನವಾದರು. ಮುಂದೆ ಅವರು ಪಾದಚಾರಿಗಳಾದರು. ಆಗ ಮಹಾಸತ್ತ್ವನು “ಮಾದ್ರಿ, ನೀನು ಕೃಷ್ಣಾಜಿನೆಯನ್ನು ಎತ್ತಿಕೊ; ಅವಳು ಕಡೆಯವಳು, ಹಗುರ. ನಾನು ಜಾಲಿಯನ್ನು ಎತ್ತಿಕೊಳ್ಳುವೆನು; ಅವನು ಹಿರಿಯವನು, ಭಾರ” ಎಂದನು. ಹೀಗೆ ರಾಜನು ಮಗನನ್ನೂ ರಾಜಪುತ್ರಿ ಮಾದ್ರಿಯು ಮಗಳನ್ನೂ ಎತ್ತಿಕೊಂಡರು. ಇಬ್ಬರೂ ಒಬ್ಬರೊಡನೆ ಒಬ್ಬರು ಪ್ರಿಯವಾಗಿ ಮಾತನಾಡುತ್ತ ಸಮ್ಮೋದದಿಂದ ಮುಂದೆ ನಡೆದರು.

## ಚೇತರಾಷ್ಟ್ರದಲ್ಲಿ

ಇಬ್ಬರೂ ನಡೆದರು. ದಾರಿಯಲ್ಲಿ ಯಾರಾದರೂ ಮನುಷ್ಯರನ್ನು ಕಂಡರೆ “ವಂಕಪರ್ವತವೆಲ್ಲಿ ?” ಎಂದು ಕೇಳುವರು. ಆ ಮನುಷ್ಯರು “ಅಯ್ಯೋ, ವಂಕಪರ್ವತ ಬಹಳ ದೂರವಲ್ಲ!” ಎಂದು ದುಃಖಪಡುವರು. ದಾರಿಯ ಎರಡೂ ಕಡೆ ವಿವಿಧ ಫಲಗಳನ್ನು ಹೊತ್ತ ಮರಗಳು. ಆ ಹಣ್ಣುಗಳಿಗಾಗಿ ಮಕ್ಕಳು ಅಳುವುವು. ಆ ಮಕ್ಕಳು ಅಳುವುದನ್ನು ಕಂಡು, ಮರಗಳು ಕೂಡ ಕರುಣೆಗೊಂಡು, ಮಕ್ಕಳ ಕಡೆಗೆ ಬಾಗಿ ಕೈಗೆ ಎಟುಕಿಬರುವುವು. ಆಗ ವಿಶ್ವಂತರನು ಆ ಹಣ್ಣುಗಳನ್ನು ಕಿತ್ತು ಮಕ್ಕಳಿಗೆ ಕೊಡುವನು. ಆ ಆಶ್ಚರ್ಯವನ್ನು, ಅದ್ಭುತವನ್ನು ಕಂಡು ಮಾದ್ರಿಗೆ ರೋಮಾಂಚವಾಗುವುದು.

ಜೇತುತ್ತರನಗರದಿಂದ ಸುವರ್ಣಗಿರಿತಾಳವೆಂಬ ಪರ್ವತಕ್ಕೆ ಐದು ಯೋಜನ. ಅಲ್ಲಿಂದ ಕೊಂತಿಮಾರವೆಂಬ ನದಿಗೆ ಐದು ಯೋಜನ. ಅಲ್ಲಿಂದ ಆರಂಜರಗಿರಿಗೆ ಐದು ಯೋಜನ. ಅಲ್ಲಿಂದ ದುರ್ನಿವಿಷ್ಟವೆಂಬ ಬ್ರಾಹ್ಮಣಗ್ರಾಮಕ್ಕೆ ಐದು ಯೋಜನ. ಅಲ್ಲಿಂದ ಅವನ ಸೋದರ

ಮಾವನ ನಗರಕ್ಕೆ ಹತ್ತು ಯೋಜನ. ಹೀಗೆ ಆ ಮಾರ್ಗವು ಜೇತುತ್ತರ ನಗರದಿಂದ ಮೂವತ್ತು ಯೋಜನ. ದೇವತೆಗಳು ಆ ಮಕ್ಕಳ ಮೇಲೆ ಮರುಕಗೊಂಡು ದಾರಿಯ ಉದ್ದವನ್ನು ಕಡಿಮೆಮಾಡಿದರು. ಅದರಿಂದ ಅವರು ಒಂದೇ ದಿವಸದಲ್ಲಿ ಸೋದರಮಾವನ ನಗರವನ್ನು ತಲಪಿದರು. ಜೇತುತ್ತರನಗರವನ್ನು ಬೆಳಗ್ಗೆ ಬಿಟ್ಟವರು ಸಾಯಂಕಾಲದ .ವೇಳೆಗೆ ಚೇತರಾಷ್ಟ್ರದಲ್ಲಿದ್ದ ಸೋದರಮಾವನ ನಗರವನ್ನು ಸೇರಿದರು.

ಆ ನಗರದಲ್ಲಿ ಅರುವತ್ತು ಸಾವಿರ ಕ್ಷತ್ರಿಯರಿದ್ದರು. ಮಹಾಸತ್ತ್ವನು ನಗರದೊಳಗೆ ಪ್ರವೇಶಮಾಡದೆ ನಗರದ್ವಾರದ ಶಾಲೆಯಲ್ಲಿ ಕುಳಿತನು. ಮಾದ್ರಿಯು ಮಹಾಸತ್ತ್ವನ ಪಾದಗಳ ದೂಳನ್ನು ತೊಡೆದು, ಕಾಲುಗಳನ್ನು ಉಜ್ಜಿ, " ವಿಶ್ವಂತರನು ಬಂದಿರುವುದನ್ನು ತಿಳಿಸುವೆನು " ಎಂದು ಆ ಶಾಲೆಯಿಂದ ಹೊರಗೆ ಬಂದು ಕಣ್ಣಿಗೆ ಕಾಣುವ ಕಡೆ ನಿಂತಳು. ಆ ನಗರಕ್ಕೆ ಬರುವ ಹೋಗುವ ಸ್ತ್ರೀಯರೆಲ್ಲ ಬಂದು ಅವಳ ಸುತ್ತ ಸೇರಿದರು. " ಈ ಸುಕುಮಾರಿ ಕಾಲುನಡೆ ನಡೆವಳಲ್ಲ! ವಾಹನ ಪಲ್ಲಕ್ಕಿಗಳಲ್ಲಿ ಹೋಗುತ್ತಿದ್ದ ಈ ಮಾದ್ರಿ ಕಾಲುನಡೆಯಲ್ಲಿ ಕಾಡು ತಿರುಗುವಳಲ್ಲ! " ಎಂದರು. ಮಾದ್ರಿಯೂ ವಿಶ್ವಂತರನೂ ಅವರ ಮಕ್ಕಳೂ ಅನಾಥರಂತೆ ಬಂದುದನ್ನು ಕಂಡು, ಮಹಾಜನರು ಹೋಗಿ ರಾಜನಿಗೆ ತಿಳಿಸಿದರು. ಅದನ್ನು ಕೇಳಿ, ಚೇತರಾಷ್ಟ್ರದ ಅರುವತ್ತು ಸಾವಿರ ಕ್ಷತ್ರಿಯರೂ ಅಳುತ್ತ ಗೋಳಾಡುತ್ತ ಬಂದು, " ಕುಶಲವೆ, ದೇವ? ದುಃಖವಿಲ್ಲವಷ್ಟೆ, ದೇವ? ನಿನ್ನ ತಂದೆ ಆರೋಗ್ಯವೆ? ಶಿಬಿಗಳಿಗೆ ದುಃಖವಿಲ್ಲವಷ್ಟೆ? ನಿನ್ನ ಸೈನ್ಯವೆಲ್ಲಿ? ನಿನ್ನ ರಾಜರಥವೆಲ್ಲಿ? ಕುದುರೆಯಿಲ್ಲದೆ, ರಥವಿಲ್ಲದೆ ಬಹುದೂರ ಬಂದಿರುವೆಯಲ್ಲ? ಶತ್ರುಗಳಿಗೆ ಸೋತು ಈ ಗತಿ ಪಡೆದೆಯ? " ಎಂದರು.

ಅದಕ್ಕೆ ವಿಶ್ವಂತರನು " ನನಗೆ ಕುಶಲ, ದುಃಖವಿಲ್ಲ. ನನ್ನ ತಂದೆ ಆರೋಗ್ಯವಾಗಿದ್ದಾನೆ. ಶಿಬಿಗಳಿಗೆ ಏನೂ ದುಃಖವಿಲ್ಲ. ನಾನು ನಮ್ಮ ಅಚ್ಚಬಿಳಿಯ ಆನೆಯನ್ನು ಅದರ ಎಲ್ಲ ಅಲಂಕಾರಗಳೊಡನೆ ದಾನ ಮಾಡಿದೆನು. ಅದರಿಂದ ಶಿಬಿಗಳಿಗೆ ನನ್ನಲ್ಲಿ ಕ್ರೋಧ. ನನ್ನ ತಂದೆಯ ಮನಸ್ಸು ಆ ಕಾರಣದಿಂದ ಒಡೆದಿದೆ. ಅದರಿಂದ ಅವನು ನನ್ನನ್ನು ಅಟ್ಟ

ದನು. ನಾನು ವಂಕಪರ್ವತಕ್ಕೆ ಹೋಗುತ್ತೇನೆ. ವನದಲ್ಲಿ ವಾಸಮಾಡು ವುದಕ್ಕೆ ತಕ್ಕ ಸ್ಥಳವನ್ನು ತಿಳಿಸಿರಿ" ಎಂದನು.

ಅದಕ್ಕೆ ಆ ಕ್ಷತ್ರಿಯರು "ನಾವು ನಿನ್ನನ್ನು ಸ್ವಾಗತಿಸುವೆವು, ಮಹಾರಾಜ. ನಾವು ನಿನ್ನನ್ನು ಬರಮಾಡಿಕೊಳ್ಳುವೆವು. ಇಲ್ಲಿ ಇರುವುದಕ್ಕೆಲ್ಲ ನೀನು ಒಡೆಯನಾಗು. ನಿನಗೆ ಏನು ಬೇಕು, ಹೇಳು? ಕಂದ ಮೂಲಗಳನ್ನೂ ಮಧುರಮಾಂಸಗಳನ್ನೂ ಶುದ್ಧವಾದ ಶಾಲ್ಯನ್ನಗಳನ್ನೂ ಸೇವಿಸು. ನೀನು ನಮ್ಮ ಅತಿಥಿಯಾಗು, ಮಹಾರಾಜ" ಎಂದರು.

"ನೀವು ನೀಡಿದುದನ್ನೆಲ್ಲ ನಾನು ತೆಗೆದುಕೊಂಡೆ. ಆದರೆ ರಾಜನು ನನ್ನನ್ನು ರಾಷ್ಟ್ರದಿಂದ ಅಟ್ಟಿದ್ದಾನೆ. ನಾನು ವಂಕಪರ್ವತಕ್ಕೆ ಹೋಗುತ್ತೇನೆ. ವನದಲ್ಲಿ ವಾಸಮಾಡುವುದಕ್ಕೆ ತಕ್ಕ ಸ್ಥಳವನ್ನು ತಿಳಿಸಿರಿ" ಎಂದು ವಿಶ್ವಂತರನು ಪುನಃ ಕೇಳಿದನು.

ಅದಕ್ಕೆ ಆ ಕ್ಷತ್ರಿಯರು "ಮಹಾರಾಜ, ಈ ಚೇತರು ಆ ಶಿಬಿ ರಾಷ್ಟ್ರವರ್ಧನನ ಬಳಿಗೆ ಹೋಗಿ ನೀನು ನಿರ್ದೋಷಿಯೆಂದು ಕ್ಷಮಿಸಬೇಡುವರು. ಅದುವರೆಗೆ ನೀನು ಈ ಚೇತರಾಷ್ಟ್ರದಲ್ಲಿ ವಾಸಿಸು" ಎಂದು ಸಂತೋಷದಿಂದಲೂ ನಂಬಿಕೆಯಿಂದಲೂ ಕೇಳುತ್ತ ಅವನ ಸುತ್ತ ನಿಂತರು.

"ನಾನು ನಿರ್ದೋಷಿಯೆಂದು ನೀವು ಹೋಗಿ ಕ್ಷಮಿಸಬೇಡುವುದು ನನಗೆ ರುಚಿಸದು. ಅಲ್ಲಿ ರಾಜನು ಒಡೆಯನಲ್ಲ. ಶಿಬಿಗಳೆಲ್ಲರೂ ಬಹು ಕೋಪದಿಂದ ಒಟ್ಟಾಗಿ ಸೇರಿ ನನ್ನ ಕಾರಣದಿಂದ ರಾಜನನ್ನು ಧ್ವಂಸ ಮಾಡಬಯಸುವರು."

"ಮಹಾರಾಜ, ಆ ರಾಷ್ಟ್ರದಲ್ಲಿ ಹೀಗಾದರೆ, ಚೇತರ ಪರಿವಾರದೊಡನೆ ಇಲ್ಲಿಯೇ ರಾಜ್ಯವಾಳು. ಈ ರಾಷ್ಟ್ರದಲ್ಲಿ ಸಮೃದ್ಧಿಯಿದೆ, ಹಣ ತುಂಬಿದೆ. ಜನರೆಲ್ಲ ಸಾಮರ್ಥ್ಯವುಳ್ಳವರು. ನೀನು ಮನಸ್ಸುಮಾಡಿ ಈ ರಾಜ್ಯವನ್ನು ಆಳು, ದೇವ."

"ಕೇಳಿರಿ, ಚೇತಪುತ್ರರೆ. ನನಗೆ ರಾಜ್ಯವಾಳುವ ಆಸೆಯಿಲ್ಲ, ಮನಸ್ಸಿಲ್ಲ. ನನ್ನನ್ನು ಶಿಬಿಗಳು ರಾಜ್ಯದಿಂದ ಹೊರಗಟ್ಟಿದ್ದಾರೆ. ಇಂಥವನಿಗೆ

ಚೇತರು ರಾಜ್ಯಾಭಿಷೇಕಮಾಡಿದರೆ ಶಿಬಿಗಳೆಲ್ಲರೂ ಅತೃಪ್ತಿಪಡುವರು. ನನಗೋಸ್ಕರವಾಗಿ ನಿಮ್ಮಲ್ಲಿ ಒಡಕುಂಟಾಗುವುದು. ಘೋರ ಯುದ್ಧ ವಾಗುವುದು. ಬಹು ಏಟು ಬೀಳುವುದು. ನನ್ನೊಬ್ಬನಿಂದಾಗಿ ಬಹು ಜನರಿಗೆ ಹಿಂಸೆಯಾಗುವುದು. ನನಗೆ ಜಗಳ ರುಚಿಸುವುದಿಲ್ಲ. ಶಿಬಿಗಳು ನನ್ನನ್ನು ರಾಷ್ಟ್ರದಿಂದ ಓಡಿಸಿದ್ದಾರೆ. ನಾನು ವಂಕಪರ್ವತಕ್ಕೆ ಹೋಗು ತ್ತೇನೆ. ವನದಲ್ಲಿ ವಾಸಮಾಡುವುದಕ್ಕೆ ತಕ್ಕ ಸ್ಥಳವನ್ನು ತಿಳಿಸಿರಿ."

## ವಂಕಪರ್ವತದ ದಾರಿ

ಹೀಗೆ, ಚೇತರು ಅನೇಕ ರೀತಿಗಳಲ್ಲಿ ಯಾಚಿಸಿದರೂ ಮಹಾ ಸತ್ತ್ವನು ಅಲ್ಲಿ ನಿಲ್ಲಲು ಬಯಸಲಿಲ್ಲ. ಆಗ ಆ ರಾಜರು ಅವನಿಗೆ ಮಹತ್ತಾದ ಸತ್ಕಾರಮಾಡಿದರು. ಅವನು ನಗರದೊಳಗೆ ಬರಲು ಇಷ್ಟ ಪಡದುದರಿಂದ, ಅವನು ತಂಗಿದ್ದ ಸ್ಥಳವನ್ನೇ ಅಲಂಕರಿಸಿ, ಅಲ್ಲಿಯೇ ಮಲಗುವುದಕ್ಕೆ ತೆರೆ ಸುತ್ತುಕಟ್ಟಿ, ತಾವು ಸುತ್ತಲೂ ಕಾವಲು ನಿಂತರು. ಅವನು ಒಂದು ದಿನ ಒಂದು ರಾತ್ರಿ ಅಲ್ಲಿ ವಾಸಮಾಡಿ, ಮಾರನೆಯ ದಿವಸ ನಾನಾ ರಸಗಳ ಊಟವನ್ನು ಉಂಡು, ಹೊರಗೆ ಹೊರಟನು. ಆ ರಾಜರೂ ಅವನೊಡನೆ ಹೊರಟು, ಹದಿನೈದು ಯೋಜನ ದೂರ ಹೋಗಿ, ಕಾಡಿನ ಬಾಗಿಲಲ್ಲಿ ನಿಂತು ಮುಂದಿನ ಹದಿನೈದು ಯೋಜನಗಳ ಮಾರ್ಗವನ್ನು ಅವನಿಗೆ ತಿಳಿಸಿದರು.

"ರಾಜರ್ಷಿಯಾದವನು ಎಲ್ಲಿ ಶಾಂತಿ ಸಮಾಧಾನಗಳನ್ನು ಪಡೆಯ ಬಹುದೆಂಬುದನ್ನು ಹೇಳುತ್ತೇವೆ. ಅದೊ ನೋಡು, ಆ ಶೈಲವೆ ಗಂಧ ಮಾದನ ಪರ್ವತ. ಅಲ್ಲಿ ನೀನು ಹೆಂಡತಿ ಮಕ್ಕಳೊಡನೆ ವಾಸಮಾಡು. ಹೀಗೆಯೆ ನೇರವಾಗಿ ಉತ್ತರದ ಕಡೆ ಹೋಗು, ಮಹಾರಾಜ. ಅಲ್ಲಿ ಅನೇಕ ಮರಗಳ ತಂಪಾದ ನೆರಳಿನಿಂದ ಮನೋರಮವಾದ ವಿಪುಲವೆಂಬ ಪರ್ವತವನ್ನು ಕಾಣುವೆ. ಅದನ್ನು ದಾಟು; ಪರ್ವತದ ಹೊಟ್ಟೆಯಿಂದ ಗಂಭೀರವಾಗಿ ಹರಿದುಬರುವ ಕೇತುಮತೀ ನದಿಯನ್ನು ಕಾಣುವೆ. ಅದರ ತುಂಬ ಅನೇಕ ತೆರದ ಮೀನುಗಳಿವೆ, ನದಿಗೆ ಇಳಿಯಲು ಸುಖ ವಾದ ಘಟ್ಟಗಳಿವೆ, ನದಿಯಲ್ಲಿ ನೀರು ತುಂಬ ಇದೆ. ಅಲ್ಲಿ ಮಕ್ಕಳೊಡನೆ

ಸ್ನಾನಮಾಡು, ನೀರು ಕುಡಿ. ಅಲ್ಲಿ, ಬೆಟ್ಟದ ನೆತ್ತಿಯಲ್ಲಿ ಒಂದು ನ್ಯಗ್ರೋಧ ವೃಕ್ಷ ಕಾಣುವುದು. ಅದರ ನೆರಳು ತಂಪಾಗಿದೆ, ಅದರ ಹಣ್ಣು ಸಿಹಿಯಾಗಿದೆ. ಅಲ್ಲಿಂದ ಮುಂದೆ ನಾಳಿಕಪರ್ವತ. ಅದು ಅನೇಕ ಪಕ್ಷಿಗಳಿಂದಲೂ ಕಿಂಪುರುಷರಿಂದಲೂ ತುಂಬಿದುದು. ಅಲ್ಲಿಂದ ಮುಂದೆ ಉತ್ತರಕ್ಕೆ ಮುಚಲಿಂದ ಸರಸ್ಸು ; ಪುಂಡರೀಕಗಳಿಂದಲೂ ಬಿಳಿಯ ಸೌಗಂಧಿಕಪುಷ್ಪಗಳಿಂದಲೂ ತುಂಬಿದುದು. ಅನಂತರ ಮೇಘದಂತೆ ಕಪ್ಪಾದ ಕಾಡು ; ಅದರ ತುಂಬ ಹಸುರು ಹುಲ್ಲು, ಹೂ ಹಣ್ಣು ಹೊತ್ತ ಮರಗಳು. ಮಾಂಸ ಹುಡುಕುತ್ತ ಹೋಗುವ ಸಿಂಹದಂತೆ ಆ ಕಾಡಿನೊಳಗೆ ಹೋಗು. ಅಲ್ಲಿ ನಾನಾಬಣ್ಣದ ಬಹು ಹಕ್ಕಿಗಳು ಹೂಬಿಟ್ಟ ಮರಗಳಲ್ಲಿ ಕುಳಿತು ಇಂಪಾಗಿ ಕೂಗಿಗೆ ಮರುಕೂಗು ಕೊಡುವುವು. ಹಾಗೆಯೇ ಮುಂದೆ ಹೋದರೆ ಕರಂಜ ಕಕುಧ ಪುಷ್ಪಗಳಿಂದ ತುಂಬಿದ ಒಂದು ಪುಷ್ಕರಿಣಿ ಕಾಣುವುದು. ನೀರು ತುಂಬಿ, ಮೀನು ತುಂಬಿ, ಚಚ್ಚೌಕನಾದ ಆ ಕೊಳಕ್ಕೆ ಇಳಿಯುವ ಘಟ್ಟಗಳಿವೆ. ಅದರ ನೀರು ಸಿಹಿಯಾಗಿದೆ, ಸುವಾಸನೆಯಿಂದ ಕೂಡಿದೆ. ಅದರ ಉತ್ತರಕ್ಕೆ ಕೊಂಚ ಮುಂದೆ ಪರ್ಣಶಾಲೆ ಮಾಡಿಕೊಳ್ಳಿ. ಅಲ್ಲಿ ತಿರಿದು ತಂದು ಎಚ್ಚರದಿಂದ ವಾಸ ಮಾಡಿರಿ" ಎಂದು ಆ ಚೇತರು ಕಣ್ಣೀರು ತುಂಬಿದ ಅಳುಮುಖದಿಂದ ವಿಶ್ವಂತರನಿಗೆ ಹೇಳಿದರು.

ಆ ರಾಜರು - ಅವನಿಗೆ ಹೀಗೆ ದಾರಿಯನ್ನು ತಿಳಿಸಿ ಅವನನ್ನು ಬೀಳ್ಕೊಟ್ಟರು. ವಿಶ್ವಂತರನಿಗೆ ಮುಂದೆ ಉಂಟಾಗಬಹುದಾದ ಕೇಡನ್ನು ಕಳೆಯುವುದಕ್ಕಾಗಿ, "ಯಾವ ಶತ್ರುವಿಗೂ ಅವಕಾಶ ದೊರಕದಿರಲಿ" ಎಂದು ಚಿಂತಿಸಿ, ಯೋಗ್ಯನೂ ನಿಪುಣನೂ ಆದ ಒಬ್ಬ ಚೇತಪುತ್ರನನ್ನು ಕಾಡಿನ ಬಾಗಿಲಿನಲ್ಲಿ ನಿಲ್ಲಿಸಿ, "ಇಲ್ಲಿ ಹೋಗುವವರನ್ನೂ ಬರುವವರನ್ನೂ ನೀನು ಹಿಡಿದುಕೊ" ಎಂದು ಹೇಳಿ, ಎಲ್ಲರೂ ನಗರಕ್ಕೆ ಹೋದರು.

ಅತ್ತ ವಿಶ್ವಂತರನು ಹೆಂಡತಿ ಮಕ್ಕಳೊಡನೆ ಗಂಧಮಾದನ ಪರ್ವತಕ್ಕೆ ಹೋಗಿ ಆ ದಿನ ಅಲ್ಲಿ ವಾಸಿಸಿದನು. ಅಲ್ಲಿಂದ ಉತ್ತರಾಭಿಮುಖವಾಗಿ ವಿಪುಲಪರ್ವತಪಾದವನ್ನು ದಾಟಿ, ಕೇತುಮತೀ ನದೀ ತೀರಕ್ಕೆ ಬಂದನು. ಅಲ್ಲಿ ಕುಳಿತು, ಒಬ್ಬ ವನಚಾರನು ಕೊಟ್ಟ ಆಹಾರ

ವನ್ನು ತಿಂದು, ಅದಕ್ಕೆ ಬದಲಾಗಿ ಅವನಿಗೊಂದು ಚಿನ್ನದ ಸೂಜಿಯನ್ನು ಕೊಟ್ಟನು. ಅವರೆಲ್ಲರೂ ಅಲ್ಲಿಯೇ ಸ್ನಾನಮಾಡಿ, ನೀರು ಕುಡಿದು, ದಣಿವಾರಿಸಿಕೊಂಡರು. ಅನಂತರ ಆ ನದಿಯನ್ನು ದಾಟಿ, ಪರ್ವತ ಶಿಖರದಲ್ಲಿನ ನ್ಯಗ್ರೋಧದ ಬುಡದಲ್ಲಿ ಸ್ವಲ್ಪ ಕುಳಿತು, ನ್ಯಗ್ರೋಧ ಫಲ ಗಳನ್ನು ತಿಂದರು. ಅಲ್ಲಿಂದ ಎದ್ದು ನಾಳಿಕಪರ್ವತವನ್ನು ಬಳಸಿಕೊಂಡು, ಮುಚಲಿಂದ ಸರೋವರದ ಈಶಾನ್ಯಮೂಲೆಯನ್ನು ಸೇರಿದರು. ಅಲ್ಲಿದ್ದ ಒಂದು ಕಾಲುದಾರಿಯ ಮಾರ್ಗವಾಗಿ ಆ ದಟ್ಟಡವಿಯನ್ನು ಹೊಕ್ಕು, ಅದನ್ನೂ ದಾಟಿದರು. ಅಲ್ಲಿ ಬೆಟ್ಟದಿಂದ ಹುಟ್ಟಿಬಂದ ನದಿಯ ದಡವನ್ನೇ ಹಿಡಿದು, ಮುಂದೆ ಚತುಷ್ಕೋಣಾಕಾರವಾದ ಪುಷ್ಕರಿಣಿಯನ್ನೂ ಸೇರಿದರು.

## ವಂಕಪರ್ವತದಲ್ಲಿ ವಾಸ

ಹೀಗೆ ಮಹಾಸತ್ತ್ವನು ಹಿಮವಂತಕ್ಕೆ ಬಂದುದು ದೇವರಾಜ ನಾದ ಶಕ್ರನಿಗೆ ತಿಳಿಯಿತು. ಅವನಿಗೆ ತಕ್ಕ ವಾಸಸ್ಥಾನವನ್ನು ಅಣಿ ಗೊಳಿಸಬೇಕೆಂದು ಶಕ್ರನು ವಿಶ್ವಕರ್ಮನನ್ನು ಕರೆಕಳುಹಿ "ಹೋಗಯ್ಯ, ವಂಕಪರ್ವತದ ರಮಣೀಯಸ್ಥಾನದಲ್ಲಿ ಒಂದು ಆಶ್ರಮವನ್ನು ಕಟ್ಟಿ ಬಾ" ಎಂದನು. ಅವನು ಅದರಂತೆಯೇ ಎರಡು ಪರ್ಣಶಾಲೆಗಳನ್ನೂ, ಅವುಗಳ ಮುಂದೆ ನಡೆದಾಡಲು ಎರಡು ಹಾದಿಗಳನ್ನೂ ಮಾಡಿದನು. ಹಗಲು ರಾತ್ರಿಗಳಲ್ಲಿ ಉಪಯೋಗಿಸಲು ಬೇಕಾದ ಕೋಣೆಗಳನ್ನು ಕಟ್ಟಿ ದನು. ಅಲ್ಲಲ್ಲೆ ಹೂವಿನ ಕಾವಣಗಳನ್ನೂ ಬಾಳೆಯ ತೋಟಗಳನ್ನೂ ಸೃಷ್ಟಿಸಿದನು. ಸಂನ್ಯಾಸಿಗಳಿಗೆ ಬೇಕಾದುದೆಲ್ಲವನ್ನೂ ಅಲ್ಲಿ ಒದಗಿಸಿದನು. ಅಲ್ಲಿದ್ದ ಯಕ್ಷರನ್ನೂ ಭಯಂಕರಧ್ವನಿಮಾಡುವ ಮೃಗಪಕ್ಷಿಗಳನ್ನೂ ಹೊರಗಟ್ಟಿ, "ಸಂನ್ಯಾಸಿಗಳಾಗಿ ಬಂದವರು ಈ ಆಶ್ರಮವನ್ನು ತೆಗೆದು ಕೊಳ್ಳಲಿ" ಎಂದು ಬರೆದು ತಾನು ಹೋದನು.

ವಿಶ್ವಕರ್ಮನು ಮಾಡಿದ ದಾರಿಯಲ್ಲಿ ಮಹಾಸತ್ತ್ವನು ಹೆಂಡತಿ ಮಕ್ಕಳೊಡನೆ ಬಂದನು. ಅವರನ್ನು ಆಶ್ರಮಪದದ ಹೊರಗೆ ನಿಲ್ಲಿಸಿ, ತಾನು ಒಳಗೆ ಹೋಗಿ ಅಲ್ಲಿ ಬರೆದಿದ್ದುದನ್ನು ಕಂಡನು. ತಾನು ಬಂದುದು ಶಕ್ರನಿಗೆ ತಿಳಿಯಿತೆಂದು ಮಹಾಸತ್ತ್ವನಿಗೆ ಗೊತ್ತಾಯಿತು. ಪರ್ಣ ಶಾಲೆಯ ಬಾಗಿಲನ್ನು ತೆಗೆದು, ತನ್ನ ಖಡ್ಗ ಧನುಸ್ಸುಗಳನ್ನು ಅಲ್ಲಿ

ತೊರೆದು, ಬಟ್ಟೆಯನ್ನು ಕಳಚಿ, ಋಷಿವೇಷವನ್ನು ತಾಳಿ, ಸಂನ್ಯಾಸಿದಂಡವನ್ನು ಹಿಡಿದು, ಪರ್ಣಶಾಲೆಯಿಂದ ಹೊರಗೆ ಬಂದು ಹೆಂಡತಿಮಕ್ಕಳಿಗೆ ಕಾಣಿಸಿಕೊಂಡನು. ಮಾದ್ರಿಯು ಮಹಾಸತ್ತ್ವನ ಕಾಲುಗಳನ್ನು ಕಣ್ಣೀರಿನಿಂದ ತೊಳೆದು ಅವನೊಡನೆಯೇ ಆಶ್ರಮಪದವನ್ನು ಪ್ರವೇಶಿಸಿ ತಾನೂ ಒಂದು ಪರ್ಣಶಾಲೆಗೆ ಹೋಗಿ ತಾಪಸವೇಷವನ್ನು ತಾಳಿದಳು. ಬಳಿಕ ಮಕ್ಕಳನ್ನೂ ತಾಪಸಕುಮಾರರನ್ನಾಗಿ ಮಾಡಿದರು. ಹೀಗೆ ಆ ನಾಲ್ವರು ಕ್ಷತ್ರಿಯರೂ ವಂಕಪರ್ವತದಲ್ಲಿ ವಾಸಿಸುತ್ತಿದ್ದರು.

ಆಗ ಮಾದ್ರಿಯು "ದೇವ, ನೀನು ಹಣ್ಣುಹಂಪಲಿಗಾಗಿ ಹೊರಗೆ ಹೋಗಬೇಡ. ಮಕ್ಕಳೊಡನೆ ಇಲ್ಲೇ ಇರು. ನಾನು ಹಣ್ಣುಹಂಪಲು ತರುವೆನು" ಎಂದು ವರ ಬೇಡಿದಳು. ಅಂದಿನಿಂದ ಅವಳು ಕಾಡಿಗೆ ಹೋಗಿ ಹಣ್ಣುಹಂಪಲು ತಂದು ಮೂವರನ್ನೂ ನೋಡಿಕೊಳ್ಳುತ್ತಿದ್ದಳು.

ಬೋಧಿಸತ್ತ್ವನು ಅವಳನ್ನು ಕುರಿತು, "ಮಾದ್ರಿ, ಇಂದಿನಿಂದ ನಾನು ಸಂನ್ಯಾಸಿ. ಸ್ತ್ರೀಯಿದ್ದರೆ ಬ್ರಹ್ಮಚರ್ಯ ಕಷ್ಟ. ಇಂದಿನಿಂದ ನೀನು ಅಕಾಲದಲ್ಲಿ ನನ್ನ ಬಳಿ ಬರಬೇಡ" ಎಂದು ತಾನೂ ಒಂದು ವರ ಬೇಡಿದನು. ಅವಳು ಅದಕ್ಕೆ ಒಪ್ಪಿದಳು.

ಮಹಾಸತ್ತ್ವನಲ್ಲಿ ಉಂಟಾದ ಮೈತ್ರಿಯ ಪ್ರಭಾವದಿಂದ ಮೂರು ಯೋಜನಗಳ ದೂರದ ವರೆಗೆ ಇದ್ದ ಎಲ್ಲ ಪ್ರಾಣಿಗಳೂ ದ್ವೇಷವನ್ನು ಬಿಟ್ಟು ಮೈತ್ರಿಯಿಂದ ಇದ್ದವು. ಮಾದ್ರಿ ಬೆಳಗ್ಗೆ ಅಷ್ಟು ಹೊತ್ತಿಗೆ ಎದ್ದು, ಕುಡಿಯುವುದಕ್ಕೂ ತಿನ್ನುವುದಕ್ಕೂ ಅಣಿಮಾಡುವಳು. ಮುಖ ತೊಳೆಯಲು ನೀರು ತಂದು, ಹಲ್ಲುಜ್ಜಲು ಕಡ್ಡಿ ಕೊಡುವಳು. ಆಶ್ರಮಪದವನ್ನು ಗುಡಿಸುವಳು. ಇಬ್ಬರು ಮಕ್ಕಳನ್ನೂ ತಂದೆಯ ಬಳಿ ನಿಲ್ಲಿಸಿ, ಬುಟ್ಟಿ ಗುದ್ದಲಿ ಪಿಕಾಸಿಗಳನ್ನು ತೆಗೆದುಕೊಂಡು ಕಾಡಿಗೆ ಹೋಗುವಳು. ಗೆಡ್ಡೆಗೆಣಸುಗಳನ್ನೂ ಹಣ್ಣು ಹಂಪಲುಗಳನ್ನೂ ಬುಟ್ಟಿಯಲ್ಲಿ ತುಂಬಿಕೊಂಡು ಸಾಯಂಕಾಲ ಸಮಯದಲ್ಲಿ ಬರುವಳು. ತಾನು ಆಯ್ದು ಕುಯಿದು ತಂದುದನ್ನು ಪರ್ಣಶಾಲೆಯಲ್ಲಿ ಇಟ್ಟು, ಮಕ್ಕಳನ್ನು ಕರೆದು ಸ್ನಾನಮಾಡಿಸುವಳು. ಅನಂತರ ಆ ನಾಲ್ವರೂ ಪರ್ಣಶಾಲೆಯ ಬಾಗಿಲಲ್ಲಿ ಕುಳಿತು, ತಂದ ಹಣ್ಣುಹಂಪಲು ತಿನ್ನುವರು.



ವಿಶ್ವಂತರನು ಆನೆಯನ್ನು ದಾನಕೊಟ್ಟುದು

*Copyright* : Government Museum, Madras.

ಬಳಿಕ ಮಾದ್ರಿ ಇಬ್ಬರು ಮಕ್ಕಳನ್ನೂ ಕೊಂಡು ತನ್ನ ಪರ್ಣಶಾಲೆಗೆ ಹೋಗುವಳು.

ಈ ರೀತಿಯಲ್ಲಿ ಅವರು ವಂಕಪರ್ವತದಲ್ಲಿ ಏಳುಮಾಸ ವಾಸ ಮಾಡಿದರು.

## ದುರ್ನಿವಿಷ್ಟ ಗ್ರಾಮದ ಜೂಜಕ

ಆ ಕಾಲದಲ್ಲಿ ಕಾಳಿಂಗ ರಾಷ್ಟ್ರದಲ್ಲಿ ದುರ್ನಿವಿಷ್ಟವೆಂಬ ಬ್ರಾಹ್ಮಣ ಗ್ರಾಮವಿತ್ತು. ಅಲ್ಲಿ ಜೂಜಕನೆಂಬ ಬ್ರಾಹ್ಮಣನಿದ್ದನು. ಅವನು ಭಿಕ್ಷಾಟನೆಯಿಂದ ನೂರು ನಾಣ್ಯಗಳನ್ನು ಸಂಪಾದಿಸಿ, ಅದನ್ನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇರಿಸಿ, ಪುನಃ ಹಣ ಸಂಪಾದಿಸುವುದಕ್ಕಾಗಿ ಹೋದನು. ಹೋದವನು ಬಹಳ ಕಾಲವಾದರೂ ಹಿಂದಿರುಗದಿರಲು, ಆ ಬ್ರಾಹ್ಮಣನ ಮನೆಯವರು ಆ ನಾಣ್ಯಗಳನ್ನು ಬಳಸಿಕೊಂಡರು. ಆ ಮೇಲೆ ಜೂಜಕನು ಹಿಂದಿರುಗಿ ಬಂದು ಅವರನ್ನು ತನ್ನ ಹಣಕ್ಕೆ ಒತ್ತಾಯಪಡಿಸಿದನು. ಅವರು ಅದನ್ನು ಕೊಡಲು ಶಕ್ತಿಯಿಲ್ಲದೆ, ಅಮಿತ್ರತಾಪನಾ ಎಂಬ ತಮ್ಮ ಮಗಳನ್ನು ಅವನಿಗೆ ಕೊಟ್ಟರು. ಅವನು ಅವಳನ್ನು ಕೊಂಡು ತನ್ನ ಗ್ರಾಮವಾದ ದುರ್ನಿವಿಷ್ಟಕ್ಕೆ ಹೋದನು.

ಅಮಿತ್ರತಾಪನೆಯು ಆ ಬ್ರಾಹ್ಮಣನಿಗೆ ಚೆನ್ನಾಗಿ ಪರಿಚರ್ಯೆಮಾಡುತ್ತಿದ್ದಳು. ಆ ಗ್ರಾಮದ ಇತರ ತರುಣಬ್ರಾಹ್ಮಣರು ಅವಳ ಆಚಾರ ಸಂಪತ್ತಿಯನ್ನು ಕಂಡು " ಇವಳು ಆ ಮುದಿ ಬ್ರಾಹ್ಮಣನನ್ನು ಎಚ್ಚರ ತಪ್ಪದೆ ಸೇವಿಸುವಳು. ನೀವು ನಮ್ಮನ್ನು ಏಕೆ ಕಡೆಗಣಿಸುವಿರಿ ? " ಎಂದು ತಮ್ಮ ಹೆಂಡಿರನ್ನು ಗದರಿಸಿದರು. ಆ ಹೆಂಗುಸರು " ಈ ಅಮಿತ್ರ ತಾಪನೆಯನ್ನು ಈ ಗ್ರಾಮದಿಂದ ಓಡಿಸೋಣ "ವೆಂದು ನದೀತೀರ ಮೊದಲಾದ ಕಡೆ ಕೂಡಿಕೊಂಡು ಅವಳನ್ನು ಹೀಯಾಳಿಸುತ್ತಿದ್ದರು.

ಅಮಿತ್ರತಾಪನೆ ನದಿಯ ಬಳಿ ಬಂದಾಗ ಅವರೆಲ್ಲರೂ ಒಟ್ಟುಸೇರಿ, " ಅಮಿತ್ರತಾಪನೆ, ನಿನ್ನಂತಹ ತರುಣಿಯನ್ನು ಆ ಮುದುಕನಿಗೆ ಕೊಡಬೇಕಾದರೆ ನಿನ್ನ ತಾಯಿಯೂ ತಂದೆಯೂ ನಿನಗೆ ಅಮಿತ್ರರಾಗಿರಬೇಕು. ತರುಣಿಯಾದ ನಿನ್ನನ್ನು ಆ ಮುದುಕನಿಗೆ ಕೊಡುವುದಕ್ಕೋಸ್ಕರ ನಿನ್ನ ಜ್ಞಾತಿಗಳು ಗುಟ್ಟಾಗಿ ಆಲೋಚನೆಮಾಡಿರಬೇಕು. ಇಷ್ಟು ಅಹಿತವಾದುದನ್ನು, ಇಷ್ಟು ಕಠಿನವಾದುದನ್ನು, ಇಷ್ಟು ಪಾಪವಾದುದನ್ನು ಮಾಡಲು ನಿನ್ನ ಜ್ಞಾತಿಗಳು ಎಷ್ಟು ಗುಟ್ಟಾಗಿ ಆಲೋಚನೆಮಾಡಿದರೊ? ಈ ಯೌವನದಲ್ಲಿ ಮುದುಕನೊಡನೆ ವಾಸಮಾಡುವುದು ಪ್ರಿಯವಲ್ಲದ ಕೆಲಸ. ನಿನ್ನ ಈ ಬದುಕಿಗಿಂತ ಸಾವೇ ಮೇಲು. ಇಷ್ಟು ಚಿಕ್ಕವಳಾದ

ನಿನಗೆ ಬೇರೆ ಗಂಡನನ್ನು ನೋಡದೆ ನಿನ್ನ ತಾಯಿ ತಂದೆ ನಿನಗೆ ಬಹಳ ಕೇಡುಮಾಡಿದರು. ಈ ವಯಸ್ಸಿನ ನೀನು ಮುದಿಗಂಡನನ್ನು ಪಡೆಯ ಬೇಕಾದರೆ ಹಿಂದಿನ ಜನ್ಮದಲ್ಲಿ ಸಂನ್ಯಾಸಿಯನ್ನೋ ಬ್ರಾಹ್ಮಣನನ್ನೋ ಬ್ರಹ್ಮಚಾರಿಯನ್ನೋ ನಿಂದಿಸಿರಬೇಕು. ಹಾವು ಕಚ್ಚಿದರಾಗಲಿ, ಶಸ್ತ್ರ ಚುಚ್ಚಿದರಾಗಲಿ, ಅಷ್ಟು ದುಃಖವಾಗುವುದಿಲ್ಲ; ಮುದಿ ಗಂಡನನ್ನು ನೋಡುವ ದುಃಖವೇ ದೊಡ್ಡ ದುಃಖ. ಮುದಿಗಂಡನೊಡನೆ ಆಡುವಂತಿಲ್ಲ, ನಕ್ಕು ಮಾತಾಡುವಂತಿಲ್ಲ; ಅವನು ನಕ್ಕರೂ ಚೆನ್ನಾಗಿರುವುದಿಲ್ಲ. ಯುವಕನು ಯುವತಿಯೊಡನಿದ್ದರೆ ಇಬ್ಬರಿಗೂ ಶೋಕವಿಲ್ಲ. ನೀನು ಇನ್ನೂ ಯುವತಿ, ರೂಪವತಿ. ನಿನ್ನ ಜ್ಞಾತಿಗಳ ಮನೆಗೆ ಹೋಗು. ಮುದುಕನೊಡನೆ ಏನು ಸುಖ?" ಎಂದು ಪರಿಹಾಸಮಾಡಿದರು.

ಅಮಿತ್ರತಾಪನೆ ನೀರು ಗಡಿಗೆಯನ್ನು ಹೊತ್ತು ಅಳುತ್ತಾ ಮನೆಗೆ ಬಂದಳು. ಜೂಜಕನು ಅವಳು ಅಳುವುದನ್ನು ಕಂಡು "ಭವತಿ, ಏಕೆ ಅಳುವೆ?" ಎಂದನು.

ಅದಕ್ಕೆ ಅಮಿತ್ರತಾಪನೆ "ನಾನು ಇನ್ನು ನೀರು ತರಲು ನದಿಗೆ ಹೋಗುವುದಿಲ್ಲ. ನೀನು ಮುದುಕನಾಗಿರುವುದರಿಂದ ಉಳಿದ ಹೆಂಗುಸರು ನನ್ನನ್ನು ನೋಡಿ ನಗುವರು" ಎಂದಳು.

"ನೀನು ನನಗಾಗಿ ಕೆಲಸಮಾಡಬೇಡ, ನನಗಾಗಿ ನೀರು ಹೊರಬೇಡ. ನಾನು ನೀರು ಹೊರುವೆನು. ಕೋಪಮಾಡಬೇಡ, ಭವತಿ."

"ನಿನ್ನಂತೆ ನೀರು ಹೊತ್ತು ತರುವ ಕುಲದಲ್ಲಿ ನಾನು ಹುಟ್ಟಿದವಳಲ್ಲ. ನಾನು ಈ ಮನೆಯಲ್ಲಿ ನಿಲ್ಲುವುದಿಲ್ಲ. ಇದು ಖಂಡಿತ. ಬ್ರಾಹ್ಮಣ, ನೀನು ನನಗಾಗಿ ದಾಸದಾಸಿಯರನ್ನು ಕರೆದುತರದಿದ್ದರೆ, ನಾನು ಇಲ್ಲಿರುವುದಿಲ್ಲ."

"ನನಗೆ ವಿದ್ಯೆಯಿಲ್ಲ, ಧನ ಧಾನ್ಯವಿಲ್ಲ. ನಾನು ನಿನಗೆ ದಾಸದಾಸಿಯರನ್ನು ಎಲ್ಲಿಂದ ತರಲಿ? ನಾನು ನಿನ್ನ ಸೇವೆ ಮಾಡುತ್ತೇನೆ. ಕೋಪಿಸಿಕೊಳ್ಳಬೇಡ, ಭವತಿ."

"ನನ್ನ ಮಾತು ಕೇಳು, ಬ್ರಾಹ್ಮಣ. ವಿಶ್ವಂತರ ರಾಜನು ವಂಕ ಪರ್ವತದಲ್ಲಿದ್ದಾನೆ. ನೀನು ಅವನಲ್ಲಿಗೆ ಹೋಗಿ ದಾಸದಾಸಿಯರನ್ನು ಬೇಡು. ಆ ಕ್ಷತ್ರಿಯನು ನೀನು ಬೇಡಿದುದನ್ನು ನೀಡುವನು."

"ನಾನು ಮುದುಕ, ಬಲವಿಲ್ಲದವ. ದಾರಿಯೋ ದೂರ, ಹೋಗಲು ಕಷ್ಟ. ಚಿಂತಿಸಬೇಡ, ಭವತಿ, ಖಿನ್ನಳಾಗಬೇಡ. ನಾನು ನಿನ್ನ ಸೇವೆಮಾಡುತ್ತೇನೆ. ಕುಪಿತಳಾಗಬೇಡ, ಭವತಿ."

"ಯುದ್ಧಕ್ಕೆ ಹೋಗದೆಯೆ ಯುದ್ಧಮಾಡದೆಯೆ ಸೋತಹಾಗೆ ನೀನು ಹೋಗದೆಯೆ ಸೋತುಹೋದೆ, ಬ್ರಾಹ್ಮಣ. ನೀನು ದಾಸದಾಸಿಯರನ್ನು ಕರೆದು ತರದಿದ್ದರೆ ನಾನು ನಿನ್ನ ಮನೆಯಲ್ಲಿ ವಾಸಮಾಡುವುದಿಲ್ಲ. ಇದು ಖಂಡಿತ. ನಕ್ಷತ್ರಗಳೂ ಋತುಗಳೂ ಬದಲಾಯಿಸಿದಂತೆಲ್ಲ ನಾನು ಅಲಂಕಾರಮಾಡಿಕೊಂಡು ಬೇರೆಯವರೊಡನೆ ನಲಿಯುವಾಗ, ಆಗ ನೀನು ದುಃಖಪಡುವೆ. ಮುದುಕನಾದ ನೀನು ನನ್ನನ್ನು ಕಾಣದೆ ಆಗ ಗೋಳಾಡುವೆ. ನಿನ್ನ ಮುಖದ ತೆರೆಯೂ ತಲೆಯ ನರೆಯೂ ಆಗ ಹೆಚ್ಚುವುವು, ಬ್ರಾಹ್ಮಣ."

ಅಮಿತ್ರತಾಪನೆಯ ಆ ಮಾತು ಕೇಳಿ ಬ್ರಾಹ್ಮಣನಿಗೆ ಭಯವಾಯಿತು. ಅವನಿಗೆ ಬ್ರಾಹ್ಮಣಿಯ ಮೇಲೆ ಮೋಹವಿತ್ತು. ಅದಕ್ಕಾಗಿ "ದಾರಿಗೆ ಬೇಕಾದ ರೊಟ್ಟಿಗಳನ್ನೂ ದೋಸೆಗಳನ್ನೂ ಸಿಹಿಯುಂಡೆಗಳನ್ನೂ ಬುತ್ತಿಕಟ್ಟು. ಜಾತಿಕುಲಗೋತ್ರಗಳಲ್ಲಿ ಸಮಾನರಾದ ಇಬ್ಬರು ದಾಸ ಕುಮಾರಕರನ್ನು ಕರೆತರುವೆನು. ಅವರು ಹಗಲೂರಾತ್ರಿ ಎಚ್ಚರ ತಪ್ಪದೆ ನಿನ್ನ ಸೇವೆಮಾಡುವರು" ಎಂದನು.

ಅವಳು ಬೇಗನೆ ಬುತ್ತಿಯನ್ನು ಅಣಿಮಾಡಿ ಅವನಿಗೆ ತಿಳಿಸಿದಳು. ಅವನು ಮನೆಯಲ್ಲಿ ಮುರಿದ ಕಡೆಗಳನ್ನು ಭದ್ರಮಾಡಿ, ಬಾಗಿಲನ್ನು ಬಿಗಿಪಡಿಸಿ, ಕಾಡಿನಿಂದ ಕಟ್ಟಿಗೆ ತಂದು, ಗಡಿಗೆಯಲ್ಲಿ ನೀರು ತಂದು ಎಲ್ಲ ಪಾತ್ರೆಗಳನ್ನೂ ತುಂಬಿ, ಅಲ್ಲಿಯೇ ತಾಪಸವೇಷವನ್ನು ತಾಳಿ, "ಭದ್ರೆ, ಅಕಾಲದಲ್ಲಿ ಹೊರಗೆ ಹೋಗಬೇಡ. ನಾನು ಬರುವವರೆಗೆ ಜಾಗರೂಕತೆಯಿಂದಿರು" ಎಂದು ಬುದ್ಧಿಹೇಳಿ, ಕಾಲಿಗೆ ಮೆಟ್ಟನ್ನು ಏರಿಸಿ, ಬುತ್ತಿಯ

ಹಸುಬೆಯನ್ನು ಹೆಗಲಿಗೆ ಸೇರಿಸಿ, ಅಮಿತ್ರತಾಪನೆಯನ್ನು ಬಲಗಡೆಯಿಂದ ಬಳಸಿಕೊಂಡು ಕಣ್ಣೀರು ಸುರಿಸುತ್ತ ಹೊರಟನು.

## ವಂಕಪರ್ವತದ ದಾರಿಯಲ್ಲಿ

ಹೊರಟವನು ಶಿಬಿಗಳ ನಗರಕ್ಕೆ ಬಂದನು. ಅಲ್ಲಿ ಸೇರಿದ್ದ ಜನರನ್ನು ಕುರಿತು "ವಿಶ್ವಂತರನು ಎಲ್ಲಿ? ಆ ಕ್ಷತ್ರಿಯನನ್ನು ನಾನು ಎಲ್ಲಿ ಕಾಣಬಹುದು?" ಎಂದು ಕೇಳಿದನು. ಅದಕ್ಕೆ ಆ ಜನ "ನಿಮ್ಮಂತಹರಿಗೆ ತೋರಿಸಿದ ಅತಿದಾನದಿಂದಲೇ ಆ ಕ್ಷತ್ರಿಯನು ಸ್ವಂತ ರಾಷ್ಟ್ರವನ್ನು ಬಿಟ್ಟು ಹೋಗಬೇಕಾಯಿತು. ನಿಮ್ಮಂತಹರಿಗೆ ಕೊಟ್ಟ ಅತಿದಾನದಿಂದಲೇ ಆತನು ಹೆಂಡತಿ ಮಕ್ಕಳೊಡನೆ ವಂಕಪರ್ವತದಲ್ಲಿ ವಾಸಿಸಬೇಕಾಯಿತು. ಹೀಗೆ ನಮ್ಮ ರಾಜನನ್ನು ನಾಶಮಾಡಿ, ಪುನಃ ಬಂದೆಯ? ಇಲ್ಲೆ ನಿಲ್ಲು" ಎಂದು ಅವರು ಮಣ್ಣುಹೆಂಟೆ ದೊಣ್ಣೆ ಮೊದಲಾದುವನ್ನು ಕೈಯಲ್ಲಿ ಕೊಂಡು ಅವನನ್ನು ಬೆನ್ನಟ್ಟಿದರು. ದೇವತೆಗಳು ಅವನ ಕಾಲನ್ನು ತಿರುಗಿಸಿದರು, ಅವನು ವಂಕಪರ್ವತದ ಹಾದಿ ಹಿಡಿದನು.

ಹೀಗೆ ತನ್ನ ಬ್ರಾಹ್ಮಣಿಯಲ್ಲಿ ಆಸಕ್ತನಾಗಿ ಅವನು ಕ್ರೂರಮೃಗಗಳು ತುಂಬಿದ ಕಾಡನ್ನೂ ಹೊಕ್ಕನು. ತನ್ನ ದಂಡ ಕಮಂಡಲು ದರ್ವಿಗಳನ್ನು ಹಿಡಿದುಕೊಂಡು ಬೇಡಿದುದನ್ನು ಕೊಡುವವನು ವಾಸಿಸುತ್ತಿದ್ದ ಕಾಡನ್ನು ಹೊಕ್ಕನು. ಆ ಮಹಾರಣ್ಯದಲ್ಲಿ ತೋಳಗಳು ಅವನನ್ನು ಸುತ್ತುಗಟ್ಟಿದುವು. ಅವನು ಕೂಗಿಕೊಳ್ಳುತ್ತ ದಾರಿತಪ್ಪಿ ಮಾರ್ಗದಿಂದ ದೂರವಾದನು. ಆಗ ಆ ಆಸೆಬುರುಕನು ವಂಕಪರ್ವತದ ದಾರಿಯನ್ನು ಕಳೆದುಕೊಂಡು, "ಜಯಂತನೂ ಅಪರಾಜಿತನೂ ಆದ ರಾಜಪುತ್ರ ವಿಶ್ವಂತರನೆಲ್ಲಿ? ಭಯಗೊಂಡವರಿಗೆ ಕ್ಷೇಮವನ್ನು ಕಾಣಿಸುವ ವಿಶ್ವಂತರನೆಲ್ಲಿ? ಪ್ರಾಣಿಗಳಿಗೆ ಭೂಮಿ ಹೇಗೋ ಹಾಗೆ ಯಾಚಕರಿಗೆ ಆಶ್ರಯನಾದ ವಿಶ್ವಂತರನೆಲ್ಲಿ? ಹರಿಯುವ ಹೊಳೆಗಳಿಗೆ ಸಾಗರ ಹೇಗೋ ಹಾಗೆ ಯಾಚಿಸುವವರಿಗೆ ಗತಿಯಾದ ಅವನೆಲ್ಲಿ? ಸಮುದ್ರಸಮಾನನಾದ ವಿಶ್ವಂತರನೆಲ್ಲಿ? ಕುಡಿಯಲು ಯೋಗ್ಯವಾದ ತಣ್ಣೀರಿನಿಂದ ತುಂಬಿ,

ಮನೋರಮವಾಗಿ, ಪುಂಡರೀಕಗಳ ಕೇಸರಗಳಿಂದ ಮುಚ್ಚಿಹೋದ ಕೊಳದಂತಹ ವಿಶ್ವಂತರ ಮಹಾರಾಜನೆಲ್ಲಿ? ಶೀತಲವಾದ ತನ್ನ ನೆರಳಿನಿಂದ ಶ್ರಾಂತರಿಗೆ ವಿಶ್ರಾಂತಿ ಕೊಟ್ಟು ಕ್ಲೇಶಗೊಂಡವರಿಗೆ ಆಶ್ರಯ ಕೊಡುವ ಮಾರ್ಗಮಧ್ಯದ ಮಹಾ ಅಶ್ವತ್ಥದಂಥವನು ಎಲ್ಲಿ? ಆ ಮಹಾ ನ್ಯಗ್ರೋಧದಂಥವನು ಎಲ್ಲಿ? ಆ ಮಹಾ ಆಮ್ರದಂಥವನು ಎಲ್ಲಿ? ಆ ಮಹಾ ಶಾಲದಂಥವನು ಎಲ್ಲಿ? ಅಯ್ಯೊ, ಈ ಮಹಾರಣ್ಯದಲ್ಲಿ ನಾನು ಗೋಳಾಡುವೆನಲ್ಲ! ವಿಶ್ವಂತರನನ್ನು ನನಗೆ ತಿಳಿಸಿಕೊಟ್ಟರೆ ನನಗೆ ಆನಂದವಾಗುವುದು. ತಿಳಿಸಿಕೊಟ್ಟವನಿಗೆ ಬಹಳ ಪುಣ್ಯ ಬರುವುದು" ಎಂದು ಈ ರೀತಿಯಲ್ಲಿ ಗೋಳಾಡಿದನು.

## ಚೇತಪುತ್ರ

ಚೇತರು ವಿಶ್ವಂತರನ ರಕ್ಷಣೆಗಾಗಿ ನಿಲ್ಲಿಸಿದ್ದ ಚೇತಪುತ್ರನು ಆ ಗೋಳು ಕೇಳಿದನು. ಬೇಟೆಯನ್ನು ಹುಡುಕಿಕೊಂಡು ಕಾಡಿನಲ್ಲಿ ತಿರುಗುತ್ತ "ಈತನು ವಿಶ್ವಂತರನ ವಾಸಸ್ಥಾನಕ್ಕಾಗಿ ಗೋಳಾಡುವನು. ಇವನು ಒಳ್ಳೆಯದಕ್ಕಾಗಿ ಇಲ್ಲಿಗೆ ಬಂದವನಲ್ಲ. ಮಾದ್ರಿಯನ್ನೋ ಮಕ್ಕಳನ್ನೋ ಬೇಡಬಂದವನು. ಇವನನ್ನು ಇಲ್ಲಿಯೇ ಕೊಲ್ಲುವೆನು" ಎಂದು ಚಿಂತಿಸಿ, ಅವನ ಬಳಿ ಬಂದು, "ಬ್ರಾಹ್ಮಣ, ನಿನ್ನನ್ನು ಉಳಿಯಗೊಡುವುದಿಲ್ಲ. ನಿನ್ನಂತಹರಿಗೆ ತೋರಿಸಿದ ಅತಿದಾನದಿಂದಲೇ ಆ ಕ್ಷತ್ರಿಯನು ಸ್ವಂತರಾಷ್ಟ್ರವನ್ನು ಬಿಟ್ಟು, ಹೆಂಡತಿ ಮಕ್ಕಳೊಡನೆ ವಂಕಪರ್ವತದಲ್ಲಿ ವಾಸಿಸಬೇಕಾಗಿದೆ. ಬಕವು ನೀರಿನಲ್ಲಿ ಮೀನು ಹುಡುಕುವಂತೆ ಆ ರಾಜಪುತ್ರನನ್ನು ಹುಡುಕುತ್ತ ಊರಿನಿಂದ ಕಾಡಿಗೆ ಬಂದ ನೀನು ಮಾಡಬಾರದುದನ್ನು ಮಾಡಿರುವೆ. ನಾನು ನಿನ್ನನ್ನು ಉಳಿಯಗೊಡವೊಲ್ಲೆ. ನಾನು ಬಿಡುವ ಬಾಣ ನಿನ್ನ ರಕ್ತವನ್ನು ಹೀರುವುದು. ನಿನ್ನ ತಲೆಯನ್ನು ಸೀಳಿ, ನಿನ್ನ ಹೃದಯವನ್ನು ಕತ್ತರಿಸಿ, ನಿನ್ನ ಮಾಂಸದಿಂದ ದಾರಿಯ ಹಕ್ಕಿಗಳಿಗೆ ಯಾಗಮಾಡುವೆನು. ನಿನ್ನ ಮಾಂಸ, ಮೇಧಸ್ಸು, ತಲೆ, ಹೃದಯಗಳನ್ನು ತೆಗೆದು ಆಹುತಿಕೊಡುವೆನು. ನಿನ್ನ ಮಾಂಸದಿಂದ ಒಳ್ಳೆಯ ಯಾಗವಾಗುವುದು, ಒಳ್ಳೆಯ ಹೋಮವಾಗುವುದು. ನಮ್ಮ

ರಾಜಪುತ್ರನ ಹೆಂಡತಿಯನ್ನಾಗಲಿ ಮಕ್ಕಳನ್ನಾಗಲಿ ನೀನು ಒಯ್ಯಲಾರೆ" ಎಂದು ಧನುಸ್ಸನ್ನು ಎಳೆದು ಗದರಿಸಿದನು.

ಜೂಜಕನು ಅವನ ಮಾತು ಕೇಳಿ, ಮರಣಭಯದಿಂದ ಬೆದರಿ, ಸುಳ್ಳುಹೇಳುತ್ತ "ಚೇತಪುತ್ರ, ನನ್ನ ಮಾತು ಕೇಳು. ದೂತನಾದ ಬ್ರಾಹ್ಮಣನನ್ನು ಕೊಲ್ಲಬಾರದು. ದೂತನನ್ನು ಕೊಲ್ಲುವುದಿಲ್ಲವೆಂಬುದು ಸನಾತನಧರ್ಮ. ಶಿಬಿಗಳೆಲ್ಲರೂ ಈಗ ಶಾಂತರಾಗಿದ್ದಾರೆ. ತಂದೆ ಅವನನ್ನು ಕಾಣಬಯಸುತ್ತಾನೆ. ಅವನ ತಾಯಿ ದುರ್ಬಲಳು. ಬಹುಕಾಲ ಅತ್ತು ಅವಳ ಕಣ್ಣು ಕರಗಿಹೋಗಿದೆ. ನಾನು ಅವರು ಕಳುಹಿಸಿದ ದೂತ. ನಾನು ರಾಜಪುತ್ರನನ್ನು ಕರೆದೊಯ್ಯುವೆನು. ತಿಳಿದಿದ್ದರೆ ಹೇಳು" ಎಂದನು.

ಆಗ ಚೇತಪುತ್ರನು 'ಇವನು ವಿಶ್ವಂತರನನ್ನು ಕರೆದುಕೊಂಡು ಹೋಗುವನು' ಎಂದು ಸಮಾಧಾನಪಟ್ಟು, ನಾಯಿಗಳನ್ನು ಕಟ್ಟಿಹಾಕಿ ನಿಲ್ಲಿಸಿ, ಜೂಜಕನನ್ನು ಕೆಳಗಿಳಿಸಿ, ಕೊಂಬೆಗಳ ನಡುವೆ ಕುಳ್ಳಿರಿಸಿದನು. ಅನಂತರ "ನೀನು ನನಗೆ ಪ್ರಿಯನಾದ ವಿಶ್ವಂತರನ ಪ್ರಿಯದೂತ. ನಿನಗೆ ನಾನು, ಇದೊ, ಪೂರ್ಣಪಾತ್ರ ಕೊಡುವೆನು. ಇದು ಮಧುಕುಂಭ, ಇದು ಮೃಗಮಾಂಸ" ಎಂದು ಅವನಿಗೆ ಊಟಮಾಡಿಸಿ, ದಾರಿಗೆ ಬುತ್ತಿ ಕಟ್ಟಿಕೊಟ್ಟು, ಅವನಿಗೆ ಮಹಾಸತ್ತ್ವನ ವಾಸಸ್ಥಾನವನ್ನು ತೋರಿಸಿದನು. ಬಲಗೈಯನ್ನು ಮೇಲೆತ್ತಿ "ಮಹಾಬ್ರಾಹ್ಮಣ, ಆ ಶೈಲವೆ ಗಂಧಮಾದನ. ಅಲ್ಲಿ ವಿಶ್ವಂತರನು ತನ್ನ ಹೆಂಡತಿ ಮಕ್ಕಳೊಡನೆ ಇರುವನು. ಬ್ರಾಹ್ಮಣರಂತೆ ರೂಪುತಾಳಿ, ಹೂ ಕೊಯ್ಯುವ ಕೋಲು ಚಮಚ ಜಟೆಗಳನ್ನು ಧರಿಸಿ, ಚರ್ಮ ಹೊದೆದು, ನೆಲದಮೇಲೆ ಮಲಗಿ, ಅಗ್ನಿಗೆ ನಮಸ್ಕರಿಸುವನು. ಅದೊ ಅಲ್ಲಿ, ಹಣ್ಣಿನ ಮರಗಳಿಂದ ಹಸುರಾದ ಪರ್ವತಪಾರ್ಶ್ವದಲ್ಲಿ, ಆ ನೀಲಿಯ ಅಂಜನಪರ್ವತಗಳ ಶಿಖರಗಳು ಮುಗಿಲಿನಲ್ಲಿ ಮರೆಯಾಗುವಲ್ಲಿ, ಧವ ಅಶ್ವಕರ್ಣ ಖದಿರ ಶಾಲ ಸ್ಪಂದನ ಮಾಲುವಾ ಮುಂತಾದ ಮರಗಳು ಕುಡಿದವರಂತೆ ತೂಗಾಡುತ್ತವೆ. ಮೇಲೆ ಆ ಮರಗಳ ಸಾಲಿನಲ್ಲಿ ನಜ್ಜುಹಾ ಮತ್ತು ಕೋಗಿಲೆಗಳ ಗುಂಪು ಮರದಿಂದ ಮರಕ್ಕೆ ಹಾರುತ್ತ, ಹೋಗುವವರನ್ನು ಹಾಡಿನಿಂದ ಕರೆದು

ಸಂತೋಷಪಡಿಸುತ್ತವೆ. ಅಲ್ಲಿ ವಿಶ್ವಂತರನು ತನ್ನ ಹೆಂಡತಿ ಮಕ್ಕಳೊಡನೆ ತಾಪಸರೂಪಿನಿಂದ ವಾಸಿಸುತ್ತಿರುವನು" ಎಂದು ತೋರಿಸಿದನು.

## ಆಶ್ರಮ ವರ್ಣನೆ

ಆ ಬಳಿಕ ಮಹಾಸತ್ವನ ಆಶ್ರಮಪದವನ್ನು ಕುರಿತು "ಅಲ್ಲಿ ಮಾವು, ಹಲಸು, ನೆಲ್ಲಿ, ಬೇಲ, ಶಾಲ, ಜಂಬೂ, ಅಂಜೂರ, ಖರ್ಜೂರ ಮುಂತಾದ ಸಿಹಿಸಿಹಿಯಾದ ಹಣ್ಣು ಸಮೃದ್ಧವಾಗಿದೆ. ಕೆಲವು ಮಾವುಗಳಲ್ಲಿ ಇನ್ನೂ ಹೂವು, ಕೆಲವದರಲ್ಲಿ ಆಗಲೇ ಹಣ್ಣು. ಕೆಲವು ಆಗಲೇ ಪಕ್ವವಾಗಿವೆ, ಕೆಲವು ಇನ್ನೂ ಕಪ್ಪೆಯಬಣ್ಣದ ಕಸುಗಾಯಿ. ಬಣ್ಣ ವಾಸನೆ ರುಚಿ ಗಳಿಂದ ಉತ್ತಮವಾದ ಆ ಮಾವುಗಳನ್ನು ಒಬ್ಬನು ಕೆಳಗೆ ನಿಂತೇ ಕುಯ್ಯಬಹುದು. ದೇವತೆಗಳ ಆವಾಸವಾದ ನಂದನದಂತಹ ಈ ಆಶ್ಚರ್ಯಕ್ಕೆ ಕೂಗಿಕೊಳ್ಳುವಂತಾಗುವುದು. ಆ ಮಹಾವನದ ತುಂಬ ತಾಳೆ, ತೆಂಗು, ಖರ್ಜೂರಗಳು. ಆಕಾಶದ ನಕ್ಷತ್ರಗಳಂತಿರುವ ನಾನಾ ವರ್ಣದ ಹೂಗಳು ಹಾರುವ ಬಾವುಟದ ತುದಿಯ ಮಾಲೆಗಳಂತೆ ಕಾಣು ತ್ತವೆ. ತಗರ, ಪಾಟಲಿ, ಪುನ್ನಾಗ, ಗಿರಿಪುನ್ನಾಗ, ಅಗರು ಮುಂತಾದ ಅನೇಕ ಮರಗಳು ದಟ್ಟವಾಗಿವೆ. ಅಲ್ಲಿಯೇ ಬಳಿಯಲ್ಲಿ ಪದ್ಮ ಉತ್ಪಲ ಗಳಿಂದ ಮುಚ್ಚಿಹೋದ ಪುಷ್ಕರಿಣಿಯು ದೇವತೆಗಳ ನಂದನದಂತಿದೆ. ಅಲ್ಲಿ, ಋತುವಿನ ಹೂವುಗಳ ರಸದಿಂದ ಮದಿಸಿದ ಕೋಗಿಲೆಗಳ ಕೂಗಿಗೆ ಗಿರಿಗಳು ಧ್ವನಿಕೊಡುತ್ತವೆ. ಪ್ರತಿ ಪುಷ್ಕರದಿಂದಲೂ ಮಕ ರಂದ ತೊಟ್ಟಿಕ್ಕುತ್ತದೆ. ದಕ್ಷಿಣದಿಂದಲೂ ಪಶ್ಚಿಮದಿಂದಲೂ ಗಾಳಿ ಬೀಸುತ್ತದೆ. ಪದ್ಮಪರಾಗವು ಆಶ್ರಮದ ಮೇಲೆಲ್ಲ ಆವರಿಸುತ್ತದೆ. ಕೊಳದ ಸುತ್ತಿನ ಸಸ್ಯಗಳಿಂದ ಬಿದ್ದ ತೆರತೆರದ ಕಾಳುಗಳನ್ನು ಅನೇಕ ಮೀನು ಆಮೆ ನಳ್ಳಿಗಳು ಆಯಲು ಓಡಾಡುತ್ತವೆ. ಪ್ರತಿಯೊಂದು ಹೂವಿ ನಿಂದಲೂ ಮೃಣಾಳದಿಂದಲೂ ಮಕರಂದವು ಹಾಲಿನಂತೆ, ತುಪ್ಪದಂತೆ ತೊಟ್ಟಿಕ್ಕುತ್ತದೆ. ಪುಷ್ಪಗಂಧಕ್ಕೆ ಧ್ವನಿಗುಡುತ್ತ ದುಂಬಿಗಳು ಹಾರಾ ಡುತ್ತವೆ. ಅಲ್ಲಿ ಅನೇಕ ಬಣ್ಣಗಳ ಬಹು ಹಕ್ಕಿಗಳು ತಮ್ಮ ಹೆಂಡಿ ರೊಡನೆ ಕೂಗುಕರೆಯುತ್ತ ಸಂತೋಷದಿಂದಿರುತ್ತವೆ, ಒಂದನ್ನೊಂದು ಪ್ರೀತಿಯ ಹೆಸರಿನಿಂದ ಕರೆಯುತ್ತವೆ. ಅಲ್ಲಿ ನಾನಾ ಬಣ್ಣಗಳ ನಾನಾ

ವಾಸನೆಗಳ ಹೂಗಳು ಹಾರಾಡುವ ಬಾವುಟದ ತುದಿಯ ಮಾಲಿಗಳಂತಿವೆ. ಅಲ್ಲಿ ವಿಶ್ವಂತರನು ಹೆಂಡತಿಮಕ್ಕಳೊಡನೆ ತಾಪಸರೂಪಿನಿಂದ ವಾಸಿಸುತ್ತಿರುವನು" ಎಂದು ವರ್ಣಿಸಿದನು.

ಹೀಗೆ ಚೇತಪುತ್ರನು ವಿಶ್ವಂತರನ ವಾಸಸ್ಥಾನವನ್ನು ವರ್ಣಿಸಲು ಜೂಜಕನಿಗೆ ಸಂತೋಷವಾಯಿತು. ಅವನು ಆ ಚೇತಪುತ್ರನನ್ನು ಆದರಿಸುತ್ತ "ಇದೊ ಜೇನುತುಪ್ಪದಲ್ಲಿ ಅದ್ದಿದ್ದ ರೊಟ್ಟಿ, ಇದೊ ಸಿಹಿಯುಂಡೆ" ಎಂದು ಕೊಡಲುಹೋದನು. ಅದಕ್ಕೆ ಚೇತಪುತ್ರನು "ಬೇಡ. ಆ ಬುತ್ತಿ ನಿನಗೇ ಇರಲಿ. ಇದನ್ನೂ ತೆಗೆದುಕೊ. ನಿನ್ನ ದಾರಿ ಸುಗಮವಾಗಲಿ. ಈ ಕಾಲುದಾರಿಯಲ್ಲಿ ನೇರವಾಗಿ ಹೋದರೆ ಒಂದು ಆಶ್ರಮ ಸಿಕ್ಕುವುದು. ಅಲ್ಲಿ ಅಚ್ಯುತನೆಂಬ ಋಷಿಯಿರುವನು. ನೀನು ಅವನಲ್ಲಿಗೆ ಹೋಗಿ ಕೇಳು. ಅವನು ನಿನಗೆ ಮುಂದಿನ ಮಾರ್ಗವನ್ನು ತಿಳಿಸುವನು" ಎಂದನು. ಜೂಜಕನು ಅವನನ್ನು ಬಲಗಡೆಯಿಂದ ಬಳಸಿಕೊಂಡು, ಉಲ್ಲಾಸದಿಂದ ಅಚ್ಯುತ ಋಷಿಯಿದ್ದಲ್ಲಿಗೆ ಹೋದನು.

## ಅಚ್ಯುತ ಋಷಿ

ಜೂಜಕನು ಅಚ್ಯುತ ಋಷಿಯನ್ನು ಕಂಡು "ತಮಗೆ ಕುಶಲ ತಾನೆ? ತಾವು ಕ್ಷೇಮ ತಾನೆ? ಕಂದಮೂಲಗಳೂ ಫಲಗಳೂ ಸಮೃದ್ಧವಾಗಿವೆಯಷ್ಟೆ? ಸೊಳ್ಳೆಗಳೂ ನೊಣಗಳೂ ಹರಿದಾಡುವ ಜಂತುಗಳೂ ಹೆಚ್ಚಾಗಿಲ್ಲವಷ್ಟೆ? ಕ್ರೂರ ಮೃಗಗಳು ತುಂಬಿದ ಕಾಡಿನಲ್ಲಿ ಹಿಂಸೆಯೇನೂ ಇಲ್ಲ ತಾನೆ?" ಎಂದು ಕೇಳಿದನು.

ಅದಕ್ಕೆ ಅಚ್ಯುತ ತಾಪಸನು "ನನಗೆ ಕುಶಲ, ಬ್ರಾಹ್ಮಣ. ನಾನು ಕ್ಷೇಮ. ಕಂದಮೂಲಫಲಗಳು ನನಗೆ ಸಮೃದ್ಧವಾಗಿವೆ. ಸೊಳ್ಳೆ ನೊಣಗಳೂ ಹರಿದಾಡುವ ಜಂತುಗಳೂ ಅಷ್ಟೇನೂ ಹೆಚ್ಚಾಗಿಲ್ಲ. ಕ್ರೂರಮೃಗಗಳಿಂದ ನನಗೇನೂ ಹಿಂಸೆಯಿಲ್ಲ. ನಾನು ಈ ಆಶ್ರಮದಲ್ಲಿ ಅನೇಕ ವರ್ಷಗಳಿಂದ ಇದ್ದೇನೆ. ನನಗೆ ಏನೂ ಅಪ್ರಿಯವಾಗಿಲ್ಲ. ಮಹಾಬ್ರಾಹ್ಮಣ, ನಿನಗೆ ಸ್ವಾಗತ. ನೀನು ಬಂದುದು ಒಳ್ಳೆಯದಾಯಿತು.

ಒಳಗೆ ಬಾ. ನಿನಗೆ ಮಂಗಳವಾಗಲಿ. ಕಾಲು ತೊಳೆದುಕೊ. ಇದೊ, ಬಗೆಬಗೆಯ ಒಳ್ಳೆಯ ಹಣ್ಣುಗಳನ್ನು ತಿನ್ನು. ಇದೊ, ಗಿರಿಗುಹೆಯಿಂದ ತಂದ ಶೀತಲವಾದ ನೀರು. ಬೇಕಾದರೆ ಇದನ್ನೂ ಕುಡಿ" ಎಂದನು.

"ನೀನು ಕೊಟ್ಟ ದಾನವನ್ನೂ ಅರ್ಘ್ಯವನ್ನೂ ನಾನು ಸ್ವೀಕರಿಸಿದೆ. ಶಿಬಿಗಳು ರಾಜ್ಯದಿಂದ ಅಟ್ಟಿದ ಸಂಜಯನ ಸ್ವಂತ ಮಗನನ್ನು ಕಾಣಲು ಬಂದಿದ್ದೇನೆ. ತಿಳಿದಿದ್ದರೆ ನನಗೆ ತೋರಿಸು."

"ನೀನು ಶಿಬಿರಾಜನನ್ನು ಕಾಣುವ ಪುಣ್ಯಕ್ಕಾಗಿ ಬಂದಿಲ್ಲ. ಅವನ ಪತಿವ್ರತೆಯಾದ ಹೆಂಡತಿಯನ್ನು ಬೇಡಲು ಬಂದಂತೆ ಕಾಣುತ್ತದೆ. ಕೃಷ್ಣಾಜಿನೆಯನ್ನು ದಾಸಿಯನ್ನಾಗಿ, ಜಾಲಿಯನ್ನು ದಾಸನನ್ನಾಗಿ ಬೇಡಲು ಬಂದಂತೆ ಕಾಣುತ್ತದೆ. ಅಥವಾ ತಾಯಿಮಕ್ಕಳು ಮೂವರನ್ನೂ ಕಾಡಿನಿಂದ ಒಯ್ಯಲು ಬಂದಿರಬೇಕು. ಅವನಲ್ಲಿ ಬೇರೆ ಐಶ್ವರ್ಯಗಳಿಲ್ಲ, ಧನಧಾನ್ಯಗಳಿಲ್ಲ."

"ನಾನು ಕೇಡುಮಾಡುವವನಲ್ಲ, ಬೇಡಲು ಬಂದವನಲ್ಲ. ಯೋಗ್ಯರಾದವರನ್ನು ಕಾಣುವುದರಿಂದ ಮೇಲುಂಟು. ಅವರೊಡನೆ ಇರುವುದರಿಂದ ಸದಾ ಸುಖವುಂಟು. ವಿಶ್ವಂತರನನ್ನು ನಾನು ಹಿಂದೆ ಕಂಡಿಲ್ಲ. ಅವನನ್ನು ಕಾಣಲು ಬಂದಿರುವೆನು. ತಿಳಿದಿದ್ದರೆ ತೋರಿಸು."

ಅಚ್ಯುತನು ಜೂಜಕನನ್ನು ನಂಬಿ, "ಆಗಲಿ, ತಿಳಿಸುತ್ತೇನೆ. ಈ ಹೊತ್ತು ಮಾತ್ರ ನನ್ನಲ್ಲಿ ನಿಲ್ಲು" ಎಂದು ಅವನಿಗೆ ಹಣ್ಣುಹಂಪಲುಗಳನ್ನು ಕೊಟ್ಟು ತೃಪ್ತಿಪಡಿಸಿದನು. ಮಾರನೆಯ ದಿನ ಅವನಿಗೆ ದಾರಿ ತೋರಿಸುತ್ತ ಗಂಧಮಾದನ ಪರ್ವತವನ್ನೂ ಚತುರಸ್ರ ಪುಷ್ಕರಿಣಿಯನ್ನೂ ಮುಚಲಿಂದ ಸರಸ್ಸನ್ನೂ ವರ್ಣಿಸಿದನು.

ಹೀಗೆ ಅಚ್ಯುತತಾಪಸನು ವರ್ಣಿಸಿದ ಮಾರ್ಗದಲ್ಲೇ ಜೂಜಕನು ಮುಂದೆ ಹೋದನು. ಚತುರಸ್ರ ಪುಷ್ಕರಿಣಿಯನ್ನು ಸಮೀಪಿಸಿದಾಗ "ಅತಿ ಸಾಯಂಕಾಲವಾಗಿದೆ. ಈ ವೇಳೆಗೆ ಮಾದ್ರಿ ಅರಣ್ಯದಿಂದ ಹಿಂದಿರುಗುವಳು. ಸ್ತ್ರೀಯರು ಯಾವ ಕೆಲಸಕ್ಕೂ ಅಡ್ಡಿ ಬರುವವರು. ನಾಳೆ ಅವಳು ಕಾಡಿಗೆ ಹೋದ ಕಾಲದಲ್ಲಿ ವಿಶ್ವಂತರನ ಮಕ್ಕಳನ್ನು

ಬೇಡುವೆನು. ಮಾದ್ರಿ ಬರುವುದಕ್ಕೆ ಮುಂಚೆಯೇ ಅವರನ್ನು ಕೊಂಡು ಹೋಗುವೆನು" ಎಂದು ಆಲೋಚಿಸಿ, ಅಲ್ಲಿಯೇ ಬಳಿಯ ಬೆಟ್ಟದ ಮೇಲೆ ಹಿತವಾದ ಕಡೆ ಮಲಗಿದನು.

## ಮಾದ್ರಿಯ ಕನಸು

ಮಾರನೆಯ ಬೆಳಗಿನ ಜಾವದಲ್ಲಿ ಮಾದ್ರಿ ಸ್ವಪ್ನಕಂಡಳು. ಸ್ವಪ್ನದಲ್ಲಿ ಒಬ್ಬ ಕರಿಯನು ಕಾಷಾಯ ವಸ್ತ್ರಗಳನ್ನು ಧರಿಸಿ ಬಂದನು. ಅವನ ಎರಡು ಕಿವಿಗಳಲ್ಲೂ ರಕ್ತಮಾಲಾ ಪುಷ್ಪಗಳ ಅಲಂಕಾರವಿತ್ತು. ಅವನು ಕೈಯಲ್ಲಿ ಆಯುಧ ಹಿಡಿದು ಗರ್ಜಿಸುತ್ತ ಪರ್ಣಶಾಲೆಯನ್ನು ಪ್ರವೇಶಿಸಿ ಮಾದ್ರಿಯ ಕೂದಲು ಹಿಡಿದೆಳೆದು ನೆಲದ ಮೇಲೆ ತಳ್ಳಿದನು. ಅವಳು ಕೂಗಿಕೊಂಡಾಗ ಅವಳ ಎರಡು ಕಣ್ಣುಗಳನ್ನೂ ಕಿತ್ತು, ಎರಡು ತೋಳುಗಳನ್ನೂ ಕತ್ತರಿಸಿ, ಎದೆಯನ್ನು ಒಡೆದು ರಕ್ತದ ಹನಿ ತೊಟ್ಟಿಡುವ ಹೃದಯಮಾಂಸವನ್ನು ಕೊಂಡು ನಡೆದನು. ಆ ಸ್ವಪ್ನ ಕಂಡು ಮಾದ್ರಿ ಭಯದಿಂದ ಎಚ್ಚರಗೊಂಡಳು.

ಎಚ್ಚರವಾದ ಬಳಿಕ, "ಕೆಟ್ಟ ಸ್ವಪ್ನ ಕಂಡೆ. ವಿಶ್ವಂತರನಿಗೆ ಸ್ವಪ್ನಗಳ ಅರ್ಥ ಗೊತ್ತು. ಅವನನ್ನು ಕೇಳುವೆನು" ಎಂದು ಚಿಂತಿಸಿ, ಮಹಾಸತ್ತ್ವನ ಪರ್ಣಶಾಲೆಗೆ ಹೋಗಿ ಬಾಗಿಲು ಕುಟ್ಟಿದಳು.

ಮಹಾಸತ್ತ್ವನು "ಅದು ಯಾರು?" ಎಂದನು.

"ನಾನು ದೇವ, ಮಾದ್ರಿ."

"ಭದ್ರೆ, ನಾವು ಮಾಡಿಕೊಂಡ ನಿಯಮವನ್ನು ಮುರಿದು ಅಕಾಲದಲ್ಲಿ ಏಕೆ ಬಂದೆ?"

"ದೇವ, ನಾನು ಕೆಟ್ಟ ಸ್ವಪ್ನ ಕಂಡದ್ದರಿಂದ ಬಂದೆ."

ಮಹಾಸತ್ತ್ವನು ಆ ಸ್ವಪ್ನದ ಅರ್ಥವನ್ನು ಗ್ರಹಿಸಿದನು. "ನಾಳೆ ನನ್ನ ದಾನಪಾರಮಿತೆ ಪೂರೈಸುವುದು. ಯಾಚಕನು ನಾಳೆ ಬಂದು ಮಕ್ಕಳನ್ನು ಬೇಡುವನು. ಮಾದ್ರಿಯನ್ನು ಸಮಾಧಾನಪಡಿಸಿ ಕಳುಹಿಸುವೆನು" ಎಂದು ಆಲೋಚಿಸಿ, "ಮಾದ್ರಿ, ಕೆಟ್ಟನಿದ್ರೆ ಕೆಟ್ಟಊಟಗಳಿಂದ ನಿನ್ನ ಮನಸ್ಸು

ಕದಡಿರಬೇಕು, ಹೆದರಬೇಡ" ಎಂದು ಅವಳನ್ನು ಸಂತೈಸಿ ಕಳುಹಿಸಿದನು.

ರಾತ್ರಿ ಬೆಳಗಾಯಿತು. ಮಾದ್ರಿಯು ತಾನು ಮಾಡತಕ್ಕುದನ್ನೆಲ್ಲ ಮಾಡಿ, ಇಬ್ಬರು ಮಕ್ಕಳನ್ನೂ ಆಲಿಂಗಿಸಿ, ತಲೆಗೆ ಮುತ್ತಿಟ್ಟು, "ಇಂದು ನಾನು ಕೆಟ್ಟಸ್ವಪ್ನ ಕಂಡೆ. ಜಾಗರೂಕತೆಯಿಂದ ಇರಿ" ಎಂದು ಬುದ್ಧಿ ಹೇಳಿ, "ದೇವ, ಮಕ್ಕಳನ್ನು ಎಚ್ಚರದಿಂದ ನೋಡಿಕೊಳ್ಳಿರಿ" ಎಂದು ಮಹಾಸತ್ತ್ವನಿಗೆ ಮಕ್ಕಳನ್ನು ಒಪ್ಪಿಸಿ, ಬುಟ್ಟಿ ಮೊದಲಾದುವನ್ನು ತೆಗೆದುಕೊಂಡು, ಕಣ್ಣೀರು ಒರಸಿಕೊಳ್ಳುತ್ತ ಕಂದಮೂಲಫಲಗಳಿಗಾಗಿ ಕಾಡಿಗೆ ಹೋದಳು.

## ಜೂಜಕನ ಭಿಕ್ಷೆ

ಅತ್ತ ಜೂಜಕನು "ಮಾದ್ರಿ ಈ ವೇಳೆಗೆ ಹೋಗಿರಬೇಕು" ಎಂದು ಎದ್ದು, ಕಾಲುದಾರಿಯಿಂದ ಆಶ್ರಮದ ಕಡೆಗೆ ಬಂದನು. ಮಹಾಸತ್ತ್ವನು ಕೂಡ ಪರ್ಣಶಾಲೆಯಿಂದ ಹೊರಗೆ ಬಂದು, ಕಲ್ಲಿನ ಮೇಲೆ ಚಿನ್ನದ ಪ್ರತಿಮೆಯಂತೆ ಕುಳಿತು, "ಇದೊ, ದಾನ ಬೇಡುವವನು ಬರುವನು" ಎಂದು ದಾಹಗೊಂಡ ಮದ್ಯಪಾಯಿಯಂತೆ ಅವನನ್ನೇ ಎದುರುನೋಡುತ್ತಿದ್ದನು. ಮಕ್ಕಳು ಅವನ ಕಾಲಬಳಿ ಆಟವಾಡುತ್ತಿದ್ದರು.

ಜೂಜಕನು ಬರುತ್ತಿರುವುದು ವಿಶ್ವಂತರನಿಗೆ ಗೋಚರವಾಯಿತು. ಏಳುಮಾಸದಿಂದ ಕೆಳಗಿರಿಸಿದ್ದ ದಾನದ ಭಾರವನ್ನು ಎತ್ತಿಕೊಂಡವನಂತೆ "ಬಾ, ಬ್ರಾಹ್ಮಣ, ಬಾ" ಎಂದು ಉಲ್ಲಾಸದಿಂದ ಅವನನ್ನು ಸ್ವಾಗತಿಸಿ, ಮಗನನ್ನು ಕುರಿತು "ಏಳು, ಜಾಲಿ, ನಿಲ್ಲು. ಹಿಂದಿನ ಕಾಲ ಪುನಃ ಬಂದಂತೆ ಇದೆ. ಬ್ರಾಹ್ಮಣನು ಬಂದುದನ್ನು ಕಂಡು ನನಗೆ ಆನಂದವಾಗುತ್ತಿದೆ" ಎಂದನು.

ಜಾಲಿಕುಮಾರನು "ಹೌದಪ್ಪ, ಬ್ರಾಹ್ಮಣನೇ. ಏನೋ ಬೇಡಲು ಬರುತ್ತಿರುವವನಂತೆ ಬರುತ್ತಿರುವನು. ನಮಗೆ ಇವನು ಅತಿಥಿ" ಎಂದು ಎದ್ದುಹೋಗಿ, ಅವನನ್ನು ಆದರಿಸಿ, ಅವನ ಹೊರೆಯನ್ನು ಕೆಳಗಿಳಿಸಲು ಕೈ ನೀಡಿದನು. ಜೂಜಕನು ಅವನನ್ನು ಕುರಿತು ನೋಡಿ, "ಇವನು ವಿಶ್ವಂತರನ ಮಗ ಜಾಲಿಕುಮಾರನೆ ಇರಬೇಕು. ಈಗಿನಿಂದಲೇ ಒರ

ಟಾಗಿ ಮಾತನಾಡುವೆನು" ಎಂದು ಚಿಂತಿಸಿ, "ಹೋಗಾಚೆ, ಹೋಗಾಚೆ" ಎಂದು ನೆಟಿಕೆಮುರಿದನು. ಕುಮಾರನು "ಈ ಬ್ರಾಹ್ಮಣನು ಎಷ್ಟು ಒರಟು!" ಎಂದು ಅವನನ್ನು ಕುರಿತು ನೋಡಿ ಅವನಲ್ಲಿ ಹದಿನೆಂಟು ದೋಷಗಳನ್ನು ಕಂಡನು.

ಆ ವೇಳೆಗೆ ಜೂಜಕನು ವಿಶ್ವಂತರನ ಕ್ಷೇಮಸಮಾಚಾರವನ್ನು ಕೇಳಿದನು. ವಿಶ್ವಂತರನು ತನ್ನ ಕ್ಷೇಮಸಮಾಚಾರವನ್ನು ಅವನಿಗೆ ತಿಳಿಸಿ "ಏಳುಮಾಸಕಾಲ ಏನೂ ಶೋಕವಿಲ್ಲದೆ ಈ ಅರಣ್ಯದಲ್ಲಿ ವಾಸವಾಗಿರುವೆವು. ದೇವರಂತಹ ಬ್ರಾಹ್ಮಣನು ದಂಡ, ದರ್ವಿ, ಕಮಂಡಲುಗಳೊಡನೆ ಬಂದುದನ್ನು ಕಂಡುದು ಇದೆ ಮೊದಲು" ಎಂದು ಹೇಳಿದನು. ಹಾಗೆಯೆ "ಈತನು ಅಕಾರಣವಾಗಿ ಈ ಮಹಾರಣ್ಯಕ್ಕೆ ಬಂದವನಲ್ಲ. ಬಂದ ಕಾರಣವನ್ನು ಕೇಳಿ ತಿಳಿಯುವೆನು" ಎಂದುಕೊಂಡು, "ನೀನು ಈ ಮಹಾರಣ್ಯಕ್ಕೆ ಬಂದು ಕಾರಣವೇನು?" ಎಂದು ಕೇಳಿದನು.

ಅದಕ್ಕೆ ಜೂಜಕನು "ನೀನು ಎಂದೂ ನೀರು ಕಡಿಮೆಯಾಗದೆ ತುಂಬಿರುವ ಪ್ರವಾಹದಂಥವನು. ನಿನ್ನ ಮಕ್ಕಳನ್ನು ನಾನು ಬೇಡಲು ಬಂದಿರುವೆನು" ಎಂದನು.

ಆ ಮಾತು ಕೇಳಿ ಮಹಾಸತ್ತ್ವನ ಹೃದಯ ಹಿಗ್ಗಿತು. ನೀಡಿದ ಕೈಯಲ್ಲಿ ಒಂದುಸಾವಿರದ ಚೀಲವನ್ನು ಇಡುವವನಂತೆ "ಇದೊ, ಹಿಂದೆಗೆಯದೆ ಕೊಡುವೆನು. ಮಕ್ಕಳಿಗೆ ನೀನೆ ಒಡೆಯ. ಆದರೆ, ಬೆಳಗ್ಗೆ ಹೋದ ರಾಜಪುತ್ರಿ ಸಂಜೆಗೆ ಬರುವಳು. ಒಂದು ರಾತ್ರಿ ಇಲ್ಲಿ ಇದ್ದು, ಬೆಳಗ್ಗೆ ಹೋಗು. ಅವರಿಗೆ ಸ್ನಾನಮಾಡಿಸಿ, ಗಂಧತೊಡೆದು, ಮಾಲೆಗಳಿಂದ ಅಲಂಕರಿಸಲಿ. ರಾತ್ರಿ ಇದ್ದು ನಾಳೆ ಬೆಳಗ್ಗೆ ಹೋಗುವೆಯಂತೆ" ಎಂದನು.

"ಇಲ್ಲಿ ನಿಲ್ಲುವುದು ನನಗೆ ರುಚಿಸುವುದಿಲ್ಲ. ಇಲ್ಲಿಂದ ಹೊರಡುವುದೆ ನನಗೆ ಇಷ್ಟ. ನನಗೇನಾದರೂ ಅಡ್ಡಿಯಾದೀತು. ನಾನು ಈಗಲೇ ಹೋಗುವೆನು. ಹೆಂಗಸರು ಯಾಚಕರಿಗೆ ಕೊಡಬಯಸುವುದಿಲ್ಲ, ಅಡ್ಡಿಯಾಗುವರು. ನೀನು ಶ್ರದ್ಧೆಯಿಂದ ದಾನಕೊಡುವುದಾದರೆ, ಮಕ್ಕಳು

ತಾಯಿಯನ್ನು ನೋಡುವುದು ಬೇಡ. ನಿನ್ನ ಮಕ್ಕಳನ್ನು ಕರೆ. ಅವರು ತಾಯಿಯನ್ನು ನೋಡುವುದು ಬೇಡ. ನನ್ನಂತಹನಿಗೆ ದಾನಕೊಟ್ಟರೆ, ನಿನ್ನ ಪುಣ್ಯ ಹೆಚ್ಚುವುದು, ನೀನು ಸ್ವರ್ಗಕ್ಕೆ ಹೋಗುವೆ" ಎಂದು ಜೂಜಕನು ಹೇಳಿದನು.

"ನನ್ನ ಪತ್ನಿ ಪತಿವ್ರತೆ. ಮಕ್ಕಳು ಅವಳನ್ನು ಕಾಣುವುದು ನಿನಗೆ ಇಷ್ಟವಿಲ್ಲದಿದ್ದರೆ, ಅವರ ಅಜ್ಜನಾದ ಸಂಜಯನ ಬಳಿಗಾದರೂ ಅವರನ್ನು ಕರೆದುಕೊಂಡು ಹೋಗು. ಮಂಜುಳವಾಗಿ ಪ್ರಿಯವಾಗಿ ಮಾತನಾಡುವ ಈ ಮಕ್ಕಳನ್ನು ಕಂಡು ಸಂತೋಷಪಟ್ಟು, ಅವನು ಬಹಳ ಹಣ ಕೊಡುವನು."

"ಬೇಡ, ಬೇಡ. ಮಕ್ಕಳನ್ನು ಕಿತ್ತುಕೊಂಡು ಕಳುಹಿಸಿಯಾನು. ನಾನು ಅಲ್ಲಿಗೆ ಹೋದರೆ, ರಾಜನು ನನ್ನನ್ನು ದಂಡಿಸಬಹುದು, ಮಾರಿಬಿಡಬಹುದು, ಅಥವಾ ಕೊಲ್ಲಿಸಬಹುದು. ಧನವೂ ಇಲ್ಲದೆ, ದಾಸರೂ ಇಲ್ಲದೆ ನಾನು ಮನೆಗೆ ಹಿಂದಿರುಗಿದರೆ ಬ್ರಾಹ್ಮಣಿ ನನ್ನನ್ನು ಹಂಗಿಸಿಯಾಳು."

"ಈ ಮಕ್ಕಳು ಕಿವಿಗೆ ಹಿತವಾಗಿ ಮಾತನಾಡುವುದನ್ನು ಕೇಳಿದರೆ ಅವನ ಮನಸ್ಸು ಹಿಗ್ಗುವುದು. ಧರ್ಮಸ್ಥನಾದ ಆ ಮಹಾರಾಜನು ನಿನಗೆ ಬಹು ಧನ ಕೊಡುವನು."

"ನಿನ್ನ ಮಾತಿನಂತೆ ನಾನು ನಡೆಯುವುದಿಲ್ಲ. ನನ್ನ ಹೆಂಡತಿಯ ಪರಿಚಾರಿಕೆಗಾಗಿ ನಿನ್ನ ಮಕ್ಕಳನ್ನು ಒಯ್ಯುತ್ತೇನೆ."

## ಮಕ್ಕಳ ಮಹಾದಾನ

ಜೂಜಕನ ಆ ಒರಟುಮಾತು ಕೇಳಿ ಜಾಲಿ ಕೃಷ್ಣಾಜಿನೆಯರಿಬ್ಬರೂ ಪರ್ಣಶಾಲೆಯ ಹಿಂದುಗಡೆ ಓಡಿಹೋಗಿ ಪೊದೆಗಳ ಗುಂಪಿನಲ್ಲಿ ಅವಿತುಕೊಂಡರು. ಜೂಜಕನು ಅಲ್ಲಿಯೂ ಬಂದು ಹಿಡಿದುಕೊಳ್ಳುವನೆಂದು ನಡುಗುತ್ತ, ಆ ಮಕ್ಕಳು ಅಲ್ಲಿಯೂ ನಿಲ್ಲಲಾರದೆ, ಅಲ್ಲಿಂದ ಇಲ್ಲಿಗೆ ಓಡಿಯಾಡುತ್ತ ಚತುರಸ್ರ ಪುಷ್ಕರಿಣಿಯ ಬಳಿಗೆ ಬಂದರು. ಅಲ್ಲಿ, ತಮ್ಮ ನಾರುಬಟ್ಟೆಯನ್ನು ಮೈಗೆ ಬಿಗಿಯಾಗಿ ಹಿಡಿದುಕೊಂಡು

ನೀರಿಗಿಳಿದು, ಒಂದು ತಾವರೆಯೆಲೆಯನ್ನು ತಲೆಯಮೇಲೆ ಇಟ್ಟು ಕೊಂಡು, ನೀರಿನಲ್ಲಿ ಅವಿತುಕೊಂಡರು.

ಇತ್ತ ಜೂಜಕನು ಮಕ್ಕಳನ್ನು ಕಾಣದೆ ವಿಶ್ವಂತರನನ್ನು ಆಕ್ಷೇಪಿಸಿದನು. "ವಿಶ್ವಂತರ, ನಿನ್ನ ಮಕ್ಕಳನ್ನು ಈಗ ತಾನೆ ನನಗೆ ದಾನ ಕೊಟ್ಟು, 'ನಾನು ಜೇತುತ್ತರ ನಗರಕ್ಕೆ ಹೋಗವೊಲ್ಲೆ. ಮಕ್ಕಳನ್ನು ನನ್ನ ಹೆಂಡತಿಯ ಪರಿಚಾರಿಕೆಗೆ ಒಯ್ಯುತ್ತೇನೆ' ಎಂದೊಡನೆಯೆ ಸಂಜ್ಞೆ ಮಾಡಿ ಅವರನ್ನು ಕಳುಹಿಸಿಬಿಟ್ಟು, ಈಗ ಏನೂ ಅರಿಯದವನಂತೆ ಕುಳಿತಿರುವೆ. ನಿನ್ನಂತೆ ಸುಳ್ಳಾಡುವವನು ಲೋಕದಲ್ಲೇ ಇಲ್ಲ" ಎಂದನು.

ಆ ಮಾತು ಕೇಳಿ ದುಃಖದಿಂದ ಮಹಾಸತ್ತ್ವನ ಮೈ ನಡುಗಿತು. ಮಕ್ಕಳು ಓಡಿಹೋಗಿರಬೇಕೆಂದು ಚಿಂತಿಸಿ, "ಚಿಂತೆ ಮಾಡಬೇಡ, ಬ್ರಾಹ್ಮಣ. ಮಕ್ಕಳನ್ನು ಕರೆತರುವೆನು" ಎಂದು ಪರ್ಣಶಾಲೆಯ ಹಿಂದೆ ಹೋದನು. ಅಲ್ಲಿಂದ ಅವರು ಕಾಡಿಗೆ ಹೋದುದನ್ನು ತಿಳಿದು, ಅವರ ಹೆಜ್ಜೆ ಗುರುತನ್ನೆ ಹಿಡಿದು ಪುಷ್ಕರಿಣಿಯ ತೀರಕ್ಕೆ ಬಂದನು. ಅಲ್ಲಿ ಅವರು ನೀರಿಗಿಳಿದ ದಾರಿಯನ್ನು ಕಂಡು, "ಅಪ್ಪ, ಜಾಲಿ! ಬಾರಪ್ಪ. ನನ್ನ ಪಾರಮಿಯನ್ನು ಪೂರೈಸು. ನನ್ನ ಹೃದಯಕ್ಕೆ ಶಾಂತಿ ತಾ. ನನ್ನ ಮಾತು ನಡೆಸು. ಈ ಭವಸಾಗರವನ್ನು ನಾನು ದಾಟುವುದಕ್ಕೆ ದೃಢವಾದ ನಾವೆಯಾಗು, ಯಾನವಾಗು. ಈ ಲೋಕದಲ್ಲಿ ಹುಟ್ಟುವುದನ್ನು ತಪ್ಪಿಸಿಕೊಳ್ಳುವೆನು, ದೇವತೆಗಳ ಲೋಕವನ್ನೂ ದಾಟುವೆನು" ಎಂದು ಕರೆದನು.

ಜಾಲಿಕುಮಾರನು ತಂದೆಯ ಕೂಗು ಕೇಳಿ, "ಈ ಬ್ರಾಹ್ಮಣನು ನನ್ನನ್ನು ಏನು ಬೇಕಾದರೂ ಮಾಡಲಿ. ನಾನು ನನ್ನ ತಂದೆಗೆ ಎದುರಾಡುವುದಿಲ್ಲ" ಎಂದು ನೀರಿನಿಂದ ತಲೆಯೆತ್ತಿ, ತಾವರೆಯೆಲೆಯನ್ನು ಪಕ್ಕಕ್ಕೆ ಮಾಡಿ, ದಡಕ್ಕೆ ಬಂದು ಮಹಾಸತ್ತ್ವನ ಬಲಗಾಲ ಬಳಿ ಬಿದ್ದನು. ಅವನ ಕಣಕಾಲನ್ನು ಬಿಗಿಯಾಗಿ ಹಿಡಿದು ಅತ್ತನು.

ಆಗ ಮಹಾಸತ್ತ್ವನು "ಅಪ್ಪ, ನಿನ್ನ ತಂಗಿಯೆಲ್ಲಿ?" ಎಂದನು.

"ಅಪ್ಪ, ಪ್ರಾಣಿಗಳಿಗೆ ಭಯವಾದರೆ ಅವು ತಮ್ಮನ್ನು ತಾವು ಕಾಪಾಡಿಕೊಳ್ಳುವುವು" ಎಂದು ಜಾಲಿಕುಮಾರನು ಹೇಳಿದನು.

ಆಗ ಮಹಾಸತ್ತ್ವನು "ಮಕ್ಕಳು ಏನೋ ಮಾತನಾಡಿಕೊಂಡಿರಬೇಕು" ಎಂದು ನೆನೆದು, "ಬಾರಮ್ಮ, ಕೃಷ್ಣೆ, ಬಾ. ನನ್ನ ಪಾರಮಿಯನ್ನು ಪೂರೈಸು. ನನ್ನ ಹೃದಯಕ್ಕೆ ತಂಪೆರಚು. ನನ್ನ ಮಾತು ನಡೆಸು. ಈ ಭವಸಾಗರವನ್ನು ನಾನು ದಾಟುವುದಕ್ಕೆ ದೃಢವಾದ ಯಾನವಾಗು, ನಾವೆಯಾಗು. ಈ ಲೋಕದಲ್ಲಿ ಹುಟ್ಟುವುದನ್ನು ತಪ್ಪಿಸಿಕೊಳ್ಳುವೆನು, ದೇವತೆಗಳ ಲೋಕವನ್ನು ದಾಟುವೆನು" ಎಂದು ಕೂಗಿ ಕರೆದನು.

ಅವಳು ಕೂಡ ತಂದೆಗೆ ಎದುರಾಡಬಯಸದೆ ಎದ್ದು ಬಂದು ಮಹಾಸತ್ತ್ವನ ಎಡಗಾಲ ಬಳಿ ಬಿದ್ದು ಅತ್ತಳು. ಅವರ ಕಣ್ಣೀರು ಮಹಾಸತ್ತ್ವನ ಅರಳಿದ ಕಮಲಗಳ ಬಣ್ಣದ ಕಾಲಮೇಲೆ ಬಿದ್ದುವು. ಅವನ ಕಣ್ಣೀರು ಅವರ ಚಿನ್ನದ ಹಲಗೆಯಂತಹ ಬೆನ್ನ ಮೇಲೆ ಬಿತ್ತು. ಆಗ ಮಹಾಸತ್ತ್ವನು ಮಕ್ಕಳನ್ನು ಎಬ್ಬಿಸಿ ಸಂತೈಸಿ, "ಅಪ್ಪ, ಜಾಲಿ, ನಾನು ನಿಮ್ಮನ್ನು ದಾನ ಕೊಟ್ಟುದು ನಿನಗೆ ತಿಳಿಯದೆ? ಇಂದು ನನ್ನ ಆಸೆಯನ್ನು ಪೂರೈಸು" ಎಂದು ಹೇಳಿ, ಗೋವುಗಳಿಗೆ ಬೆಲೆಕಟ್ಟುವಂತೆ ಆ ಮಕ್ಕಳಿಗೆ ಬೆಲೆಕಟ್ಟಿದನು.

"ಅಪ್ಪ, ಜಾಲಿ. ನೀನು ಬಿಡುಗಡೆ ಪಡೆಯಬೇಕಾದರೆ ಈ ಬ್ರಾಹ್ಮಣನಿಗೆ ಸಾವಿರ ಚಿನ್ನದ ನಾಣ್ಯ ಕೊಟ್ಟು ಬಿಡುಗಡೆಯಾಗಬೇಕು. ನಿನ್ನ ತಂಗಿ ಉತ್ತಮ ರೂಪವತಿ. ಯಾವನಾದರೂ ನೀಚಜಾತಿಯವನು ಬ್ರಾಹ್ಮಣನಿಗೆ ಎಷ್ಟಾದರೂ ಧನ ಕೊಟ್ಟು ನಿನ್ನ ತಂಗಿಯನ್ನು ಪಡೆದಾನು. ಕೊಡಬೇಕಾದುದನ್ನು ನೂರರ ಸಂಖ್ಯೆಯಲ್ಲಿ ಕೊಡುವುದು ರಾಜರಿಗೆ ಮಾತ್ರ ಸಾಧ್ಯ. ಆದುದರಿಂದ ನಿನ್ನ ತಂಗಿಯ ಬಿಡುಗಡೆಯಾಗುವುದಾದರೆ, ಈ ಬ್ರಾಹ್ಮಣನಿಗೆ ದಾಸದಾಸಿಯರನ್ನೂ ಆನೆ ಕುದುರೆ ಹಸುಗಳನ್ನೂ ಚಿನ್ನದ ನಾಣ್ಯಗಳನ್ನೂ ನೂರರ ಸಂಖ್ಯೆಯಲ್ಲಿ ಕೊಟ್ಟು ಬಿಡಿಸಲಿ" ಎಂದು ವಿಶ್ವಂತರನು ಮಕ್ಕಳಿಗೆ ಬೆಲೆಕಟ್ಟಿ ಸಂತೈಸಿದನು.



ಎತ್ತುಗಳನ್ನು ದಾನಕೊಟ್ಟುದು          ರಥವನ್ನು ದಾನಕೊಟ್ಟುದು

[ಈ ಕತೆಯಲ್ಲಿ ಎತ್ತುಗಳಿಗೆ ಬದಲು 'ಕುದುರೆ' ಎಂದಿದೆ]

ಬಳಿಕ ಬ್ರಾಹ್ಮಣನನ್ನು ಕರೆದು, “ಇಲ್ಲಿ ಬಾ, ಬ್ರಾಹ್ಮಣ. ಈ ನನ್ನ ಮಕ್ಕಳಿಗಿಂತ ಸರ್ವಜ್ಞತಾಜ್ಞಾನವು ನನಗೆ ನೂರರಷ್ಟು, ಸಾವಿರದಷ್ಟು, ನೂರುಸಾವಿರದಷ್ಟು ಹೆಚ್ಚು ಪ್ರಿಯವಾದುದು” ಎಂದು ಹೇಳಿ, ಕಮಂಡಲದಿಂದ ನೀರು ಸುರಿದು, ವಿಶ್ವಂತರನು ತನ್ನ ಪ್ರೀತಿಯ ಮಕ್ಕಳನ್ನು ಅವನಿಗೆ ದಾನಕೊಟ್ಟನು. ಆಗ, ಆ ಮಕ್ಕಳನ್ನು ದಾನ ಕೊಟ್ಟಾಗ, ನೆಲ ನಡುಗಿತು.

ಹೀಗೆ ಮಹಾಸತ್ತ್ವನು ಮಕ್ಕಳನ್ನು ದಾನಕೊಟ್ಟು, ‘ನಾನು ಕೊಟ್ಟುದು ಒಳ್ಳೆಯ ದಾನ’ ಎಂದು ಪ್ರೀತಿಯಿಂದ ಮಕ್ಕಳನ್ನು ನೋಡುತ್ತಾ ನಿಂತನು.

## ಮಕ್ಕಳ ವಿಲಾಪ

ಅತ್ತ ಜೂಜಕನು ಕಾಡಿನೊಳಕ್ಕೆ ಹೋಗಿ, ಒಂದು ಬಳ್ಳಿಯನ್ನು ಹಲ್ಲಿನಿಂದ ಕಡಿದು ತಂದು, ಕುಮಾರನ ಬಲಗೈಯನ್ನೂ ಕುಮಾರಿಯ ಎಡಗೈಯನ್ನೂ ಒಂದಾಗಿ ಕಟ್ಟಿ, ಅದೇ ಬಳ್ಳಿಯ ಕೊನೆಗಳಿಂದ ಮಕ್ಕಳನ್ನು ಹೊಡೆಯುತ್ತಾ ಅಟ್ಟಿಕೊಂಡು ಹೋದನು. ಅವನ ಹೊಡೆತಕ್ಕೆ ಮಕ್ಕಳ ಚರ್ಮ ಕತ್ತರಿಸಿತು, ರಕ್ತ ಸುರಿಯಿತು. ಅವನು ಹೊಡೆದಾಗ ಮಕ್ಕಳು ಒಬ್ಬರಿಗೊಬ್ಬರು ಬೆನ್ನುಕೊಟ್ಟು ಏಟಿಗೆ ಅಡ್ಡವಾಗುವರು.

ಜೂಜಕನು ಒಂದು ಕಡೆ ಎಡವಿಬಿದ್ದನು. ಅವನು ಕಟ್ಟಿದ್ದ ಬಳ್ಳಿಯನ್ನು ಮಕ್ಕಳು ತಮ್ಮ ಮೃದುವಾದ ಕೈಗಳಿಂದ ಕಳಚಿ ಓಡಿಹೋದರು. ಅಳುತ್ತಾ ಓಡಿಹೋಗಿ ಮಹಾಸತ್ತ್ವನ ಬಳಿಬಂದರು. ಜಾಲಿ ಕುಮಾರನು ಕಣ್ಣಿನಲ್ಲಿ ನೀರು ತುಂಬಿಕೊಂಡು, ಅರಳಿ ಎಲೆಯಂತೆ ಅದಿರುತ್ತಾ “ಅಮ್ಮ ಕಾಡಿಗೆ ಹೋಗಿದ್ದಾಳೆ, ಅಪ್ಪ. ಅವಳನ್ನು ಕಾಣುವವರೆಗೆ ನಮ್ಮನ್ನು ದಾನಕೊಡಬೇಡ, ಅಪ್ಪ. ಅವಳನ್ನು ನೋಡಿದ ಮೇಲೆ, ಇವನು ನಮ್ಮನ್ನು ಏನುಬೇಕಾದರೂ ಮಾಡಲಿ. ಇವನು ಮನುಷ್ಯನಲ್ಲ. ಇವನನ್ನು ನೋಡಿದರೆ ಭಯವಾಗುವುದು. ಹರಡಿದ ಕಾಲು, ವಾಸನೆ ಉಗುರು, ಜೋಲಾಡುವ ಮಾಂಸ, ನೇತುಬಿದ್ದ ಕೆಳತುಟಿ,

ಹಂದಿಯ ಕೋರೆ, ಮುರಿದ ಮೂಗು, ಗಡಿಗೆ ಹೊಟ್ಟೆ, ಬಾಗಿದ ಬೆನ್ನು, ಒಂಟಿ ಬೆಕ್ಕಿನ ಕಣ್ಣು, ಕೆಂಪು ಗಡ್ಡ, ಹಳದಿ ಕೂದಲು, ಸುಕ್ಕು ಚರ್ಮ, ಎಣ್ಣೆ ಬಣ್ಣ; ಇಷ್ಟು ವಿಕಾರವಾದವನು ರಕ್ತಮಾಂಸ ತಿನ್ನುವವನಾಗಿರಬೇಕು. ಊರಿನಿಂದ ಕಾಡಿಗೆ ಬಂದು ಈ ಪಿಶಾಚಿ ನಮ್ಮನ್ನು ಒಯ್ಯುತ್ತಿದ್ದರೂ ಏಕೆ ಸುಮ್ಮನಿರುವೆ? ಈ ಧನಪಿಶಾಚಿ ನಮ್ಮನ್ನು ಬಳ್ಳಿಗಳಿಂದ ಬಿಗಿದು, ದನಗಳನ್ನು ಅಟ್ಟುವಂತೆ ದಯೆಯಿಲ್ಲದೆ ಅಟ್ಟುವನಲ್ಲ! ಇದನ್ನು ಕಂಡೂ ಸುಮ್ಮನಿರುವೆಯಲ್ಲ! ನಿನ್ನ ಹೃದಯ ಕಲ್ಲಿನದೆ? ಕಬ್ಬಿಣದಿಂದ ಬಿಗಿದದ್ದೆ? ಕೃಷ್ಣೆಯಾದರೂ ಇಲ್ಲಿ ಇರಲಿ. ಹಿಂಡನ್ನು ಅಗಲಿದ ಹಾಲು ಕುಡಿಯುವ ಕರುವಿನಂತೆ ಅಳುವಳು, ನೋಡು" ಎಂದನು.

ಮಹಾಸತ್ತ್ವನು ಏನೂ ಹೇಳಲಿಲ್ಲ. ಜಾಲಿಕುಮಾರನು ಪುನಃ ತಾಯಿತಂದೆಯನ್ನು ನೆನೆದು, "ನಾನು ಸಾಯಲು ದುಃಖಪಡುವುದಿಲ್ಲ. ಅದು ಎಲ್ಲರಿಗೂ ಬರತಕ್ಕದೇ. ಆದರೆ ತಾಯಿಯನ್ನು ಕಾಣದಿರುವುದು ಹೆಚ್ಚು ದುಃಖ, ತಂದೆಯನ್ನು ಕಾಣದಿರುವುದು ಹೆಚ್ಚು ದುಃಖ. ಕೃಷ್ಣಾಜಿನೆಯನ್ನು ಕಾಣದೆ ಹಗಲೂ ರಾತ್ರಿ ತಾಯಿ ತಂದೆಯರು ಶೋಕಿಸುವರು. ಅವರ ಶೋಕ ಹೊಳೆಯಾಗಿ ಹರಿಯುವುದು. ಈ ವಿವಿಧವಾದ ವೃಕ್ಷಗಳ ಬಳಿ, ಈ ಆಶ್ರಮದ ಬಳಿ, ಈ ತಣ್ಣೀರಿನ ನದಿಯ ಬಳಿ ನಾವು ಆಡಿದೆವು. ಈ ಎಲ್ಲಾ ಮರಗಳ ಹಣ್ಣನ್ನೂ ತಿಂದೆವು. ಈ ಆನೆ ಕುದುರೆ ಎತ್ತಿನ ಬೊಂಬೆಗಳೊಡನೆ ಆಡಿದೆವು. ಇಂದು ಇವೆಲ್ಲವನ್ನೂ ಅಗಲಿ ಹೋಗುತ್ತೇವೆ" ಎಂದು ಗೋಳಾಡಿದನು. ಆದರೂ ಜೂಜಕನು ಅವನನ್ನೂ ಅವನ ತಂಗಿಯನ್ನೂ ಹೊಡೆದಟ್ಟಿಕೊಂಡು ಹೋದನು. ಹಾಗೆ ಹೋಗುವಾಗ, ಮಕ್ಕಳು ತಂದೆಯನ್ನು ಕುರಿತು "ಅಪ್ಪ, ನಾವು ಕೇಳಿದೆವೆಂದು ಅಮ್ಮನಿಗೆ ತಿಳಿಸು. ಅವಳಿಗೆ ಒಳ್ಳೆಯದಾಗಲಿ. ನಿನಗೂ ಒಳ್ಳೆಯದಾಗಲಿ. ನಮ್ಮ ಈ ಆನೆ ಕುದುರೆ ಹಸುಗಳನ್ನು ಅಮ್ಮನಿಗೆ ಕೊಡು. ಇದರಿಂದ ಅವಳ ದುಃಖ ಕಡಿಮೆಯಾಗಲಿ" ಎಂದು ಹೇಳಿದರು.

ಮಕ್ಕಳ ಸ್ಥಿತಿಯನ್ನು ನೋಡಿ ಮಹಾಸತ್ತ್ವನಿಗೆ ಶೋಕ ಬಲವಾಯಿತು, ಹೃದಯ ಬಿಸಿಯಾಯಿತು. ಅವನು ಕೇಸರಿಸಿಂಹವು ಹಿಡಿದ

ಮದದಾನೆಯಂತೆ, ರಾಹುಮುಖವನ್ನು ಹೊಕ್ಕ ಚಂದ್ರನಂತೆ ನಡ ನಡುಗಿದನು. ದುಃಖವನ್ನು ತಾಳಲಾರದೆ ಕಣ್ಣೀರು ಕರೆಯುತ್ತ ಪರ್ಣ ಶಾಲೆಯನ್ನು ಪ್ರವೇಶಿಸಿ, ಕೇಳಿದವರಿಗೆ ಕರುಣ ಹುಟ್ಟುವಂತೆ ಅತ್ತನು.

"ಅಯ್ಯೋ, ಮಕ್ಕಳು ಹಸಿವು ಬಾಯಾರಿಕೆಗಳಿಂದ ಅತ್ತರೆ, ಸಂಜೆ ಊಟದ ವೇಳೆಯಲ್ಲಿ ಅವರಿಗೆ ಊಟವಿಡುವವರಾರು? ಬರಿಗಾಲಿನಿಂದ ಮಕ್ಕಳು ಹೇಗೆ ದಾರಿಯಲ್ಲಿ ನಡೆದಾರು? ಅವರನ್ನು ನಡೆಸುವವರಾರು? ಅವನಾದರೂ ಎಂತಹ ಲಜ್ಜಾಹೀನ! ಏನೂ ಅರಿಯದ ಮಕ್ಕಳನ್ನು ನನ್ನ ಎದುರಿಗೇ ಹೊಡೆಯುವನಲ್ಲ! ಬಲೆಯ ಬಾಯಿಗೆ ಬಿದ್ದ ಮೀನಿನಂತೆ ನಾನು ಇಲ್ಲಿ ಕಟ್ಟು ಬಿದ್ದಿದ್ದೇನೆ. ಅವನು ಅಲ್ಲಿ ನನ್ನ ಕಂದರನ್ನು ಕೋಪದಿಂದ ಹೊಡೆಯುವನಲ್ಲ!" ಎಂದು ದುಃಖಪಟ್ಟನು. ಪುನಃ "ಅವನು ನನ್ನ ಮಕ್ಕಳನ್ನು ಅತಿಯಾಗಿ ಪೀಡಿಸುವನು. ಅವನ ಬೆನ್ನಟ್ಟಹೋಗಿ, ಅವನ ಜೀವವನ್ನು ಕೊನೆಗಾಣಿಸಿ, ಮಕ್ಕಳನ್ನು ಕರೆತರುವೆನು" ಎಂದು ಮಕ್ಕಳ ಮೇಲಿನ ಸ್ನೇಹದಿಂದ ಆಲೋಚಿಸಿದನು. "ಆದರೆ ಇದು ತಕ್ಕುದಲ್ಲ. ದಾನ ಕೊಡುವುದು ಕೊಟ್ಟು, ಹೀಗೆ ಅನುತಾಪ ಪಡುವುದು ಒಳ್ಳೆಯ ಧರ್ಮವಲ್ಲ" ಎಂದು ಅವನಿಗೇ ಅನಂತರ ಎನ್ನಿಸಿತು.

ಅತ್ತ ಜೂಜಕನು ಮಕ್ಕಳನ್ನು ಹೊಡೆದಟ್ಟಿಕೊಂಡು ಹೋದನು. ಮುಂದುಗಡೆ ಜಾಲಿಕುಮಾರನು "ಸ್ವಂತ ತಾಯಿಯಿಲ್ಲದವರಿಗೆ ತಂದೆಯೂ ಇಲ್ಲವೆಂಬ ಕೆಲವರ ಮಾತು ಸತ್ಯವಾಯಿತು. ಸಾಯೋಣ ಬಾ, ಕೃಷ್ಣೆ. ನಾವು ಬದುಕಿ ಏನು ಪ್ರಯೋಜನ? ಹಣದಾಸೆಯುಳ್ಳ ಇವನಿಗೆ ರಾಜನು ನಮ್ಮನ್ನು ದಾನಕೊಟ್ಟನು. ಇವನು ನಮ್ಮನ್ನು ದನದಂತೆ ಅಟ್ಟುವನು. ನಾವು ಈ ಮರಗಳನ್ನೂ ಆಶ್ರಮವನ್ನೂ ನದಿಯನ್ನೂ ತೊರೆದುಹೋಗುವೆವು" ಎಂದು ಗೋಳಾಡುತ್ತಾ ನಡೆದನು.

ಜೂಜಕನು ಪುನಃ ಇನ್ನೊಂದು ಕಡೆ ಎಡವಿಬಿದ್ದನು. ಮಕ್ಕಳನ್ನು ಬಿಗಿದಿದ್ದ ಬಳ್ಳಿಯ ಕಟ್ಟು ಅವನ ಕೈಯಿಂದ ಕಳಚಿಹೋಯಿತು. ಮಕ್ಕಳು ಗಾಯಗೊಂಡ ಕೋಳಿಗಳಂತೆ ನಡುಗುತ್ತ ಓಡಿ ಒಂದೇ ಉಸಿರಿಗೆ ತಂದೆಯ ಬಳಿ ಸೇರಿದರು. ಜೂಜಕನು ತಾನೂ ಎದ್ದು

ವೇಗದಿಂದ ಅವರ ಬೆನ್ನ ಹಿಂದೆ ಬಂದನು. ಬಳ್ಳಿಯನ್ನೂ ದಂಡವನ್ನೂ ಕೈಯಲ್ಲಿ ತಾಳಿ ಕಲ್ಪಕಾಲದ ಅಗ್ನಿಯಂತೆ ಕೆದರಿ ಬಂದು, "ಬಹಳ ಓಡ ಬಲ್ಲವರು ನೀವು" ಎಂದು ಅವರ ಕೈಗಳನ್ನು ಕಟ್ಟಿ, ವಿಶ್ವಂತರನ ಎದುರಿನಲ್ಲಿಯೇ ಅವರನ್ನು ಬಡಿಯುತ್ತಾ ಅಟ್ಟಿಕೊಂಡು ಹೋದನು.

ಹೀಗೆ ಜೂಜಕನು ಅವರನ್ನು ಒಯ್ಯುತ್ತಿರಲು, ಕೃಷ್ಣಾಜಿನೆಯು ಹಿಂದಿರುಗಿ ತಂದೆಯನ್ನು ಕುರಿತು, "ಅಪ್ಪ, ತನ್ನ ಮನೆಯಲ್ಲಿ ಹುಟ್ಟಿದ ದಾಸಿಯಂತೆ ಇವನು ನನ್ನನ್ನು ಕೋಲಿನಿಂದ ಕುಟ್ಟುವನು. ಇವನು ಬ್ರಾಹ್ಮಣನಲ್ಲ, ಅಪ್ಪ. ಬ್ರಾಹ್ಮಣರು ಧರ್ಮಿಕರು. ಪಿಶಾಚಿಯು ಈ ಬ್ರಾಹ್ಮಣನ ರೂಪಿನಲ್ಲಿ ನಮ್ಮನ್ನು ತಿನ್ನಲು ಒಯ್ಯುತ್ತಿರುವುದು. ಇದನ್ನು ಕಂಡೂ ಏಕೆ ಸುಮ್ಮನಿರುವೆ?" ಎಂದು ಹಲುಬಿದಳು.

ತನ್ನ ಚಿಕ್ಕ ವಯಸ್ಸಿನ ಮಗಳು ನಡುಗಿ ಅಳುತ್ತಾ ಹೋಗುವುದನ್ನು ನೋಡಿ ಮಹಾಸತ್ತ್ವನಿಗೆ ತೀವ್ರಶೋಕವಾಯಿತು, ಅವನ ಹೃದಯ ಬಿಸಿಯಾಯಿತು. ಅವನಿಗೆ ಉಸಿರು ಬಿಡುವುದು ಕಷ್ಟವಾಯಿತು. ಕಣ್ಣೀರು ರಕ್ತದ ಹನಿಯಾಗಿ ಬಿದ್ದಿತು. ಆಗ ಅವನು "ಇಂಥ ದುಃಖ ಸ್ನೇಹದಿಂದ ಹುಟ್ಟುವುದಲ್ಲದೆ ಬೇರೆ ಕಾರಣದಿಂದ ಅಲ್ಲ. ಸ್ನೇಹವನ್ನು ಮರೆತು ಉಪೇಕ್ಷೆಯಿಂದ ಇರುವುದೇ ತಕ್ಕುದು" ಎಂದು ತನ್ನ ಜ್ಞಾನದ ಬಲದಿಂದ ಶೋಕವನ್ನು ಹೋಗಲಾಡಿಸಿ ಸ್ವಸ್ಥವಾಗಿ ಕುಳಿತನು.

ಇತ್ತ ಕುಮಾರಿ ಕೃಷ್ಣಾಜಿನೆಯು "ನನ್ನ ಸಣ್ಣ ಕಾಲಿಗೆ ಸಾಕಾಗಿದೆ. ದಾರಿ ದೂರ. ಹೋಗುವುದು ಕಷ್ಟ. ಸೂರ್ಯ ಮುಳುಗುತ್ತಿದ್ದಾನೆ. ಈ ಬ್ರಾಹ್ಮಣನು ನಮ್ಮನ್ನು ಓಡಿಸುತ್ತಿದ್ದಾನೆ. ಪರ್ವತಗಳೆ, ವನಗಳೆ, ಸರೋವರಗಳೆ, ಅಲ್ಲಿ ನೆಲಸಿರುವ ಎಲ್ಲಾ ಭೂತಗಳೆ, ತೃಣಲತೆಗಳೆ, ಓಷಧಿಗಳೆ, ನಿಮಗೆ ಶಿರಸಾ ವಂದಿಸುತ್ತೇವೆ. ನಾವು ಕೇಳಿದೆವೆಂದು ನಮ್ಮ ತಾಯಿಗೆ ತಿಳಿಸಿರಿ. ಅವಳು ನಮ್ಮ ಹಿಂದೆ ಬರುವುದಾದರೆ ಬೇಗ ಬರಲಿ. ಈ ಕಾಲುದಾರಿಯಲ್ಲಿ ಬಂದರೆ ಬೇಗ ಕಾಣಬಹುದೆಂದು ತಿಳಿಸಿರಿ. ಜಟೆ ಬಿಟ್ಟಿರುವ ನಮ್ಮ ತಾಯಿ ಕಂದಮೂಲ ಫಲಗಳಿಗಾಗಿ ಕಾಡಿಗೆ ಹೋಗಿರುವಳು. ಹಿಂದಿರುಗಿ ಬಂದು ಬರಿದಾದ ಆಶ್ರಮವನ್ನು ಕಂಡು ದುಃಖಪಡುವಳು. ಅವಳು ಕಾಡಿಗೆ ಹೋಗಿ

ಬಹಳ ಹೊತ್ತಾಯಿತು. ಬಹಳ ಹಣ್ಣುಹಂಪಲು ಅವಳಿಗೆ ದೊರಕಿರಬೇಕು. ಈ ಧನಪಿಶಾಚಿ ನಮ್ಮನ್ನು ಅಟ್ಟಿಕೊಂಡು ಹೋಗುವನೆಂದು ಆಕೆ ಅರಿಯಳು. ಸಂಜೆಗೆ ನಮ್ಮ ತಾಯಿ ಬಂದು ಕಿರುಜೇನಿನೊಡನೆ ಹಣ್ಣುಗಳನ್ನು ಇವನಿಗೆ ಕೊಟ್ಟಿದ್ದರೆ, ಇವನು ಕುಳಿತು ಅದನ್ನು ತಿಂದು ತೃಪ್ತಿಪಟ್ಟಿದ್ದರೆ, ನಮ್ಮನ್ನು ಹೀಗೆ ಹೊಡೆದಟ್ಟಿಕೊಂಡು ಹೋಗುತ್ತಿರಲಿಲ್ಲ. ಈಗಲೋ ಈ ಬ್ರಾಹ್ಮಣನು ನಮ್ಮನ್ನು ವೇಗವಾಗಿ ಓಡಿಸುತ್ತಿದ್ದಾನೆ. ಕಾಡಿನಲ್ಲಿ ನಮ್ಮ ಹೆಜ್ಜೆ ಪ್ರತಿಧ್ವನಿಗುಡುತ್ತದೆ" ಎಂದು ಕಾಡನ್ನು ಬಿಟ್ಟು ಬರುವವರೆಗೂ ಹಲುಬಿದಳು.

ಮಕ್ಕಳು ಹೀಗೆ ತಾಯಿಯನ್ನು ನೆನೆದು ಗೋಳಾಡುತ್ತಾ ಹೋದರು.

## ಮಾದ್ರಿಯ ಕಳವಳ

ರಾಜನು ತನ್ನ ಪ್ರಿಯಪುತ್ರರನ್ನು ಬ್ರಾಹ್ಮಣನಿಗೆ ದಾನಮಾಡಿದಾಗ ಭೂಮಿ ಮಹಾಶಬ್ದಮಾಡಿತು. ಬ್ರಹ್ಮಲೋಕದವರೆಗೆ ಏಕಕೋಲಾಹಲವಾಯಿತು. ಅದರಿಂದ ಹಿಮವಂತದಲ್ಲಿ ವಾಸಿಸುತ್ತಿದ್ದ ದೇವತೆಗಳ ಹೃದಯ ಒಡೆಯಿತು. ಅವರು ಬ್ರಾಹ್ಮಣನು ಒಯ್ಯುತ್ತಿದ್ದ ಆ ಮಕ್ಕಳ ಗೋಳಾಟವನ್ನು ಕೇಳಿ, " ಮಾದ್ರಿ ಸಕಾಲದಲ್ಲಿಯೇ ಆಶ್ರಮಕ್ಕೆ ಬಂದುಬಿಟ್ಟರೆ, ಅಲ್ಲಿ ಮಕ್ಕಳನ್ನು ಕಾಣದೆ ವಿಶ್ವಂತರನನ್ನು ಕೇಳುವಳು. ಅವರನ್ನು ಬ್ರಾಹ್ಮಣನಿಗೆ ದಾನಮಾಡಿದುದನ್ನು ಕೇಳಿ, ಬಲವಾದ ಸ್ನೇಹದಿಂದ ಹೆಜ್ಜೆಯ ಹಿಂದೆ ಹೆಜ್ಜೆಯಿಟ್ಟು ಓಡಿ, ಮಹಾದುಃಖವನ್ನು ಅನುಭವಿಸುವಳು " ಎಂದು ಆಲೋಚಿಸಿದರು. ಆಗ ಅವರು ಮೂವರು ದೇವಪುತ್ರರನ್ನು ಕುರಿತು " ನೀವು ಸಿಂಹ ಹುಲಿ ಚಿರತೆಗಳ ವೇಷವನ್ನು ನಿರ್ಮಿಸಿಕೊಂಡು, ಮಾದ್ರೀದೇವಿಯು ಹೋಗುವ ದಾರಿಗೆ ಅಡ್ಡವಾಗಿರಿ. ಅವಳು ಬೇಡಿಕೊಂಡರೂ ಸೂರ್ಯ ಮುಳುಗುವ ವರೆಗೆ ದಾರಿಕೊಡಬೇಡಿರಿ. ಅವಳು ಬೆಳುದಿಂಗಳಲ್ಲಿ ಆಶ್ರಮಕ್ಕೆ ಬರುವಂತೆಯೂ ಸಿಂಹ ಮೊದಲಾದವುಗಳ ಪೀಡೆಗೆ ಸಿಕ್ಕದಂತೆಯೂ ನೋಡಿಕೊಳ್ಳಿರಿ " ಎಂದು ಆಜ್ಞೆ ಮಾಡಿದರು.

ಆ ದೇವತೆಗಳು ಹಾಗೆಯೆ ಆಗಲೆಂದು ಅವರ ಮಾತಿಗೆ ಒಪ್ಪಿಕೊಂಡರು. ತಾವು ಸಿಂಹ ಹುಲಿ ಚಿರತೆಗಳಾಗಿ ಹೋಗಿ ಅವಳು ಬರುವ ದಾರಿಯಲ್ಲಿ ಅಡ್ಡವಾಗಿ ಮಲಗಿದರು.

ಅತ್ತ ಮಾದ್ರಿ "ನಾನು ಇಂದು ದುಸ್ಸ್ವಪ್ನ ಕಂಡೆ. ಮೂಲಫಲಗಳನ್ನು ಕೊಂಡು ಸಕಾಲದಲ್ಲಿಯೇ ಆಶ್ರಮಕ್ಕೆ ಹೋಗುವೆನು" ಎಂದು ಕಂಪಿಸುತ್ತಲೇ ಮೂಲಫಲಗಳನ್ನು ಹುಡುಕಿದಳು. ಕೈಯಿಂದ ಗುದ್ದಲಿ ಬಿತ್ತು, ಹೆಗಲಿನಿಂದ ಬುಟ್ಟಿ ಬಿತ್ತು, ಬಲಗಣ್ಣು ಅದುರಿತು, ಹಣ್ಣಿದ್ದ ಗಿಡಗಳು ಹಣ್ಣಿಲ್ಲದಂತೆಯೂ ಹಣ್ಣಿಲ್ಲದುವು ಹಣ್ಣಿದ್ದಂತೆಯೂ ಕಂಡು ಬಂದುವು. ಅವಳಿಗೆ ದಿಕ್ಕು ಕಾಣದೆ ಹೋಯಿತು.

"ಹಿಂದೆ ಎಂದೂ ಆಗದುದು ಈ ಹೊತ್ತು ಏಕೆ ಹೀಗಾಗುತ್ತದೆ? ಗುದ್ದಲಿ ಕೆಳಗೆ ಬೀಳುತ್ತದೆ, ಬಲಗಣ್ಣು ಅದುರುತ್ತದೆ. ಹಣ್ಣಿರುವ ಗಿಡಗಳು ಹಣ್ಣಿಲ್ಲದಂತೆ ಕಾಣುತ್ತವೆ. ದಿಕ್ಕೇ ತೋಚುವುದಿಲ್ಲ. ಇದೇಕೆ?" ಎಂದು ಅವಳು ಚಿಂತಿಸಿದಳು.

ಅವಳು ಸಾಯಂಕಾಲದಲ್ಲಿ, ಸೂರ್ಯನು ಮುಳುಗಿದಾಗ, ಆಶ್ರಮಕ್ಕೆ ಹಿಂದಿರುಗುವಾಗ ಕಾಡುಮೃಗಗಳು ಅವಳ ದಾರಿಗೆ ಅಡ್ಡಲಾದವು.

ಆಗ ಮಾದ್ರಿ "ಸೂರ್ಯ ಕೆಳಗೆ ಮುಳುಗುತ್ತಿದ್ದಾನೆ. ಆಶ್ರಮವೋ ದೂರದಲ್ಲಿದೆ. ಇಲ್ಲಿ ನನ್ನ ಹತ್ತಿರ ಇರುವುದನ್ನೇ ಅವರು ತಿನ್ನಬೇಕಾಗಿದೆ. ಅಲ್ಲಿ ಆ ಕ್ಷತ್ರಿಯನು ಪರ್ಣಶಾಲೆಯಲ್ಲಿ ಒಬ್ಬನೇ ಇರುವನು; ನಾನು ಬರದೆ ಇರುವುದನ್ನು ಕಂಡು ಹಸಿಯುತ್ತಿರುವ ಮಕ್ಕಳನ್ನು ಸಮಾಧಾನ ಪಡಿಸುತ್ತಿರುವನು. ಈಗ ಸಂಜೆಯೂಟದ ವೇಳೆ ಮೀರುತ್ತಿದೆ. ಆ ನನ್ನ ಮಕ್ಕಳು ಹಾಲಿಗಾಗಿ, ನೀರಿಗಾಗಿ ಕಾಯುತ್ತಿದ್ದಾರೆ. ಆ ನನ್ನ ಮಕ್ಕಳು ತಾಯಿಯನ್ನು ಎದುರುನೋಡುವ ಕರುಗಳಂತೆ ನಿಂತಿರುತ್ತಾರೆ, ಹಳ್ಳದ ಮೇಲಿನ ಹಂಸೆಗಳಂತೆ ನಿಂತಿರುತ್ತಾರೆ. ಅವರು ಆಶ್ರಮದ ಸಮೀಪದಲ್ಲಿ ನಿಂತಿರುತ್ತಾರೆ. ಇರುವುದು ಇದು ಒಂದೆ ದಾರಿ. ಆಚೆ ಈಚೆ ಕೊಳ, ಹಳ್ಳ. ಆಶ್ರಮಕ್ಕೆ ಹೋಗಲು ಬೇರೆ ದಾರಿ ಕಾಣಿಸದು. ಓ ಮಹಾ ಬಲವುಳ್ಳ ಮೃಗಗಳೆ, ಕಾನನದ ರಾಜರೆ, ನಿಮಗೆ ನಮಸ್ಕಾರ.

ನಾನೂ ರಾಜಪುತ್ರಿ, ನನಗೆ ಸೋದರರಾಗಿರಿ. ನನಗೆ ದಾರಿ ಬಿಡಿರಿ, ಬೇಡಿಕೊಳ್ಳುತ್ತೇನೆ. ರಾಷ್ಟ್ರದಿಂದ ಹೊರಗಾದ ಒಬ್ಬ ಶ್ರೀಮಂತ ರಾಜಪುತ್ರನ ಹೆಂಡತಿ, ನಾನು. ರಾಮನಲ್ಲಿ ಅನುವ್ರತೆಯಾದ ಸೀತೆಯಂತೆ ಇವನನ್ನು ನಾನು ಸೇವಿಸುತ್ತೇನೆ. ಸಂಜೆ, ಮನೆಯಲ್ಲಿ ನೀವು ನಿಮ್ಮ ಮಕ್ಕಳನ್ನು ನೋಡಿರಿ; ನಾನೂ ನನ್ನ ಮಕ್ಕಳಾದ ಜಾಲಿ ಕೃಷ್ಣಾಜಿನೆಯರಿಬ್ಬರನ್ನೂ ನೋಡುತ್ತೇನೆ. ತಿನ್ನಲು ತಂದ ಈ ಮೂಲಫಲಗಳು ಏನೂ ಸ್ವಲ್ಪವಾಗಿಲ್ಲ, ಬಹಳವಾಗಿವೆ. ಇದರಲ್ಲಿ ಅರ್ಧ ಕೊಡುತ್ತೇನೆ. ನನಗೆ ದಾರಿ ಬಿಡಿರಿ, ಬೇಡಿಕೊಳ್ಳುತ್ತೇನೆ. ನನ್ನ ತಾಯಿ ರಾಜಪುತ್ರಿ, ನನ್ನ ತಂದೆ ರಾಜಪುತ್ರ. ನೀವೂ ವನರಾಜರಾದುದರಿಂದ ನನಗೆ ಸೋದರರಾಗಿರಿ. ದಾರಿ ಬಿಡಿರಿ, ಬೇಡಿಕೊಳ್ಳುತ್ತೇನೆ" ಎಂದಳು.

ಆಗ ಆ ದೇವಪುತ್ರರು ವೇಳೆಯನ್ನು ಗಮನಿಸಿ, "ಈಗ ಇವಳಿಗೆ ದಾರಿಕೊಡುವ ವೇಳೆ" ಎಂದು ತಿಳಿದು ಎದ್ದು ಆಚೆ ಹೋದರು. ಕರುಣೆಯಿಂದ ಕೂಡಿದ ಅವಳ ಮಧುರವಾದ ವಿಲಾಪವನ್ನು ಕೇಳಿ ಆ ಕಾಡುಮೃಗಗಳು ದಾರಿಬಿಟ್ಟುಕೊಟ್ಟವು.

## ಮಾದ್ರಿಯ ಮಹಾಪ್ರಲಾಪ

ಅವು ಆಚೆ ಹೋದಮೇಲೆ, ಅವಳೂ ಆಶ್ರಮಕ್ಕೆ ಹೋದಳು. ಅಂದು ಹುಣ್ಣಿಮೆ. ಅವಳು ಆಶ್ರಮದ ಎದುರಿನ ನಡೆದಾಡುವ ಪ್ರದೇಶಕ್ಕೆ ಬಂದು, ಹಿಂದೆ ಮಕ್ಕಳನ್ನು ಕಾಣುತ್ತಿದ್ದ ಕಡೆ ಅವರನ್ನು ಕಾಣದೆ, "ಮಕ್ಕಳು ಕೆಸರು ಬಳಿದುಕೊಂಡು, ತಾಯಿಯನ್ನು ಎದುರು ನೋಡುವ ಕರುಗಳಂತೆ, ನನ್ನನ್ನು ಎದುರುನೋಡುತ್ತ ಇಲ್ಲಿ ನಿಲ್ಲುತ್ತಿದ್ದರು. ಕಿವಿಗಳನ್ನು ಮೇಲೆತ್ತಿಕೊಂಡು ಓಡಿಬರುವ ಜಿಂಕೆಗಳಂತೆ ಅವರು ಸಂತೋಷದಿಂದಲೂ ಆನಂದದಿಂದಲೂ ಕುಣಿದಾಡಿ ಬರುತ್ತಿದ್ದರು. ಆ ಮಕ್ಕಳಾದ ಜಾಲಿ ಕೃಷ್ಣಾಜಿನೆಯರಿಬ್ಬರೂ ಇಂದು ಕಾಣಿಸುವುದಿಲ್ಲವಲ್ಲ! ಆಹಾರ ತರುವುದಕ್ಕೋಸ್ಕರ ಜಿಂಕೆಯೂ ಸಿಂಹಿಯೂ ತಮ್ಮ ಸ್ಥಳವನ್ನು ಬಿಟ್ಟು ಹೋಗುವಂತೆ, ಪಕ್ಷಿ ಪಂಜರದಿಂದ ಹೋಗುವಂತೆ, ನಾನು ಮಕ್ಕಳನ್ನು ಬಿಟ್ಟು ಹೋಗಿದ್ದೆನು. ಆ ಮಕ್ಕಳನ್ನು

ಈಗ ಕಾಣೆನಲ್ಲ! ಬೆಟ್ಟದ ಮೇಲಿನ ಹಾವಿನ ಗುರುತುಗಳಂತೆ ಅವರು ಓಡಿಯಾಡಿದ ಗುರುತು ಇಲ್ಲಿದೆ. ಅವರು ಮಾಡಿದ ಮಣ್ಣು ಗುಡ್ಡೆಗಳು ಇಲ್ಲಿವೆ. ಆದರೆ ಅವರನ್ನು ಮಾತ್ರ ಕಾಣೆನಲ್ಲ! ಮರಳು ಚೆಲ್ಲಿಕೊಂಡು, ಕೆಸರು ಬಳಿದುಕೊಂಡು ಮಕ್ಕಳು ಸುತ್ತಾ ಓಡಾಡುತ್ತಿದ್ದರು. ಆ ಮಕ್ಕಳನ್ನು ಕಾಣೆನಲ್ಲ! ಹಿಂದೆ ನಾನು ಅರಣ್ಯದಿಂದ ಬರುವಾಗ ದೂರದಿಂದಲೇ ನನ್ನನ್ನು ಎದುರುಗೊಳ್ಳುತ್ತಿದ್ದ ಮಕ್ಕಳನ್ನು ಕಾಣೆನಲ್ಲ! ಇದೋ, ಅವರ ಆಟದಲ್ಲಿ ಕೆಳಗೆ ಬಿದ್ದ ಪಾಂಡುಬಿಲ್ವ. ಆದರೆ ಅವರನ್ನು ಮಾತ್ರ ಕಾಣೆನಲ್ಲ! ನನ್ನ ಮಕ್ಕಳನ್ನು ಕಾಣದೆ ನನ್ನ ಎದೆ ಬಿರಿಯು ವಂತಿದೆ. ಸಾಯಂಕಾಲ ಸಮಯದಲ್ಲಿ ಕೆಸರು ಬಳಿದುಕೊಂಡು ಮಕ್ಕಳು ನಡುವೇರುತ್ತಿದ್ದರು. ಹಾಲು ಕುಡಿಯುತ್ತಿದ್ದರು. ನಾವು ಹಿಂದೆ ಈ ಆಶ್ರಮದಲ್ಲಿ ಎಲ್ಲರೂ ಸೇರುತ್ತಿದ್ದೆವು. ಈ ಹೊತ್ತು ನನ್ನ ಮಕ್ಕಳನ್ನು ಕಾಣದೆ ಆಶ್ರಮವೆಲ್ಲಾ ಭ್ರಮಿಸುವಂತಿದೆ. ಆಶ್ರಮದಲ್ಲೇಕೆ ಇಷ್ಟು ಅಲ್ಪ ಶಬ್ದ ? ಕಾಗೆಗಳಾಗಲಿ ಬೇರೆ ಹಕ್ಕಿಗಳಾಗಲಿ ಕೂಗುವುದಿಲ್ಲ. ನನ್ನ ಮಕ್ಕಳು ಸತ್ತೇ ಹೋಗಿರಬೇಕು" ಎಂದು ಪ್ರಲಾಪಿಸಿದಳು.

ಮಾದ್ರಿಯು ಹೀಗೆ ವಿಲಾಪಿಸುತ್ತ ಮಹಾಸತ್ತ್ವನ ಬಳಿಗೆ ಹೋಗಿ ಹಣ್ಣಿನ ಬುಟ್ಟಿಯನ್ನು ಇಳಿಸಿ, ಮಹಾಸತ್ತ್ವನು ಮಾತನಾಡದೆ ಕುಳಿತುದನ್ನು ಕಂಡು, ಮಕ್ಕಳನ್ನು ಅವನ ಬಳಿಯಲ್ಲಿಯೂ ಕಾಣದೆ, "ಇದೇಕೆ, ಮಾತನಾಡದೆ ಇರುವೆ? ಬೆಳಗಿನ ಜಾವದಲ್ಲಿ ಕಂಡ ಸ್ವಪ್ನವೇ ನನ್ನ ಮನಸ್ಸಿಗೆ ಪುನಃ ಪುನಃ ಬರುತ್ತದೆ. ಕಾಗೆಗಳಾಗಲಿ, ಇತರ ಹಕ್ಕಿಗಳಾಗಲಿ ಏನೂ ಶಬ್ದಮಾಡುವುದಿಲ್ಲ. ನನ್ನ ಮಕ್ಕಳು ಸತ್ತೇಹೋಗಿರಬೇಕು. ಆರ್ಯಪುತ್ರ, ನನ್ನ ಮಕ್ಕಳನ್ನು ಯಾವುದಾದರೂ ಮೃಗಗಳು ತಿಂದುವೆ? ಯಾರೂ ಇಲ್ಲದ ಹಾಳು ಅರಣ್ಯದಲ್ಲಿ ನನ್ನ ಮಕ್ಕಳನ್ನು ಯಾರಾದರೂ ಒಯ್ದರೆ? ಅಥವಾ, ಏನಾದರೂ ಕೆಲಸಕ್ಕಾಗಿ ಅವರನ್ನು ಕಳುಹಿಸಿರುವೆಯ? ಅಥವಾ, ಪ್ರಿಯವಾಗಿ ಮಾತನಾಡುವ ಆ ನನ್ನ ಮಕ್ಕಳು ಮಲಗಿರುವರೆ? ಇಲ್ಲವೇ, ಆಟವಾಡುವ ಭರದಲ್ಲಿ ಆಶ್ರಮದಿಂದ ದೂರವಾಗಿ ಹೋಗಿರುವರೆ? ಅವರ ಕೂದಲಾಗಲಿ, ಕೈಕಾಲುಗಳಾಗಲಿ ಕಾಣಿಸುವುದಿಲ್ಲವಲ್ಲ. ಯಾವುದಾದರೂ ಪಕ್ಷಿ ಅವರನ್ನು

ಎತ್ತಿಕೊಂಡು ಹೋಯಿತೆ? ನನ್ನ ಮಕ್ಕಳನ್ನು ಯಾರು ಕೊಂಡೊಯ್ದರು?" ಎಂದಳು.

ಹೀಗೆಂದರೂ, ಮಹಾಸತ್ತ್ವನು ಏನೂ ಹೇಳಲಿಲ್ಲ. ಅದಕ್ಕೆ ಅವಳು "ದೇವ, ಇದೇಕೆ ನನ್ನೊಡನೆ ಮಾತನಾಡುವುದಿಲ್ಲ? ನನ್ನದೇನು ದೋಷ? ಬಾಣ ತಗುಲಿ ಆಗುವ ಗಾಯಕ್ಕಿಂತ ನನ್ನ ಮಕ್ಕಳನ್ನು ಕಾಣದಿರುವುದೆ ಹೆಚ್ಚು ದುಃಖ. ಈಗ ಎರಡನೆಯ ಬಾಣ ನನ್ನ ಹೃದಯದಲ್ಲಿ ನಡುಗುತ್ತಿದೆ. ನನ್ನ ಮಕ್ಕಳನ್ನು ಕಾಣದಿರುವುದರ ಜೊತೆಗೆ ನೀನೂ ನನ್ನೊಡನೆ ಮಾತನಾಡುವುದಿಲ್ಲ. ಆದ್ದರಿಂದ, ರಾಜಪುತ್ರ, ನನ್ನ ದಿನ ಮುಗಿಯುತ್ತಾ ಬಂದಿತೆಂದು ಕಾಣುತ್ತದೆ. ನಾನು ಬದುಕಿರುವುದಿಲ್ಲವೆಂಬುದು ನಿಸ್ಸಂಶಯ" ಎಂದಳು.

ಆಗ ಮಹಾಸತ್ತ್ವನು "ಕರ್ಕಶವಾದ ಮಾತಿನಿಂದ ಇವಳ ಪುತ್ರಶೋಕವನ್ನು ಹೋಗಲಾಡಿಸುವೆನು" ಎಂದು ಚಿಂತಿಸಿ, "ರಾಜಪುತ್ರಿ ಮಾದ್ರಿ, ನೀನು ಉತ್ತಮಕುಲದಲ್ಲಿ ಹುಟ್ಟಿದವಳು, ಯಶಸ್ಸನ್ನು ಸಂಪಾದಿಸಿರುವವಳು. ಆಹಾರ ತರುವುದಕ್ಕೆ ಬೆಳಗ್ಗೆ ಹೋದವಳು, ಹಿಂದಿರುಗಿ ಬರಲು ಸಾಯಂಕಾಲವಾಯಿತೇಕೆ?" ಎಂದನು.

ಅದಕ್ಕೆ ಅವಳು "ಸರೋವರದ ಬಳಿ ನೀರು ಕುಡಿಯಲು ಬಂದಾಗ ಸಿಂಹವೂ ಹುಲಿಯೂ ಕೂಗಿದ ಶಬ್ದ ನಿನಗೆ ಕೇಳಿಸಲಿಲ್ಲವೆ? ಬೃಹದಾರಣ್ಯದಲ್ಲಿ ತಿರುಗಾಡುವಾಗ ನನಗೂ ಕೆಲವು ದುಃಖಸೂಚಕವಾದ ನಿಮಿತ್ತಗಳಾದುವು. ಕೈಯಿಂದ ಗುದ್ದಲಿ ಬಿತ್ತು, ಹೆಗಲಿನಿಂದ ಬುಟ್ಟಿ ಬಿತ್ತು. ಆಗ ನಾನು ನೊಂದು ಭಯಗೊಂಡು, ಕೈಗಳನ್ನು ಮುಗಿದು, ಸರ್ವದಿಕ್ಕುಗಳಿಗೂ ನಮಸ್ಕರಿಸಿ ಒಳ್ಳೆಯದಾಗಲೆಂದು ಬೇಡಿದೆನು. ಸಿಂಹ ಹುಲಿಗಳಿಂದಾಗಲಿ ತೋಳ ಮುಂತಾದ ಕ್ರೂರ ಮೃಗಗಳಿಂದಾಗಲಿ ರಾಜಪುತ್ರನೂ ಮಕ್ಕಳೂ ಕ್ಷೇಮವಾಗಿರಲೆಂದು ಬೇಡಿದೆನು. ಸಿಂಹ ಹುಲಿ ಚಿರತೆಗಳೆಂಬ ಮೂರು ದುಷ್ಟ ಜಂತುಗಳು ನನ್ನ ದಾರಿಯನ್ನು ಅಡ್ಡಗಟ್ಟಿದುವು. ಅದರಿಂದ ಸಾಯಂಕಾಲಕ್ಕೆ ಬಂದೆ" ಎಂದಳು.

ಮಹಾಸತ್ತ್ವನು ಅವಳೊಡನೆ ಇಷ್ಟೆ ಮಾತನಾಡಿದನು. ಅರುಣೋದಯದವರೆಗೂ ಇನ್ನು ಏನೂ ಮಾತನಾಡಲಿಲ್ಲ.

ಅನಂತರ ಮಾದ್ರಿ "ಶಿಷ್ಯನು ಆಚಾರ್ಯನನ್ನು ಸೇವಿಸುವಂತೆ ನಾನು ನನ್ನ ಪತಿಯನ್ನೂ ಮಕ್ಕಳನ್ನೂ ಹಗಲೂ ರಾತ್ರಿ ಸೇವಿಸಿದ್ದೇನೆ. ಜಟೆ ಬಿಟ್ಟು, ಬ್ರಹ್ಮಚಾರಿಣಿಯಾಗಿ, ಜಿಂಕೆಯ ಚರ್ಮ ಹೊದೆದು, ಕಾಡಿನಿಂದ ಮೂಲಫಲಗಳನ್ನು ನನ್ನ ಮಕ್ಕಳಿಗಾಗಿ ತರುತ್ತಿದ್ದೇನೆ. ಮಕ್ಕಳೆ, ನಿಮ್ಮ ಸ್ನಾನಕ್ಕಾಗಿ ಚಿನ್ನದ ಬಣ್ಣದ ಹರಿದ್ರವನ್ನು ತಂದಿದ್ದೇನೆ. ನಿಮ್ಮ ಆಟಕ್ಕಾಗಿ ಬಿಲ್ವವನ್ನೂ ಇತರ ಮರದ ಹಣ್ಣುಗಳನ್ನೂ ತಂದಿದ್ದೇನೆ. ಇದೊ, ಮೃದುವಾದ ತಾವರೆಯ ಗೆಡ್ಡೆ, ತಾವರೆಯ ದಂಟು. ಕ್ಷತ್ರಿಯ, ಮಕ್ಕಳ ಜೊತೆಯಲ್ಲಿ ಇದನ್ನು ತಿನ್ನು. ಜಾಲಿಗೆ ಈ ಪದ್ಮವನ್ನು ಕೊಡು, ಕುಮಾರಿಗೆ ಈ ಕುಮುದ ಕೊಡು. ಮಕ್ಕಳನ್ನು ಕರೆ, ಶಿಬಿರಾಜ. ಮಾಲೆಗಳನ್ನು ಧರಿಸಿ ಅವರು ಕುಣಿಯುವುದನ್ನು ನೋಡು. ಕೃಷ್ಣಾಜಿನೆ ಆಶ್ರಮದ ಬಳಿ ಬಂದು ಮಂಜುಳವಾದ ಸ್ವರದಿಂದ ಹಾಡುವುದನ್ನು ಕೇಳು, ರಾಜ. ರಾಷ್ಟ್ರದಿಂದ ಹೊರಗಾದ ನಮಗಿಬ್ಬರಿಗೂ ಸುಖದುಃಖಗಳು ಸಮಾನವಾದುವು. ಶಿಬಿಪುತ್ರರಾದ ಜಾಲಿ ಕೃಷ್ಣಾಜಿನೆಯರಿಬ್ಬರನ್ನು ಕಂಡೆಯ? ಹೇಳು. ಶೀಲವಂತರೂ ಜ್ಞಾನಿಗಳೂ ಆದ ಶ್ರಮಣಬ್ರಾಹ್ಮಣರಲ್ಲಿಯೂ ಬ್ರಹ್ಮಚರ್ಯಪರಾಯಣರಲ್ಲಿಯೂ ನಾನು ತಪ್ಪಿ ನಡೆದಿರಬೇಕು. ಅದಕ್ಕೇ ಈ ದಿನ ನಾನು ನನ್ನ ಮಕ್ಕಳನ್ನು ಕಾಣುತ್ತಿಲ್ಲ" ಎಂದು ನಾನಾ ಪ್ರಕಾರವಾಗಿ ಗೋಳಾಡಿದಳು.

ಹೀಗೆ ಪ್ರಲಾಪಿಸಿದರೂ ಮಹಾಸತ್ತ್ವನು ಏನೂ ಹೇಳಲಿಲ್ಲ. ಅವನು ಏನೂ ಹೇಳದಿರಲು, ಆಕೆ ಕಂಪಿಸುತ್ತ, ಚಂದ್ರನ ಬೆಳಕಿನಲ್ಲಿ ಮಕ್ಕಳನ್ನು ಹುಡುಕುತ್ತಾ ಹೊರಟಳು. ಅವರು ಹಿಂದೆ ಯಾವ ಯಾವ ಜಂಬೂವೃಕ್ಷ ಮೊದಲಾದ ಕಡೆಗಳಲ್ಲಿ ಆಡುತ್ತಿದ್ದರೋ ಅಲ್ಲಿಗಲ್ಲಿಗೆ ಹೋಗಿ, "ಇವೆ ಜಂಬೂವೃಕ್ಷಗಳು. ಇವೆ ವಿವಿಧ ವೃಕ್ಷದ ಹೂ ಹಣ್ಣುಗಳು. ಇದು ಅಶ್ವತ್ಥ. ಇದು ಹಲಸು. ಇದು ನ್ಯಗ್ರೋಧ. ಇಲ್ಲಿ ಎಲ್ಲಿಯೂ ನನ್ನ ಮಕ್ಕಳು ಕಾಣಿಸರು. ಇದೋ ಇಲ್ಲಿ ಆರಾಮ, ಅದೋ ಅಲ್ಲಿ ತಣ್ಣೀರಿನ ನದಿ. ನನ್ನ ಮಕ್ಕಳು ಹಿಂದೆ ಇಲ್ಲಿ ಆಡುತ್ತಿದ್ದರು. ಇಂದು ಅವರು ಕಾಣಿಸರು. ಅದೋ, ಆ ಪರ್ವತದ ಮೇಲೆ ವಿವಿಧವಾದ ಹೂಗಳು. ನನ್ನ ಮಕ್ಕಳು ಹಿಂದೆ ಅವನ್ನು ಮುಡಿಯುತ್ತಿದ್ದರು. ಇಂದು ಅವರು

ಕಾಣಿಸರು. ಆ ಪರ್ವತದ ಮೇಲೆ ವಿವಿಧವಾದ ಹಣ್ಣುಗಳು. ನನ್ನ ಮಕ್ಕಳು ಹಿಂದೆ ಅದನ್ನು ತಿನ್ನುತ್ತಿದ್ದರು. ಇಂದು ಅವರು ಕಾಣಿಸರು. ಇದೋ ಅವರ ಆನೆಗಳು, ಕುದುರೆಗಳು, ಗೂಳಿಗಳು. ನನ್ನ ಮಕ್ಕಳು ಹಿಂದೆ ಇವುಗಳೊಡನೆ ಆಡುತ್ತಿದ್ದರು. ಇಂದು ಅವರು ಕಾಣಿಸರು" ಎಂದು ಗೋಳಾಡಿದಳು.

ಅನಂತರ ಅವಳು ಪರ್ವತದ ಮೇಲೆ ಮಕ್ಕಳನ್ನು ಹುಡುಕಿದಳು. ಅಲ್ಲಿಯೂ ಅವರನ್ನು ಕಾಣದೆ ಕೆಳಗಿಳಿದು ಪುನಃ ಆಶ್ರಮಕ್ಕೇ ಬಂದಳು. ಅಲ್ಲಿ ಆ ಮಕ್ಕಳು ಆಡುತ್ತಿದ್ದ ಆಟದ ವಸ್ತುಗಳನ್ನು ಕಂಡು, "ಇದು ಜಿಂಕೆ. ಇದು ಮೊಲ. ಇದು ಗೂಬೆ. ಇವು ಕದಳಿಮೃಗಗಳು. ಇವು ಹಂಸಗಳು. ಇವು ಕ್ರೌಂಚಗಳು. ಇವು ಬಣ್ಣಬಣ್ಣದ ರೆಕ್ಕೆಯ ನವಿಲುಗಳು. ನನ್ನ ಮಕ್ಕಳು ಹಿಂದೆ ಇವುಗಳೊಡನೆ ಆಡುತ್ತಿದ್ದರು. ಇಂದು ಅವರು ಕಾಣಿಸರು" ಎಂದು ಪುನಃ ಗೋಳಿಟ್ಟಳು.

ಆಶ್ರಮದ ಬಳಿಯಲ್ಲಿಯೂ ಅವಳು ತನ್ನ ಪ್ರಿಯಪುತ್ರರನ್ನು ಕಾಣದೆ, ಹೊರಗೆ ಹೊರಟು, ಹೂಬಿಟ್ಟ ವನಪ್ರದೇಶವನ್ನು ಹೊಕ್ಕು, ಅಲ್ಲಲ್ಲಿ ನೋಡುತ್ತಾ, "ಈ ವನದಲ್ಲಿ ಎಲ್ಲಾ ಕಾಲದಲ್ಲಿಯೂ ಹೂ ಬಿಡುವುದು. ಮಕ್ಕಳು ಹಿಂದೆ ಇಲ್ಲಿ ಆಡುತ್ತಿದ್ದರು. ಇಂದು ಅವರು ಕಾಣಿಸರು. ಇದು ರಮ್ಯವಾದ ಪುಷ್ಕರಿಣಿ. ಇಲ್ಲಿ ಚಕ್ರವಾಕಗಳು ಕೂಗುಕೊಡುತ್ತವೆ. ಇದರ ತುಂಬ ಮಂದಾರಪುಷ್ಪಗಳೂ ಪದ್ಮ ಉತ್ಪಲಗಳೂ ತುಂಬಿವೆ. ಹಿಂದೆ ಇಲ್ಲಿ ಮಕ್ಕಳು ಆಡುತ್ತಿದ್ದರು. ಇಂದು ಅವರು ಕಾಣಿಸರು" ಎಂದು ಗೋಳಾಡಿದಳು.

ಹೀಗೆ ಮಕ್ಕಳನ್ನು ಎಲ್ಲಿಯೂ ಕಾಣದೆ, ಮಾದ್ರಿಯು ಪುನಃ ಮಹಾಸತ್ತ್ವನ ಬಳಿಗೇ ಬಂದಳು. ಬಂದು, ಅವನು ಮುಖ ತಗ್ಗಿಸಿದುದನ್ನು ಕಂಡು, "ನೀನು ಕಟ್ಟಿಗೆ ಒಡೆದಿಲ್ಲ. ನೀನು ನೀರು ತಂದಿಲ್ಲ. ನೀನು ಬೆಂಕಿ ಹತ್ತಿಸಿಲ್ಲ. ಸೋಮಾರಿಯಂತೇಕೆ ಇರುವೆ? ಪ್ರಿಯರಾದವರೊಡನೆ ಕೂಡಿದರೆ ಶ್ರಮಪರಿಹಾರವಾಗುವುದು. ಆದರೆ ಇಂದು ನನ್ನ ಮಕ್ಕಳಾದ ಜಾಲಿ ಕೃಷ್ಣಾಜಿನೆಯರಿಬ್ಬರನ್ನೂ ನಾನು ಕಾಣೆ" ಎಂದು ಅತ್ತಳು.

ಹೀಗೆಂದರೂ ಮಹಾಸತ್ತ್ವನು ಮಾತನಾಡದೆಯೆ ಕುಳಿತನು. ಅವನು ಮಾತನಾಡದಿರಲು ಆಕೆ ಶೋಕಕ್ಕೆ ಒಳಗಾದಳು, ಏಟು ಬಿದ್ದ ಕೋಳಿಯಂತೆ ಕಂಪಿಸಿದಳು. ಮೊದಲು ತಾನು ತಿರುಗಾಡಿದ ಸ್ಥಾನಗಳಲ್ಲಿ ಪುನಃ ತಿರುಗಾಡಿ, ಹಿಂದಿರುಗಿ ಬಂದು, "ದೇವ, ಕಾಗೆಗಳೂ ಕೂಗದೆ ಇವೆ. ಹಕ್ಕಿಗಳೂ ಸುಮ್ಮನೆ ಇವೆ. ಮಕ್ಕಳಿಗೆ ಯಾರಿಂದ ಸಾವು ಒದಗಿತೆಂದು ನಾನು ಕಾಣಲಾರೆ" ಎಂದಳು.

ಹೀಗೆಂದರೂ ಮಹಾಸತ್ತ್ವನು ಏನೂ ಹೇಳಲಿಲ್ಲ. ಅವಳು ಮಕ್ಕಳ ಮೇಲಿನ ಶೋಕದಿಂದ ಮೂರನೆಯ ಸಲ ಅಲ್ಲಲ್ಲಿ ಹುಡುಕಿದಳು. ಗಾಳಿ ಓಡಿಯಾಡಿದಂತೆ ಓಡಿಯಾಡಿದಳು. ಅವಳು ಒಂದು ರಾತ್ರಿಯಲ್ಲಿ ಓಡಿಯಾಡಿದ ಪ್ರದೇಶ ಹದಿನೈದು ಯೋಜನದಷ್ಟಾಯಿತು. ಆ ವೇಳೆಗೆ ಬೆಳಗಾಯಿತು. ಅರುಣೋದಯವಾಗಲು ಅವಳು ಪುನಃ ಮಹಾಸತ್ತ್ವನ ಬಳಿಗೆ ಬಂದು ನಿಂತು ಅಳತೊಡಗಿದಳು. ಅಳುತ್ತಾ, "ದೇವ, ಮರಗಳ ಕೆಳಗೂ ಪರ್ವತಗಳಲ್ಲೂ ಗುಹೆಗಳಲ್ಲೂ ಹುಡುಕಾಡಿದೆ. ಯಾರಿಂದ ನನ್ನ ಮಕ್ಕಳಿಗೆ ಮರಣವಾಯಿತೆಂದು ಕಾಣೆ. ಕಾಗೆಗಳೂ ಇತರ ಹಕ್ಕಿಗಳೂ ಕೂಗದೆ ಇವೆ. ನನ್ನ ಮಕ್ಕಳು ಸತ್ತೇಹೋಗಿರಬೇಕು" ಎಂದು ತೋಳು ನೀಡಿ ಹಲುಬುತ್ತಾ, ರಾಜಪುತ್ರಿ ಮಾದ್ರಿಯು ಅಲ್ಲಿಯೇ ನೆಲದಮೇಲೆ ಬಿದ್ದುಬಿಟ್ಟಳು.

## ಮಾದ್ರಿಯ ಅನುಮೋದನೆ

ಮಹಾಸತ್ತ್ವನು ಅವಳು ಮೃತಳಾದಳೆಂದುಕೊಂಡು ನಡುಗಿದನು. "ಮಾದ್ರಿಯು ವಿದೇಶದಲ್ಲಿ ಸಾಯಬಾರದ ಕಡೆ ಸತ್ತಳು. ಇವಳು ಜೇತುತ್ತರನಗರದಲ್ಲಿ ಕಾಲವಾಗಿದ್ದಿದ್ದರೆ ಮಹಾವೈಭವದಿಂದ ಎರಡು ರಾಷ್ಟ್ರಗಳು ಚಲಿಸುತ್ತಿದ್ದುವು. ನಾನೋ ಕಾಡಿನಲ್ಲಿ ಏಕಾಕಿ. ಏನು ತಾನೆ ಮಾಡಲಿ ?" ಎಂದು ಬಲವಾದ ಶೋಕಕ್ಕೆ ಒಳಗಾದನು. ಪುನಃ ಹಾಗೆಯೇ ಚೇತರಿಸಿಕೊಂಡು, ಎದ್ದು, ಅವಳ ಹೃದಯದ ಮೇಲೆ ಕೈಯಿಟ್ಟು, ಬೆಚ್ಚಗಿದ್ದುದನ್ನು ತಿಳಿದು, ಕಮಂಡಲದಲ್ಲಿ ನೀರು ತಂದನು. ತಾನು ಏಳು ತಿಂಗಳು ಅವಳ ಮೈ ಮುಟ್ಟದಿದ್ದರೂ, ಶೋಕ

ಹೆಚ್ಚಾದುದರಿಂದ ತನ್ನ ಸನ್ಯಾಸಿಯ ವ್ರತವನ್ನು ಕಾಪಾಡಿಕೊಳ್ಳ ಲಾರದೆ ಹೋದನು. ಕಣ್ಣುತುಂಬ ನೀರು ತುಂಬಿಕೊಂಡು ಅವಳ ತಲೆಯನ್ನು ಎತ್ತಿ ಎದೆಯಮೇಲೆ ಇರಿಸಿಕೊಂಡು ನೀರು ಚಿಮುಕಿಸಿ, ಮುಖವನ್ನೂ ಹೃದಯವನ್ನೂ ಸವರಿದನು.

ಮಾದ್ರಿಯೂ ಸ್ವಲ್ಪ ಹೊತ್ತಾದ ಮೇಲೆ ಎಚ್ಚರಗೊಂಡಳು. ಎಚ್ಚರಗೊಂಡು, ಲಜ್ಜೆಯಿಂದ ಎದ್ದು, ಮಹಾಸತ್ತ್ವನಿಗೆ ನಮಸ್ಕಾರ ಮಾಡಿ, " ಸ್ವಾಮಿ ವಿಶ್ವಂತರ, ಮಕ್ಕಳು ಎಲ್ಲಿ ಹೋದರು ? " ಎಂದಳು.

" ದೇವೀ, ಒಬ್ಬ ಬ್ರಾಹ್ಮಣನಿಗೆ ದಾಸ್ಯಕ್ಕಾಗಿ ನಾನು ಕೊಟ್ಟೆ" ಎಂದು ವಿಶ್ವಂತರನೆಂದನು.

ಆಗ ಅವಳು " ದೇವ, ಮಕ್ಕಳನ್ನು ಬ್ರಾಹ್ಮಣನಿಗೆ ದಾನಮಾಡಿ, ನಾನು ರಾತ್ರಿಯೆಲ್ಲಾ ಗೋಳಾಡುತ್ತಾ ಅಲೆದಾಡುತ್ತಿದ್ದರೂ ನನಗೇಕೆ ಹೇಳಲಿಲ್ಲ ? " ಎಂದಳು.

ಅದಕ್ಕೆ ಮಹಾಸತ್ತ್ವನು " ನಿನಗೆ ದುಃಖವುಂಟುಮಾಡಲು ಇಚ್ಛೆ ಯಿಲ್ಲದೆ ಮೊದಲೇ ಹೇಳಲಿಲ್ಲ. ವೃದ್ಧನೂ ದರಿದ್ರನೂ ಆದ ಬ್ರಾಹ್ಮಣ ನೊಬ್ಬನು ಬೇಡುತ್ತಾ ಮನೆಗೆ ಬಂದನು. ಅವನಿಗೆ ನನ್ನ ಮಕ್ಕಳನ್ನು ದಾನಕೊಟ್ಟೆ. ಭಯಪಡಬೇಡ, ಚೇತರಿಸಿಕೊ, ಮಾದ್ರಿ. ನನ್ನನ್ನು ನೋಡು, ಮಾದ್ರಿ. ಮಕ್ಕಳಿಗೋಸ್ಕರ ಬಹುವಾಗಿ ಗೋಳಾಡಬೇಡ. ಮಕ್ಕಳನ್ನು ಜೀವಸಹಿತ ಪಡೆಯೋಣ. ಪುನಃ ಎಲ್ಲರೂ ಆರೋಗ್ಯ ವಾಗೋಣ. ಮಕ್ಕಳಾಗಲಿ, ಹಸುಗಳಾಗಲಿ, ಧಾನ್ಯವಾಗಲಿ, ಮನೆಯಲ್ಲಿರುವ ಇತರ ಧನವಾಗಲಿ—ಅದನ್ನು ಬಂದ ಯಾಚಕರಿಗೆ ದಾನಕೊಡುವುದೇ ಸತ್ಪುರುಷರಿಗೆ ತಕ್ಕುದು. ನಾನು ಮಾಡಿದುದಕ್ಕೆ ಸಂತೋಷಪಡು, ಮಾದ್ರಿ. ಮಕ್ಕಳನ್ನು ದಾನಕೊಡುವುದು ಉತ್ತಮ ವಾದುದು " ಎಂದನು.

ಅದಕ್ಕೆ ಮಾದ್ರಿಯು " ನೀನು ಮಾಡಿದುದಕ್ಕೆ ನಾನು ಸಂತೋಷ ಪಡುವೆನು, ದೇವ. ಮಕ್ಕಳ ದಾನವು ಉತ್ತಮವಾದುದೇ. ಈ ದಾನ ದಿಂದ ನಿನ್ನ ಚಿತ್ತ ಪ್ರಸನ್ನವಾಗಲಿ. ಇಂತಹ ದಾನಗಳನ್ನು ಇನ್ನೂ ಕೊಡುವವನಾಗು." ಎಂದಳು.

ಅದಕ್ಕೆ ಮಹಾಸತ್ತ್ವನು "ಹೀಗೇಕೆ ಹೇಳುವೆ, ಮಾದ್ರಿ ? ಮಕ್ಕಳನ್ನು ದಾನಮಾಡಿ ನನ್ನ ಚಿತ್ತ ಪ್ರಸನ್ನವಾಗದಿದ್ದರೆ ನನಗೆ ಈ ಆಶ್ಚರ್ಯಗಳೆಲ್ಲ ಉಂಟಾಗುತ್ತಿದ್ದುವೇನು ?" ಎಂದು ಭೂಮಿ ಶಬ್ದಮಾಡಿದುದೇ ಮೊದಲಾದ ಆಶ್ಚರ್ಯಗಳನ್ನು ತಿಳಿಸಿದನು.

ಆಗ ಮಾದ್ರಿ ಆ ಆಶ್ಚರ್ಯಗಳನ್ನು ಕೀರ್ತಿಸುತ್ತಾ, ಅವನ ದಾನಕ್ಕೆ ಸಂತೋಷವನ್ನು ಸೂಚಿಸುತ್ತಾ, "ನಿನಗಾಗಿ ಭೂಮಿ ಶಬ್ದಮಾಡಿತು. ಆ ಶಬ್ದ ಸ್ವರ್ಗದ ವರೆಗೆ ಹೋಯಿತು. ಮಿಂಚು ಮಿಂಚಿತು. ಗಿರಿಗಳು ಗುಡುಗಿಗೆ ಪ್ರತಿಧ್ವನಿಕೊಟ್ಟವು. ನಿನ್ನ ಕಾರ್ಯಕ್ಕೆ ನಾರದಪರ್ವತರಿಬ್ಬರೂ ಸಂತೋಷಿಸಿದರು. ಇಂದ್ರ ಬ್ರಹ್ಮ ಪ್ರಜಾಪತಿಗಳೂ ರಾಜರಾದ ಸೋಮ ಯಮ ವೈಶ್ರವಣರೂ ಅಲ್ಲಿಯ ಇಂದ್ರನೊಡಗೂಡಿದ ತ್ರಯಸ್ತ್ರಿಂಶಸ್ ಸ್ವರ್ಗದ ದೇವತೆಗಳೆಲ್ಲರೂ ಸಂತೋಷಿಸಿದರು" ಎಂದಳು.

ಹೀಗೆ, ಮಹಾಸತ್ತ್ವನು ತನ್ನ ದಾನವನ್ನು ವರ್ಣಿಸಿದನು. ವಿಶ್ವಂತರನ ದಾನವು ಒಳ್ಳೆಯ ದಾನವೆಂದು ಮಾದ್ರಿಯೂ ಅದನ್ನೇ ಅನುಮೋದಿಸಿದಳು.

### ಶಕ್ರನು ಬೇಡಿದ ಭಿಕ್ಷೆ

ಹೀಗೆ ಅವರು ಒಬ್ಬರೊಡನೊಬ್ಬರು ಸಂತೋಷದಿಂದ ಮಾತನಾಡುತ್ತಿರಲು, ಶಕ್ರನು "ನಿನ್ನೆ ವಿಶ್ವಂತರರಾಜನು ಜೂಜಕನಿಗೆ ಮಕ್ಕಳನ್ನು ದಾನಕೊಟ್ಟನು. ಅದಕ್ಕೆ ಭೂಮಿ ದನಿಕೊಟ್ಟಿತು. ಇಂದು ಯಾವನಾದರೂ ಹೀನಪುರುಷನು ಬಂದು, ಶೀಲವತಿಯೂ ಸರ್ವಲಕ್ಷಣ ಸಂಪನ್ನೆಯೂ ಆದ ಮಾದ್ರಿಯನ್ನು ಬೇಡಿಯಾನು. ಅವಳನ್ನು ಪಡೆದು ರಾಜನನ್ನು ಏಕಾಕಿಯಾಗಿ ಮಾಡಿಯಾನು. ಆಗ ಅವನು ಅನಾಥನಾಗಿ ಗತಿಯಿಲ್ಲದವನಾದಾನು. ನಾನು ಬ್ರಾಹ್ಮಣರೂಪಿನಿಂದ ಅವನ ಬಳಿ ಹೋಗಿ ಮಾದ್ರಿಯನ್ನು ದಾನ ಬೇಡುವೆನು. ಅವನ ದಾನಪಾರಮಿಯು ತುದಿ ಮುಟ್ಟುವಂತೆ ಸಹಾಯಮಾಡುವೆನು. ಬೇರೆ ಯಾರೂ ಮಾದ್ರಿಯನ್ನು ಪಡೆಯದಂತೆ ನಾನೇ ಪಡೆದು, ಪುನಃ ಅವಳನ್ನು ಅವನಿಗೇ ಕೊಟ್ಟು ಬರುವೆನು" ಎಂದು ಚಿಂತಿಸಿ, ಸೂರ್ಯೋದಯ ಕಾಲದಲ್ಲಿ ಅವನ ಬಳಿಗೆ ಬಂದನು.

ಹೀಗೆ, ರಾತ್ರಿ ಮುಗಿದು ಸೂರ್ಯೋದಯವಾದಾಗ, ಶಕ್ರನು ಬ್ರಾಹ್ಮಣನಂತೆ ಅವರೆದುರಿಗೆ ಕಾಣಿಸಿಕೊಂಡನು. ಕಾಣಿಸಿಕೊಂಡು, "ಅಯ್ಯಾ, ನಿನಗೆ ಕುಶಲ ತಾನೆ? ನಿನಗೇನೂ ತೊಂದರೆಯಿಲ್ಲ ತಾನೆ? ಬೇಕಾದಷ್ಟು ಮೂಲಫಲಗಳು ದೊರಕುತ್ತಿವೆ ತಾನೆ? ನೊಣ ಸೊಳ್ಳೆಗಳೂ ಹರಿದಾಡುವ ಜಂತುಗಳೂ ಹೆಚ್ಚಿಲ್ಲ ತಾನೆ? ಕಾಡುಮೃಗಗಳಿಂದ ಏನೂ ಹಿಂಸೆಯಿಲ್ಲ ತಾನೆ?" ಎಂದು ಕೇಳಿದನು.

ಅದಕ್ಕೆ ಮಹಾಸತ್ತ್ವನು "ನಾನು ಕುಶಲವಾಗಿದ್ದೇನೆ, ಬ್ರಾಹ್ಮಣ. ನನಗೇನೂ ತೊಂದರೆಯಿಲ್ಲ. ಬೇಕಾದಷ್ಟು ಮೂಲಫಲಗಳು ದೊರಕುತ್ತಿವೆ. ನೊಣ ಸೊಳ್ಳೆಗಳೂ ಹರಿದಾಡುವ ಜಂತುಗಳೂ ಸ್ವಲ್ಪವೇ ಇವೆ. ಕಾಡುಮೃಗಗಳಿಂದ ನನಗೇನೂ ಹಿಂಸೆಯಿಲ್ಲ. ಏಳು ತಿಂಗಳುಗಳಿಂದ ನಾನು ಇಲ್ಲಿದ್ದೇನೆ. ದೇವಸಮಾನನಾದ ಬ್ರಾಹ್ಮಣನನ್ನು ಕಂಡುದು ಇದೇ ಎರಡನೆಯ ಬಾರಿ. ನಿನಗೆ ಸ್ವಾಗತ, ಮಹಾಬ್ರಾಹ್ಮಣ. ನೀನು ಬಂದುದು ಅದೃಷ್ಟ. ಒಳಗೆ ಬಾ. ಕಾಲು ತೊಳೆದುಕೊ. ಜೇನಿನಂತೆ ಸಿಹಿಯಾದ ಒಳ್ಳೆಯ ಹಣ್ಣುಗಳನ್ನು ತಿನ್ನು. ಇದೊ, ಗಿರಿಗಹ್ವರದಿಂದ ತಂದ ನೀರು ಇಲ್ಲಿದೆ. ಬೇಕಾದರೆ ಕುಡಿ, ಬ್ರಾಹ್ಮಣ" ಎಂದನು.

ಹೀಗೆ ಅವನೊಡನೆ ಕುಶಲವನ್ನು ಕುರಿತು ಮಾತನಾಡಿ, "ಈಗ ನೀನು ಈ ಮಹಾರಣ್ಯಕ್ಕೆ ಬಂದುದು ಏಕೆ? ಏನು ಕಾರಣಕ್ಕಾಗಿ ಬಂದೆ?" ಎಂದು ವಿಶ್ವಂತರನು ಅವನನ್ನು ಕೇಳಿದನು.

ಅದಕ್ಕೆ ಶಕ್ರನು "ಮಹಾರಾಜ, ವಯಸ್ಸಾದ ನಾನು ನಿನ್ನ ಹೆಂಡತಿಯಾದ ಮಾದ್ರಿಯನ್ನು ಯಾಚಿಸಲು ಬಂದಿದ್ದೇನೆ. ಅವಳನ್ನು ನನಗೆ ದಾನಮಾಡು. ತುಂಬುಪ್ರವಾಹವು ಎಂದಿಗೂ ಕಡಿಮೆಯಾಗುವುದಿಲ್ಲ. ನೀನೂ ಹಾಗೆಯೇ. ಬೇಡಲು ಬಂದಿರುವ ನನಗೆ ನಿನ್ನ ಹೆಂಡತಿಯನ್ನು ದಾನಮಾಡು" ಎಂದನು.

ಅವನು ಹೀಗೆನ್ನಲು, ಮಹಾಸತ್ತ್ವನು "ನಿನ್ನೆ ಬ್ರಾಹ್ಮಣನಿಗೆ ಮಕ್ಕಳನ್ನು ದಾನಮಾಡಿದೆ. ಕಾಡಿನಲ್ಲಿ ಒಂಟಿಯಾಗಿಬಿಟ್ಟು ಮಾದ್ರಿಯನ್ನೇಕೆ ಕೊಡಲಿ?" ಎಂದು ಹೇಳಲಿಲ್ಲ. ಹರಡಿದ ಹಸ್ತದಲ್ಲಿ ಸಾವಿರದ ಚೀಲವನ್ನಿಡುವಂತೆ, ಯಾವುದಕ್ಕೂ ಅಂಟಿಕೊಳ್ಳದ ಮನಸ್ಸಿನಿಂದ,

ಗಿರಿಯು ಪ್ರತಿಧ್ವನಿ ಕೊಡುವಂತೆ "ನೀನು ಬೇಡಿದುದನ್ನು ಅಳುಕದೆ ಕೊಡುವೆನು, ಬ್ರಾಹ್ಮಣ. ನಾನು ಕೊಡುವುದಕ್ಕೆ ಹಿಂದೆಗೆಯುವುದಿಲ್ಲ. ದಾನದಲ್ಲಿ ನನ್ನ ಮನಸ್ಸು ರಮಿಸುವುದು" ಎಂದನು.

ಹೀಗೆ ಹೇಳಿ, ಬೇಗನೆ ಕಮಂಡಲದಲ್ಲಿ ನೀರು ತಂದು ಕೈಮೇಲೆ ಸುರಿದು, ವಿಶ್ವಂತರನು ತನ್ನ ಹೆಂಡತಿಯನ್ನು ಬ್ರಾಹ್ಮಣನಿಗೆ ದಾನಮಾಡಿದನು. ಆಗ ಭಯವುಂಟಾಯಿತು. ಆಗ ರೋಮಾಂಚವಾಯಿತು. ಆಗ ಭೂಮಿ ಸುತ್ತಲೂ ನಡುಗಿತು.

ಆಗ ಮಾದ್ರಿ ಹುಬ್ಬು ಗಂಟಿಕ್ಕಲಿಲ್ಲ, ಗೊಣಗಲಿಲ್ಲ, ಅಳಲಿಲ್ಲ. "ಯಾವುದು ಮೇಲೆಂಬುದು ಅವನಿಗೆ ಗೊತ್ತು" ಎಂದು ಮಾತನಾಡದೆ ನೋಡುತ್ತಿದ್ದಳು.

ವಿಶ್ವಂತರನಾದರೋ "ಜಾಲಿ ಕೃಷ್ಣಾಜಿನೆಯರನ್ನೂ ಪತಿವ್ರತೆಯಾದ ಮಾದ್ರೀದೇವಿಯನ್ನೂ ಬೋಧಿಗೋಸ್ಕರವಾಗಿ ತ್ಯಜಿಸುತ್ತೇನೆ, ನಾನು ಚಿಂತಿಸುವುದಿಲ್ಲ. ಆ ಇಬ್ಬರು ಮಕ್ಕಳ ಮೇಲಾಗಲಿ, ಮಾದ್ರೀದೇವಿಯಲ್ಲಾಗಲಿ ನನಗೆ ದ್ವೇಷವಿಲ್ಲ. ಸರ್ವಜ್ಞತೆಯು ನನಗೆ ಹೆಚ್ಚು ಪ್ರಿಯವಾದುದರಿಂದ ಪ್ರಿಯರಾದವರನ್ನು ನಾನು ದಾನ ಕೊಡುವೆನು" ಎಂದುಕೊಂಡನು.

ಆಗ ಮಹಾಸತ್ತ್ವನು ಮಾದ್ರಿ ಹೇಗಿರುವಳೆಂದು ಅವಳ ಮುಖ ನೋಡಿದನು. ಅವಳು "ನನ್ನನ್ನು ಏಕೆ ನೋಡುವೆ, ದೇವ?" ಎನ್ನುತ್ತಾ "ಕುಮಾರಿಯಾಗಿದ್ದ ಕಾಲದಿಂದ ನಾನು ನನ್ನ ಸ್ವಾಮಿಯ ಹೆಂಡತಿ. ನನ್ನ ಒಡೆಯನು ನನ್ನನ್ನು ಬೇಕಾದವರಿಗೆ ದಾನಮಾಡಬಹುದು, ಮಾರಬಹುದು, ಕೊಲ್ಲಲೂಬಹುದು" ಎಂದು ಸಿಂಹನಾದ ಮಾಡಿದಳು.

ಆಗ ಶಕ್ರನು ಅವರ ಶ್ಲಾಘ್ಯವಾದ ಒಳನಿಶ್ಚಯವನ್ನು ತಿಳಿದು, "ಇವರು ಎಲ್ಲಾ ಕಟ್ಟುಗಳನ್ನೂ ಕಳೆದುಕೊಂಡು ಮುಕ್ತರಾದವರು. ಸತ್ಪುರುಷರಂತೆ ದಾನಮಾಡುವುದು ಕಷ್ಟ. ಅವರಂತೆ ಕೆಲಸಮಾಡುವುದು ಕಷ್ಟ. ಕೆಟ್ಟವರು ಅವರಂತೆ ನಡೆಯುವುದಿಲ್ಲ. ಆದ್ದರಿಂದ ಒಳ್ಳೆಯವರ ಗತಿ ಬೇರೆ, ಕೆಟ್ಟವರ ಗತಿ ಬೇರೆ. ಕೆಟ್ಟವರು ನರಕಕ್ಕೆ ಹೋಗುವರು,



ಮಕ್ಕಳನ್ನು ಎತ್ತಿಕೊಂಡು ಮುಂದೆ ಹೋದುದು | ಜೂಜಕನಿಗೆ ಮಕ್ಕಳನ್ನು ದಾನಕೊಟ್ಟುದು | ಮಾದ್ರಿ ಆಶ್ರಮಕ್ಕೆ ಹಿಂದಿರುಗಿ ಬಂದುದು

ಒಳ್ಳೆಯವರು ಸ್ವರ್ಗಕ್ಕೆ ಹೋಗುವರು. ಇವನು ಮಕ್ಕಳನ್ನೂ ಹೆಂಡತಿಯನ್ನೂ ದಾನ ಕೊಟ್ಟುದು ಸ್ವರ್ಗಕ್ಕೆ ಹೋಗಲು ಶ್ರೇಷ್ಠವಾದ ಯಾನ. ಇದರಿಂದ ಇವನು ಕೆಳಗೆ ಇಳಿಯುವಂತಿಲ್ಲ. ಇದು ಸ್ವರ್ಗದಲ್ಲಿ ಫಲ ಕೊಡುವುದು " ಎಂದು ಅವನನ್ನು ಕೀರ್ತಿಸಿದನು.

## ಶಕ್ರನು ಕೊಟ್ಟ ವರ

ಹೀಗೆ, ಅವರು ಮಾಡಿದುದಕ್ಕೆ ಶಕ್ರನು ಸಂತೋಷಪಟ್ಟು, "ನಾನು ಇನ್ನು ಇಲ್ಲಿ ತಡಮಾಡದೆ ಇವಳನ್ನು ಇವನಿಗೇ ಕೊಟ್ಟು ಹೋಗುವುದು ತಕ್ಕುದು" ಎಂದು ಚಿಂತಿಸಿ, "ಸ್ವಾಮಿ, ನಿನ್ನ ಹೆಂಡತಿಯಾದ ಸರ್ವಾಂಗ ಶೋಭನೆ ಮಾದ್ರಿಯನ್ನು ನಿನಗೇ ಕೊಡುವೆನು. ಮಾದ್ರಿಗೆ ನೀನೇ ತಕ್ಕವನು. ನಿನಗೆ ಮಾದ್ರಿ ತಕ್ಕವಳು. ನೀರೂ ಶಂಖವೂ ಸಮಾನ ವರ್ಣವುಳ್ಳವಾಗಿರುವಂತೆ ನೀನೂ ಮಾದ್ರಿಯೂ ಸಮಾನವಾದ ಮನಸ್ಸೂ ಚೇತನಗಳೂ ಉಳ್ಳವರು. ಸಮಾನವಾದ ಜಾತಿ ಗೋತ್ರ ತಾಯಿ ತಂದೆಗಳುಳ್ಳ ನೀವು ರಾಷ್ಟ್ರದಿಂದ ಹೊರಗಾಗಿ ಈ ಅರಣ್ಯದ ಆಶ್ರಮದಲ್ಲಿ ಒಟ್ಟಾಗಿ ಇದ್ದು ಪುಣ್ಯಗಳನ್ನು ಮಾಡಿರಿ. ಹೆಚ್ಚುಹೆಚ್ಚಾಗಿ ದಾನ ಮಾಡಿರಿ" ಎಂದು ಹೇಳಿದನು.

ಹೀಗೆ ಹೇಳಿ, ವರವನ್ನು ಕೊಡಬೇಕೆಂದು "ನಾನು ದೇವೇಂದ್ರನಾದ ಶಕ್ರ. ನಿನ್ನ ಬಳಿಗೆ ಬಂದಿದ್ದೇನೆ. ಬೇಕಾದ ವರ ಬೇಡಿಕೊ. ನಾನು ನಿನಗೆ ಎಂಟು ವರ ಕೊಡುತ್ತೇನೆ" ಎಂದನು. ಹೀಗೆನ್ನುತ್ತಿರುವಂತೆಯೇ ಅವನು ದಿವ್ಯಭಾವದಿಂದ ಪ್ರಜ್ವಲಿಸುತ್ತಾ ತರುಣಸೂರ್ಯನಂತೆ ಆಕಾಶದಲ್ಲಿ ನಿಂತನು.

ಆಗ ಬೋಧಿಸತ್ತ್ವನು ವರಗಳನ್ನು ಸ್ವೀಕರಿಸುತ್ತಾ "ಸರ್ವಭೂತೇಶ್ವರನಾದ ಶಕ್ರನು ನನಗೆ ವರ ಕೊಟ್ಟನು. ನನ್ನ ತಂದೆಗೆ ನನ್ನಲ್ಲಿ ಕ್ರೋಧ ಹೋಗಲಿ ; ನನ್ನನ್ನು ಮನೆಗೆ ಕರೆಸಿ, ಕುಳಿತುಕೊಳ್ಳಲು ಎಡೆ ಕೊಡಲಿ ; ಇದು ಮೊದಲ ವರ. ಎಷ್ಟೇ ಹೀನಕಾರ್ಯಮಾಡಿದವನನ್ನಾದರೂ ಕೊಲ್ಲಲು ನನಗೆ ಮನಸ್ಸು ಬರದಿರಲಿ ; ವಧೆಗೆ ಒಳಗಾದವರನ್ನು ಬಿಡಿಸುವ ಸಾಮರ್ಥ್ಯ ನನಗಾಗಲಿ ; ಇದು ಎರಡನೆಯ ವರ.

ಮುದುಕರಾಗಲಿ, ಹುಡುಗರಾಗಲಿ, ನಡುವಯಸ್ಸಿನವರಾಗಲಿ—ಎಲ್ಲರೂ ನನ್ನಿಂದ ಬದುಕುವಂತಾಗಲಿ; ಇದು ಮೂರನೆಯ ವರ. ಪರಸ್ತ್ರೀಯ ಬಳಿ ಹೋಗದೆ, ಸ್ವಸ್ತ್ರೀಯಲ್ಲಿಯೆ ನನ್ನ ಮನಸ್ಸು ನಿಲ್ಲಲಿ; ನಾನು ಸ್ತ್ರೀಗೆ ವಶನಾಗದಿರಲಿ; ಇದು ನಾಲ್ಕನೆಯ ವರ. ದೀರ್ಘಾಯುಗಳಾಗಿ ಧರ್ಮದಿಂದ ಭೂಮಿಯನ್ನು ಜಯಿಸುವ ಮಕ್ಕಳು ನನಗಾಗಲಿ; ಇದು ಐದನೆಯ ವರ. ರಾತ್ರಿ ಕಳೆದು ಸೂರ್ಯೋದಯವಾದಾಗ ದಿವ್ಯವಾದ ಭಕ್ಷ್ಯಗಳು ನನಗೆ ಪ್ರತ್ಯಕ್ಷವಾಗಲಿ; ಇದು ಆರನೆಯ ವರ. ನನ್ನ ದಾನ ಕಡಿಮೆಯಾಗದಿರಲಿ; ಕೊಟ್ಟಮೇಲೆ ನನಗೆ ಅನುತಾಪವಾಗದಿರಲಿ; ಕೊಟ್ಟಮೇಲೆ ನನ್ನ ಚಿತ್ತ ಪ್ರಸನ್ನವಾಗಲಿ; ಇದು ಏಳನೆಯ ವರ. ಇಲ್ಲಿಂದ ಬಿಡುಗಡೆ ಪಡೆದು ಸ್ವರ್ಗದಲ್ಲಿ ಹುಟ್ಟಿದಮೇಲೆ ಪುನಃ ಭೂಮಿಯಲ್ಲಿ ನನಗೆ ಜನ್ಮ ಬರದಿರಲಿ. ಇದು ಎಂಟನೆಯ ವರ" ಎಂದನು.

ಅವನ ಆ ಮಾತು ಕೇಳಿ ದೇವೇಂದ್ರನು "ಇಷ್ಟರಲ್ಲಿಯೇ ನಿನ್ನ ಪ್ರಿಯ ತಂದೆ ನಿನ್ನನ್ನು ಕಾಣಬಯಸುವನು" ಎಂದು ಮಹಾಸತ್ತ್ವನಿಗೆ ಹೇಳಿ ತನ್ನ ಸ್ಥಾನವಾದ ಸ್ವರ್ಗಕ್ಕೆ ಹೋದನು.

## ಜೇತುತ್ತರ ನಗರದಲ್ಲಿ ಜೂಜಕ

ಇತ್ತ ಬೋಧಿಸತ್ತ್ವನೂ ಮಾದ್ರಿಯೂ ಶಕ್ರನು ಕೊಟ್ಟ ಆಶ್ರಮದಲ್ಲಿ ಸಂತೋಷದಿಂದ ವಾಸಿಸುತ್ತಿರಲು, ಅತ್ತ ಜೂಜಕನು ಮಕ್ಕಳನ್ನು ಹಿಡಿದುಕೊಂಡು ಅರುವತ್ತು ಯೋಜನದ ದಾರಿ ನಡೆದನು. ದೇವತೆಗಳು ಮಕ್ಕಳಿಗೆ ಕಾವಲಾಗಿದ್ದರು. ಜೂಜಕನು ಸೂರ್ಯ ಮುಳುಗಿದ ಮೇಲೆ ಮಕ್ಕಳ ಕಾಲುಕಟ್ಟಿ ನೆಲದ ಮೇಲೆ ಬೀಳಿಸುವನು. ತಾನು ಕ್ರೂರವಾದ ಕಾಡುಮೃಗಗಳಿಗೆ ಭಯಗೊಂಡು ಮರವನ್ನೇರಿ ಕೊಂಬೆಗಳ ನಡುವೆ ಮಲಗುವನು. ಆ ವೇಳೆಯಲ್ಲಿ ಒಬ್ಬ ದೇವಪುತ್ರನು ವಿಶ್ವಂತರ ರೂಪದಿಂದಲೂ ಒಬ್ಬ ದೇವಪುತ್ರಿಯು ಮಾದ್ರೀರೂಪದಿಂದಲೂ ಬಂದು ಮಕ್ಕಳ ಕಟ್ಟನ್ನು ಬಿಡಿಸಿ ಕೈಕಾಲುಗಳನ್ನು ಅಮುಕಿ, ಸ್ನಾನಮಾಡಿಸಿ, ಅಲಂಕಾರಮಾಡಿ, ಊಟ ಊಡಿಸಿ, ದಿವ್ಯವಾದ ಹಾಸಿಗೆಯಲ್ಲಿ ಮಲಗಿಸಿ, ಅರುಣೋದಯ ಕಾಲದಲ್ಲಿ ಅವರನ್ನು ಕಟ್ಟಿದ್ದಂತೆಯೇ ಮಲಗಿಸಿ ಅಂತರ್ಧಾನವಾಗುತ್ತಿದ್ದರು. ಹೀಗೆ ಆ ಮಕ್ಕಳು ದೇವತೆಗಳ ಸಹಾಯದಿಂದ ರೋಗವಿಲ್ಲದವರಾಗಿ ಹೋಗುತ್ತಿದ್ದರು.

ಜೂಜಕನಾದರೋ ದೇವತೆಗಳಿಗೆ ವಶನಾಗಿ, ಕಾಳಿಂಗರಾಷ್ಟ್ರಕ್ಕೆ ಹೋಗುವೆನೆಂದು ಅರ್ಧಮಾಸದಲ್ಲಿ ಜೇತುತ್ತರನಗರವನ್ನು ಸಾರಿದನು. ಆ ದಿವಸ ಬೆಳಗಿನ ಜಾವದಲ್ಲಿ ಶಿಬಿರಾಜನಾದ ಸಂಜಯನು ಸ್ವಪ್ನ ಕಂಡನು. ಸ್ವಪ್ನದಲ್ಲಿ ಒಬ್ಬ ಮನುಷ್ಯನು ಎರಡು ಪದ್ಮಗಳನ್ನು ತಂದು ಸಭಾಮಂಟಪದಲ್ಲಿ ಕುಳಿತಿದ್ದ ರಾಜನ ಕೈಯಲ್ಲಿಟ್ಟನು. ರಾಜನು ಅದನ್ನು ತನ್ನ ಎರಡು ಕಿವಿಗಳಲ್ಲೂ ಅಲಂಕಾರವಾಗಿ ಧರಿಸಿದನು. ಅವುಗಳ ಪರಾಗ ರಾಜನ ಹೊಟ್ಟೆಯ ಮೇಲೆ ಚೆಲ್ಲಿಬಿತ್ತು. ಆಗ ಅವನು ಎಚ್ಚರಗೊಂಡನು. ಬೆಳಗಾಗಲು ಬ್ರಾಹ್ಮಣರನ್ನು ಕೇಳಿದನು. "ಬಹುಕಾಲ ಕಣ್ಮರೆಯಾಗಿದ್ದ ಬಾಂಧವರು ಬರುವರು, ದೇವ" ಎಂದು ಅವರು ತಿಳಿಸಿದರು. ಅವನು ಬೆಳಗಾಗುವ ವೇಳೆಗೇ ನಾನಾ ರಸಭೋಜನವನ್ನು ತಿಂದು ಸಭಾಮಂಟಪದಲ್ಲಿ ಕುಳಿತನು. ದೇವತೆಗಳು ಜೂಜಕ ಬ್ರಾಹ್ಮಣನನ್ನು ಕರೆದುಕೊಂಡು ಬಂದು ರಾಜಾಂಗಣದಲ್ಲಿ ಇಟ್ಟರು. ಅದೇ ಕ್ಷಣದಲ್ಲಿ ರಾಜನು ಆ ಮಕ್ಕಳನ್ನು ಕಂಡನು.

ರಾಜನು ಆ ಮಕ್ಕಳನ್ನು ಕಂಡು, “ ಬೆಂಕಿಯಲ್ಲಿ ಬೆಂದ ಚಿನ್ನದಂತೆ ಬೆಳಗುವ ಮುಖ ಯಾರದಿದು? ಇಬ್ಬರೂ ಒಂದೇ ರೀತಿಯಾದ ಪ್ರತಿ ಅಂಗವುಳ್ಳವರು, ಇಬ್ಬರೂ ಒಂದೇ ತೆರನಾದ ಲಕ್ಷಣವುಳ್ಳವರು. ಒಬ್ಬನು ಜಾಲಿಯಂತಿದ್ದಾನೆ. ಒಬ್ಬಳು ಕೃಷ್ಣಾಜಿನೆಯಂತಿದ್ದಾಳೆ. ಇಬ್ಬರನ್ನೂ ನೋಡಿದರೆ ಬಿಲದಿಂದ ಹೊರಗೆ ಬಂದ ಸಿಂಹಗಳಂತಿದ್ದಾರೆ. ಈ ಇಬ್ಬರು ಮಕ್ಕಳೂ ಚಿನ್ನದಿಂದ ಮಾಡಿದಂತಿದ್ದಾರೆ” ಎಂದನು.

ರಾಜನು ಹೀಗೆ ಮಕ್ಕಳನ್ನು ವರ್ಣಿಸಿ, “ ಹೋಗಿ ಆ ಬ್ರಾಹ್ಮಣ ನನ್ನು ಮಕ್ಕಳೊಡನೆ ಕರೆದುಕೊಂಡು ಬಾ ” ಎಂದು ಅಮಾತ್ಯನಿಗೆ ಆಜ್ಞೆ ಮಾಡಿದನು. ಅವನು ವೇಗವಾಗಿ ಹೋಗಿ ಅವರನ್ನು ಕರೆತಂದನು.

ಆಗ ರಾಜನು “ ಅಯ್ಯಾ, ಈ ಮಕ್ಕಳನ್ನು ಎಲ್ಲಿಂದ ಕರೆದು ತಂದೆ? ” ಎಂದು ಆ ಬ್ರಾಹ್ಮಣನನ್ನು ಕೇಳಿದನು.

ಅದಕ್ಕೆ ಜೂಜಕನು “ ಸಂಜಯರಾಜ, ಈಗ ಹದಿನೈದು ದಿನಗಳ ಕೆಳಗೆ ಈ ಮಕ್ಕಳನ್ನು ಸಂತೋಷದಿಂದ ನನಗೆ ದಾನಮಾಡಿದನು ” ಎಂದನು.

ಆಗ ರಾಜನು “ ಬ್ರಾಹ್ಮಣ, ಯಾವ ಪ್ರಿಯವಚನದಿಂದ ಇವ ರನ್ನು ನೀನು ಪಡೆದೆ? ಉತ್ತಮವಾದ ಈ ಪುತ್ರಕದಾನವನ್ನು ಯಾರು ನಿನಗೆ ಕೊಟ್ಟರು? ” ಎಂದನು.

ಅದಕ್ಕೆ ಜೂಜಕನು “ ಭೂತಗಳಿಗೆ ಭೂಮಿ ಆಧಾರವಾದಂತೆ ಯಾಚಕರಿಗೆ ಆಧಾರನಾದ ವಿಶ್ವಂತರನು ವನದಲ್ಲಿ ವಾಸಿಸುವನಷ್ಟೆ. ಅವನು ಈ ಮಕ್ಕಳನ್ನು ನನಗೆ ದಾನಮಾಡಿದನು. ಹೊಳೆಗಳಿಗೆ ಸಾಗರವು ಗತಿಯಾದಂತೆ ಯಾಚಕರಿಗೆ ಗತಿಯಾದ ವಿಶ್ವಂತರನು ವನ ದಲ್ಲಿ ವಾಸಿಸುವನಷ್ಟೆ. ಅವನು ಈ ಮಕ್ಕಳನ್ನು ನನಗೆ ದಾನಮಾಡಿ ದನು ” ಎಂದನು.

### ಮಕ್ಕಳ ಬಿಡುಗಡೆ

ಅದನ್ನು ಕೇಳಿ ಅಮಾತ್ಯರು ವಿಶ್ವಂತರನನ್ನು ನಿಂದಿಸುತ್ತಾ, “ಮನೆಯಲ್ಲಿರುವ ರಾಜನಾದರೂ ಹೀಗೆ ಮಾಡುವುದು ಕೆಟ್ಟುದು.

ಅಂಥದರಲ್ಲಿ ರಾಜ್ಯದಿಂದ ಹೊರಗಾಗಿ ಅರಣ್ಯದಲ್ಲಿರುವವನು ಮಕ್ಕಳನ್ನು ಹೇಗೆ ಕೊಟ್ಟಾನು? ಇಲ್ಲಿ ಬಂದು ನೆರೆದಿರುವವರೆಲ್ಲಾ ಇದನ್ನು ಕೇಳಿರಿ. ಕಾಡಿನಲ್ಲಿರುವ ವಿಶ್ವಂತರರಾಜನು ಮಕ್ಕಳನ್ನು ಹೇಗೆ ದಾನಕೊಟ್ಟಾನು? ದಾಸದಾಸಿಯರನ್ನೂ ಕುದುರೆ ಹೇಸರಗತ್ತೆಗಳನ್ನೂ ರಥಗಳನ್ನೂ ಕೊಡಲಿ. ಆನೆಗಳನ್ನೂ ಕೊಡಲಿ. ಆದರೆ ಮಕ್ಕಳನ್ನು ಹೇಗೆ ದಾನ ಕೊಟ್ಟಾನು?" ಎಂದರು.

ಜಾಲಿಕುಮಾರನು ಅದನ್ನು ಕೇಳಿ ತಂದೆಯ ನಿಂದೆಯನ್ನು ಸಹಿಸಲಾರದೆ, ಗಾಳಿ ಅಪ್ಪಳಿಸುವ ಸುಮೇರುಪರ್ವತವನ್ನು ಕಿತ್ತುಕೆದರುವಂತೆ "ಮನೆಯಲ್ಲಿ ದಾಸರೂ ಕುದುರೆಗಳೂ ಹೇಸರಗತ್ತೆಗಳೂ ಆನೆಗಳೂ ಯಾವುವೂ ಇಲ್ಲದವನು ಏನು ದಾನ ಕೊಟ್ಟಾನು, ತಾತ?" ಎಂದನು.

ಅದಕ್ಕೆ ರಾಜನು "ಕಂದ, ಅವನ ದಾನವನ್ನು ನಾನು ಪ್ರಶಂಸಿಸುತ್ತೇನೆ. ಅದನ್ನು ನಾನು ಹೀನೈಸುವುದಿಲ್ಲ. ಯಾಚಕನಿಗೆ ನಿಮ್ಮನ್ನು ದಾನಮಾಡುವಾಗ ಅವನ ಹೃದಯ ಹೇಗಿತ್ತು?" ಎಂದನು.

ಅದಕ್ಕೆ ಕುಮಾರನು "ಅವನ ಹೃದಯದಲ್ಲಿ ದುಃಖವಿತ್ತು. ಅಲ್ಲದೆ ಉಷ್ಣವೂ ತಲೆದೋರಿತ್ತು. ನಮ್ಮ ತಂದೆಯ ಕಣ್ಣು ರೋಹಿಣಿಯಂತೆ ಕೆಂಪಾಗಿತ್ತು. ಕಣ್ಣಿನಲ್ಲಿ ನೀರೂ ಬಂದಿತು" ಎಂದನು.

ಆಗ ಕೃಷ್ಣಾಜಿನೆಯು "ತಾತ, ಈ ಬ್ರಾಹ್ಮಣನು ನನ್ನನ್ನು ಮನೆಯಲ್ಲಿ ಹುಟ್ಟಿದ ದಾಸಿಯಂತೆ ದೊಣ್ಣೆಯಿಂದ ಬಡಿಯುತ್ತಾನೆ. ಇವನು ಬ್ರಾಹ್ಮಣನಲ್ಲ, ತಾತ. ಬ್ರಾಹ್ಮಣರು ಧರ್ಮದಿಂದ ನಡೆಯುವವರು. ಯಾವನೋ ಯಕ್ಷನು ತಿನ್ನುವುದಕ್ಕೋಸ್ಕರ ಬ್ರಾಹ್ಮಣ ರೂಪಿನಿಂದ ನಮ್ಮನ್ನು ಒಯ್ಯುತ್ತಿರುವನು. ಈ ಪಿಶಾಚಿ ನಮ್ಮನ್ನು ಒಯ್ಯುತ್ತಿದ್ದರೂ ಏಕೆ ಸುಮ್ಮನೆ ನೋಡುತ್ತಿರುವೆ, ತಾತ?" ಎಂದಳು.

ಆಗ, ಆ ಮಕ್ಕಳನ್ನು ಆ ಬ್ರಾಹ್ಮಣನು ಬಿಡದುದನ್ನು ಕಂಡು, ರಾಜನು "ನಿಮ್ಮ ತಾಯಿ ರಾಜಪುತ್ರಿ. ನಿಮ್ಮ ತಂದೆ ರಾಜಪುತ್ರ. ಹಿಂದೆ ನನ್ನ ತೊಡೆಯೇರುತ್ತಿದ್ದವರು ಇಂದೇಕೆ ದೂರ ನಿಂತಿರುವಿರಿ?" ಎಂದನು.

ಅದಕ್ಕೆ ಕುಮಾರನು "ನಮ್ಮ ತಾಯಿ ರಾಜಪುತ್ರಿ. ನಮ್ಮ ತಂದೆ ರಾಜಪುತ್ರ. ಆದರೆ ಇಂದು ನಾವು ಬ್ರಾಹ್ಮಣನ ದಾಸರಾದುದರಿಂದ ದೂರ ನಿಂತಿದ್ದೇವೆ" ಎಂದನು.

ಅದಕ್ಕೆ ಸಂಜಯರಾಜನು "ಅಪ್ಪ, ಹಾಗೆನ್ನಬೇಡ. ನನ್ನ ಹೃದಯ ದಹಿಸುತ್ತದೆ. ನನ್ನ ಮೈ ಬೆಂಕಿಯ ಮೇಲಿಟ್ಟಂತಾಗುತ್ತದೆ. ಈ ಪೀಠದಲ್ಲಿ ಕುಳಿತುಕೊಂಡರೂ ಸುಖವಿರುವುದಿಲ್ಲ. ಹಾಗೆನ್ನಬೇಡ, ಅಪ್ಪ. ನನಗೆ ಬಹಳ ದುಃಖವಾಗುತ್ತದೆ. ಹಣ ಕೊಟ್ಟು ನಿಮ್ಮನ್ನು ಬಿಡಿಸುತ್ತೇನೆ. ನೀವು ದಾಸರಾಗಿರಬೇಕಾದುದಿಲ್ಲ. ಅಪ್ಪ, ನಿಮ್ಮ ತಂದೆ ನಿಮಗೆ ಎಷ್ಟು ಬೆಲೆ ಕಟ್ಟಿ ಈ ಬ್ರಾಹ್ಮಣನಿಗೆ ದಾನಮಾಡಿದನು ? ಇದ್ದುದನ್ನು ಇದ್ದಂತೆ ನನಗೆ ತಿಳಿಸು. ಅದನ್ನು ಬ್ರಾಹ್ಮಣನಿಗೆ ಕೊಟ್ಟುಬಿಡೋಣ" ಎಂದನು.

ಅದಕ್ಕೆ ಕುಮಾರನು "ನನಗೆ ಸಾವಿರನಾಣ್ಯದ ಬೆಲೆಯಿಟ್ಟು ನನ್ನ ತಂದೆ ನನ್ನನ್ನು ದಾನಮಾಡಿದನು. ಕೃಷ್ಣಾಜಿನೆಗಾದರೋ ಆನೆ ಮೊದ ಲಾದವುಗಳನ್ನು ನೂರರ ಸಂಖ್ಯೆಯಲ್ಲಿ ಬೆಲೆ ಕಟ್ಟಿದನು" ಎಂದನು.

ಆದಕ್ಕೆ ರಾಜನು "ಅಯ್ಯಾ ಅಧಿಕಾರಿ, ತ್ವರೆಮಾಡು. ಬ್ರಾಹ್ಮಣನಿಗೆ ಇವರ ಬೆಲೆ ಕೊಡು. ನೂರರ ಸಂಖ್ಯೆಯಲ್ಲಿ ದಾಸೀದಾಸರನ್ನೂ ಗೋಗಳನ್ನೂ ಆನೆ ಗೂಳಿಗಳನ್ನೂ ಸಾವಿರ ಹೊನ್ನನ್ನೂ ಕೊಡು" ಎಂದು ಅವರ ಬೆಲೆಯನ್ನು ಆ ಬ್ರಾಹ್ಮಣನಿಗೆ ಕೊಡಿಸಿದನು.

ಹಾಗೆಯೇ, ಏಳು ಉಪ್ಪರಿಗೆಯ ಅರಮನೆಯನ್ನೂ ಅವನಿಗೆ ಕೊಟ್ಟನು. ಬ್ರಾಹ್ಮಣನ ಪರಿವಾರ ದೊಡ್ಡದಾಯಿತು. ಅವನು ಆ ಧನವನ್ನೆಲ್ಲಾ ಶೇಖರಿಸಿಕೊಂಡು ಅರಮನೆಯನ್ನೇರಿ ಒಳ್ಳೆಯ ಊಟ ವನ್ನು ಉಣ್ಣುತ್ತಾ ದೊಡ್ಡ ಹಾಸಿಗೆಯ ಮೇಲೆ ಮಲಗಿದನು.

## ಸಂಜಯನ ಪ್ರಯಾಣ

ಹೀಗೆ ಮಕ್ಕಳ ಬೆಲೆಯನ್ನು ಕೊಟ್ಟು ರಾಜನು ಅವರನ್ನು ಬಿಡಿಸಿ ದನು. ಅನಂತರ ಅವರಿಗೆ ತಲೆಗೆ ಸ್ನಾನಮಾಡಿಸಿದರು, ಶುಚಿವಸ್ತ್ರ ಹಾಕಿ ದರು, ಸರ್ವ ಆಭರಣಗಳಿಂದ ಅಲಂಕರಿಸಿದರು, ಮನೋರಮವಾಗಿ ರವ ಕೊಡುವ ಕುಂಡಲಗಳನ್ನು ಕಿವಿಗೆ ತೊಡಿಸಿದರು. ಬಳಿಕ ಅಜ್ಜನು ಒಂದು

ಮಗುವನ್ನೂ ಅಜ್ಜಿಯು ಒಂದು ಮಗುವನ್ನೂ ತೊಡೆಯ ಮೇಲೆ ಕುಳ್ಳಿರಿಸಿಕೊಂಡರು.

ಆಗ ರಾಜನು "ಜಾಲಿ, ನಿಮ್ಮ ತಾಯಿತಂದೆಯಿಬ್ಬರೂ ಆರೋಗ್ಯವಾಗಿರುವರೆ? ಅವರಿಗೆ ಮೂಲಫಲಗಳು ಯಥೇಚ್ಛವಾಗಿ ದೊರಕುತ್ತಿವೆಯೆ? ನೊಣ ಸೊಳ್ಳೆಗಳೂ ಹರಿದಾಡುವ ಜಂತುಗಳೂ ಹೆಚ್ಚಾಗಿಲ್ಲವಷ್ಟೆ? ಕ್ರೂರಮೃಗಗಳು ತುಂಬಿದ ವನದಲ್ಲಿ ಅವರಿಗೇನೂ ಹಿಂಸೆಯಿಲ್ಲವಷ್ಟೆ?" ಎಂದು ಕೇಳಿದನು.

ಅದಕ್ಕೆ ಕುಮಾರನು "ದೇವ, ನಮ್ಮ ತಾಯಿತಂದೆಯರಿಬ್ಬರೂ ಆರೋಗ್ಯವಾಗಿದ್ದಾರೆ. ಅವರಿಗೆ ಮೂಲಫಲಗಳು ಯಥೇಚ್ಛವಾಗಿ ದೊರಕುತ್ತಿವೆ. ನೊಣ ಸೊಳ್ಳೆಗಳೂ ಹರಿದಾಡುವ ಜಂತುಗಳೂ ಹೆಚ್ಚಾಗಿಲ್ಲ. ಕ್ರೂರಮೃಗಗಳು ತುಂಬಿದ ವನದಲ್ಲಿ ಅವರಿಗೇನೂ ಹಿಂಸೆಯಿಲ್ಲ. ನಮ್ಮ ತಾಯಿ ಅನೇಕ ತೆರದ ಗೆಡ್ಡೆಗಳನ್ನು ಅಗೆದು, ಅನೇಕ ತೆರದ ಹಣ್ಣುಗಳನ್ನು ಆಯ್ದು ತಂದು ನಮ್ಮನ್ನು ಪೋಷಿಸುವಳು. ಹೀಗೆ ಅವಳು ತಂದುದನ್ನು ನಾವೆಲ್ಲರೂ ಒಟ್ಟಾಗಿ ಕುಳಿತು ರಾತ್ರಿಯೂ ಹಗಲೂ ತಿನ್ನುತ್ತೇವೆ. ಮರದ ಹಣ್ಣುಗಳನ್ನು ನಮಗೆ ತರುವುದರಲ್ಲಿ ನಮ್ಮ ತಾಯಿ ಸವೆದುಹೋಗಿದ್ದಾಳೆ; ಗಾಳಿಬಿಸಿಲುಗಳಿಗೆ ಸಿಕ್ಕಿ ಕೈಯಲ್ಲಿ ಹಿಡಿದ ಸುಕುಮಾರವಾದ ಪದ್ಮದಂತೆ ಆಗಿದ್ದಾಳೆ. ಆ ಮಹಾವನದಲ್ಲಿ ಓಡಿಯಾಡುತ್ತಾ ನಮ್ಮ ತಾಯಿಯ ತಲೆಗೂದಲು ಉದುರಿ ಹೋಗಿದೆ. ತಲೆಗೂದಲನ್ನು ಜಟೆಯಾಗಿ ಕಟ್ಟಿ, ಕಂಕುಳಲ್ಲಿ ಕೊಳೆ ತಾಳಿ, ಚರ್ಮಗಳನ್ನು ಉಟ್ಟುಕೊಂಡು, ಬೆಂಕಿಗೆ ನಮಸ್ಕರಿಸುತ್ತಾ ನಮ್ಮ ತಾಯಿ ನೆಲದಲ್ಲಿ ಮಲಗುವಳು" ಎಂದನು.

ಹೀಗೆ, ತಾಯಿಯು ದುಃಖಪಡುವುದನ್ನು ಹೇಳುತ್ತಾ "ಲೋಕದಲ್ಲಿ ಜನರಿಗೆ ಮಕ್ಕಳು ಪ್ರಿಯವಾದವರೆಂದು ಹೇಳುವುದುಂಟು. ಆದರೆ ನಮ್ಮ ಅಜ್ಜನಿಗೆ ಮಗನ ಮೇಲೆ ಸ್ನೇಹ ಹುಟ್ಟಲಿಲ್ಲ" ಎಂದು ಜಾಲಿಕುಮಾರನು ಅಜ್ಜನನ್ನು ಪ್ರಚೋದಿಸಿದನು.

ಆಗ ರಾಜನು ತನ್ನ ದೋಷವನ್ನು ಒಪ್ಪಿಕೊಂಡು, "ಶಿಬಿಗಳ ಮಾತಿಗಾಗಿ ದೋಷವಿಲ್ಲದವನನ್ನು ರಾಜ್ಯದಿಂದ ಹೊರಗಟ್ಟಿ ನಾನು

ಭ್ರೂಣಹತ್ಯೆಮಾಡಿದುದು ಕೆಟ್ಟಕೆಲಸ. ಇಲ್ಲಿ, ಈ ಶಿಬಿರಾಷ್ಟ್ರದಲ್ಲಿರುವ ಧನಧಾನ್ಯವೆಲ್ಲಕ್ಕೂ ವಿಶ್ವಂತರನು ಬಂದು ಒಡೆಯನಾಗಲಿ" ಎಂದನು.

ಅದಕ್ಕೆ ಕುಮಾರನು "ನನ್ನ ಮಾತಿಗಾಗಿ ಆ ಶಿಬಿಶ್ರೇಷ್ಠನು ಹಿಂದಿರುಗಿ ಬರುವುದಿಲ್ಲ. ನೀನೇ ಹೋಗಿ ನಿನ್ನ ಮಗನ ಮೇಲೆ ಭೋಗಗಳ ಮಳೆಗರೆ" ಎಂದನು.

ಆಗ ಸಂಜಯರಾಜನು ತನ್ನ ಸೇನಾಪತಿಯನ್ನು ಕರೆದು, "ಆನೆ ಕುದುರೆ ರಥ ಪದಾತಿಗಳ ನನ್ನ ಸೇನೆಯನ್ನು ಸನ್ನಾಹಗೊಳಿಸು. ಪುರಜನರೂ ಬ್ರಾಹ್ಮಣರೂ ಪುರೋಹಿತರೂ ನನ್ನ ಸುತ್ತಲೂ ಬರಲಿ. ನೋಟಕ್ಕೆ ಮನೋಹರರಾದ ಅರವತ್ತುಸಾವಿರ ಯೋಧರು ನಾನಾ ರೀತಿಯ ಅಲಂಕಾರಗಳನ್ನು ಧರಿಸಿ ಸನ್ನದ್ಧರಾಗಿ ಬೇಗನೆ ಬರಲಿ. ಕೆಲವರು ನೀಲಿಯ ಬಣ್ಣದ ಬಟ್ಟೆಗಳನ್ನೂ ಕೆಲವರು ಬಿಳಿಯವನ್ನೂ ಕೆಲವರು ಕೆಂಪು ಉಷ್ಣೀಷವನ್ನೂ ಕೆಲವರು ಹಳದಿ ವಸ್ತ್ರವನ್ನೂ ಧರಿಸಿ ಸನ್ನದ್ಧರಾಗಿ ಬೇಗನೆ ಬರಲಿ. ಹಾಗೆಯೇ ಚಿನ್ನದ ಹೊದಿಕೆಗಳನ್ನು ಹೊದೆದ ಹದಿನಾಲ್ಕುಸಾವಿರ ಆನೆಗಳು ಸಿದ್ಧವಾಗಲಿ. ತೋಮರ ಅಂಕುಶಗಳನ್ನು ಕೈಯಲ್ಲಿ ಹಿಡಿದು ಸನ್ನದ್ಧರಾದ ಗ್ರಾಮಣಿಗಳು ಆ ಆನೆಗಳ ಮೇಲೇರಿ ಬರಲಿ. ಹಾಗೆಯೇ, ವೇಗಶಾಲಿಗಳಾದ ಹದಿನಾಲ್ಕು ಸಾವಿರ ಸಿಂಧೂದೇಶದ ಜಾತ್ಯಶ್ವಗಳು ಸಿದ್ಧವಾಗಲಿ. ಕತ್ತಿ ಬಿಲ್ಲುಗಳನ್ನು ಧರಿಸಿದ ಗ್ರಾಮಣಿಗಳು ಸನ್ನದ್ಧರಾಗಿ ಆ ಕುದುರೆಗಳ ಮೇಲೇರಿ ಬರಲಿ. ಅದರಂತೆಯೇ ಹದಿನಾಲ್ಕುಸಾವಿರ ರಥ ಸಿದ್ಧವಾಗಲಿ. ರಥ ಚಕ್ರಗಳ ಅಂಚಿಗೆ ಕಬ್ಬಿಣ ಬಿಗಿದಿರಲಿ. ರಥದ ಒಳಗೆ ಚಿನ್ನದ ಹಾಳೆ ಹಾಸಿರಲಿ. ಅಲ್ಲಿ ಧ್ವಜಗಳನ್ನು ಏರಿಸಿರಲಿ. ಸಮರ್ಥರಾದ ಬಿಲ್ಗಾರರು ಚರ್ಮಗಳನ್ನೂ ಕವಚಗಳನ್ನೂ ಧರಿಸಿ ಆ ರಥಗಳಲ್ಲಿ ಬರಲಿ'' ಎಂದನು.

ಹೀಗೆ ರಾಜನು ಸೇನಾಂಗವನ್ನು ವಿಚಾರಿಸಿಕೊಂಡು, "ನನ್ನ ಮಗನಿಗೋಸ್ಕರ ಜೇತುತ್ತರನಗರದಿಂದ ವಂಕಪರ್ವತದವರೆಗೆ ಎಂಟು ವೃಷಭಗಳ ವಿಸ್ತಾರದ ದಾರಿಯನ್ನು ಸಮನಾಗಿ ಮಾಡಿ, ದಾರಿಯನ್ನು ಹೀಗೆ ಹೀಗೆ ಅಲಂಕರಿಸಿರಿ'' ಎಂದು ಆಜ್ಞೆಮಾಡುತ್ತಾ "ಅರಳುಗಳನ್ನೂ ಹೂಗಳನ್ನೂ ಸುವಾಸನೆಯ ಮಾಲೆಗಳನ್ನೂ ದಾರಿಯಲ್ಲಿ ಚೆಲ್ಲಲಿ.

ಅವನು ಬರುವ ದಾರಿಯಲ್ಲಿ ಅರ್ಘ್ಯಗಳನ್ನು ಇರಿಸಲಿ. ಮೀನು ಮಾಂಸಗಳನ್ನೂ ಕಜ್ಜಾಯಗಳನ್ನೂ ಚಕ್ಕುಲಿಗಳನ್ನೂ ಅವನು ಬರುವ ದಾರಿಯಲ್ಲಿ ಇರಿಸಲಿ. ತುಪ್ಪ, ಎಣ್ಣೆ, ಮೊಸರು, ಹಾಲು, ಹೆಂಡ, ಕಂಗು, ಬತ್ತಗಳನ್ನೂ ಅವನು ಬರುವ ದಾರಿಯಲ್ಲಿ ಇರಿಸಲಿ. ಮಿಠಾಯಿ ಮಾಡುವವರೂ ಅಡುಗೆಯವರೂ ಅಲ್ಲಿರಲಿ. ನಟ ನರ್ತಕ ಗಾಯಕರು ಅಲ್ಲಿರಲಿ. ದುಃಖವನ್ನು ಹೋಗಲಾಡಿಸುವವರೆಲ್ಲಾ ಅಲ್ಲಿರಲಿ. ವೀಣೆ, ಭೇರಿ, ಡಿಂಡಿಮ, ಮೃದಂಗ, ಶಂಖ ಮುಂತಾದ ವಾದ್ಯಗಳೆಲ್ಲಾ ಧ್ವನಿ ಮಾಡಲಿ" ಎಂದನು.

ರಾಜನು ಮಾರ್ಗದ ಅಲಂಕಾರವನ್ನು ಹೀಗೆ ವಿವರಿಸಿದನು.

ಅತ್ತ ಜೂಜಕನು ಮಿತಿ ಮೀರಿ ತಿಂದು ಅರಗಿಸಿಕೊಳ್ಳಲಾರದೆ, ಅಲ್ಲಿಯೇ ಕಾಲವಾದನು. ರಾಜನು ಅವನ ಶರೀರಕ್ಕೆ ಆಗಬೇಕಾದ ಕೆಲಸಗಳನ್ನು ಮಾಡಿಸಿ, ಅವನ ಜ್ಞಾತಿಗಳಿಗಾಗಿ ನಗರದಲ್ಲಿ ಡಂಗುರ ಹೊಯಿಸಿದನು. ಯಾರೂ ಕಾಣದಿರಲು ಅವನ ಧನ ಪುನಃ ರಾಜನಿಗೇ ಆಯಿತು.

ಇದಾದ ಏಳನೆಯ ದಿವಸ ಸೇನೆಯೆಲ್ಲಾ ಸೇರಿತು. ರಾಜನು ಮಹಾಪರಿವಾರದೊಡನೆ ಜಾಲಿಯ ಮಾರ್ಗನಾಯಕತ್ವದಲ್ಲಿ ಹೊರಟನು. ಶಿಬಿರಾಜನ ಆ ಮಹಾಸೈನ್ಯವು ಜಾಲಿ ತೋರಿಸಿದ ಮಾರ್ಗದಲ್ಲಿ ವಂಕಪರ್ವತಕ್ಕೆ ಹೋಯಿತು. ಹೋಗುವಾಗ, ವಿಶ್ವಂತರನು ಕಾಶಿಯವರಿಗೆ ದಾನಕೊಟ್ಟಿದ್ದ ಅರವತ್ತು ವರುಷದ ಆನೆ ಘೀಂಕರಿಸಿತು. ಕಾಶಿರಾಜ್ಯಕ್ಕೆ ಕೆಟ್ಟಕಾಲ ಬಂದು, ಅವರು ಆ ಆನೆಯನ್ನು ಹಿಂದಕ್ಕೆ ತಂದು ಒಪ್ಪಿಸಿದ್ದರು. ಆನೆಗೆ ಪಕ್ಷರಕ್ಷೆಗಳನ್ನು ಕಟ್ಟುವಾಗ, ಅದು ಘೀಂಕರಿಸಿತು. ಕುದುರೆಗಳು ಹೇಷಾರವವೆತ್ತಿದುವು, ರಥಚಕ್ರಗಳು ಚೀತ್ಕರಿಸಿದುವು. ಶಿಬಿಸೈನ್ಯ ಪ್ರಯಾಣಮಾಡಿದಾಗ ಎದ್ದ ದೂಳು ಆಕಾಶವನ್ನು ಮುಸುಕಿತು. ಹೀಗೆ, ಹರಹರಣಸಮರ್ಥವಾದ ಆ ಸೇನೆ ಜಾಲಿಯ ಮಾರ್ಗನಾಯಕತ್ವದಲ್ಲಿ ವಂಕಪರ್ವತದ ಕಡೆಗೆ ಪ್ರಯಾಣ ಮಾಡಿತು. ಅವರು ಮಹಾರಣ್ಯದ ಒಳಹೊಕ್ಕರು. ಅಲ್ಲಿ ಹೂಹಣ್ಣು ತುಂಬಿದ ಬಹುವೃಕ್ಷಗಳು, ಬಹುಹಕ್ಕಿಗಳು. ಋತುವಿನ ಹೂಗಳನ್ನು

ಹೊತ್ತ ಮರಗಳಲ್ಲಿ ನಾನಾಬಣ್ಣದ ಹಕ್ಕಿಗಳು ಮಧುರವಾಗಿ ಕೂಗಿಗೆ ಕೂಗು ಕೊಡುತ್ತಿದ್ದುವು. ಹೀಗೆ ಅವರು ದೀರ್ಘವಾದ ದಾರಿಯನ್ನು ನಡೆದು, ಒಂದು ಹಗಲೂರಾತ್ರಿಯಾದಮೇಲೆ ವಿಶ್ವಂತರನಿದ್ದ ಪ್ರದೇಶದ ಹತ್ತಿರ ಬಂದರು.

## ವಿಶ್ವಂತರ ದರ್ಶನ

ಜಾಲಿಕುಮಾರನು ಮುಚಲಿಂದ ಸರಸ್ತೀರದಲ್ಲಿ ಪಾಳೆಯ ಬಿಡಿಸಿದನು. ಹದಿನಾಲ್ಕುಸಾವಿರ ರಥಗಳನ್ನೂ ಬಂದ ದಾರಿಯ ಕಡೆಗೆ ಮುಖಮಾಡಿ ನಿಲ್ಲಿಸಿದನು. ಸಿಂಹ ಹುಲಿ ಖಡ್ಗಮೃಗ ಮೊದಲಾದವುಗಳಿಗೆ ಕಾವಲನ್ನು ಅಲ್ಲಲ್ಲೆ ವಿಧಿಸಿದನು. ಆನೆ ಮೊದಲಾದವುಗಳ ಶಬ್ದ ಬಹಳವಾಯಿತು.

ಮಹಾಸತ್ತ್ವನು ಅದನ್ನು ಕೇಳಿ, "ಏನು, ನಮ್ಮ ಶತ್ರುಗಳು ತಂದೆಯನ್ನು ಗಾಯಗೊಳಿಸಿ ನನಗಾಗಿ ಬಂದರೇನು ?" ಎಂದು ಮರಣಭಯದಿಂದ ಹೆದರಿ ಮಾದ್ರಿಯನ್ನು ಕರೆದುಕೊಂಡು ಪರ್ವತವನ್ನು ಏರಿ ಸೇನೆಯನ್ನು ಅವಲೋಕಿಸಿದನು. ಅವಲೋಕಿಸಿ, "ನೋಡು, ಮಾದ್ರಿ, ವನದಲ್ಲಿ ಏನು ಮಹಾಶಬ್ದವಾಗುವುದು! ಕುದುರೆಗಳ ಹೇಷಾರವ ಕೇಳುವುದು. ಧ್ವಜಗಳ ತುದಿ ಕಾಣುವುದು. ಈ ಕಾಡಿನಲ್ಲಿ ಬೇಡರು ಅರಿಯದ ಜಿಂಕೆಗಳನ್ನು ಬಲೆಗಳಲ್ಲಿ ಕೆಡವಿ ಬೈಯುತ್ತ ಕೊಲ್ಲುವರು. ಅದರಂತೆಯೇ, ದೋಷವಿಲ್ಲದೆ ರಾಜ್ಯದಿಂದ ಹೊರಗಾದ ನಾವು ಶತ್ರುಗಳ ಕೈಗೆ ಬಿದ್ದು ಸಾಯುತ್ತೇವೆ, ನೋಡು" ಎಂದನು.

ಅವಳು ಅವನ ಮಾತನ್ನು ಕೇಳಿ ಸೇನೆಯನ್ನು ಅವಲೋಕಿಸಿ, "ನಮ್ಮ ಸೇನೆಯೇ ಆಗಿರಬೇಕು" ಎಂದು ಮಹಾಸತ್ತ್ವನನ್ನು ಸಂತೈಸುತ್ತಾ "ನೀರಿನ ಸಮುದ್ರವನ್ನು ಬೆಂಕಿ ಹಿಂಸಿಸಲಾರದಂತೆ ನಿನ್ನನ್ನು ನಿನ್ನ ಶತ್ರುಗಳು ಹಿಂಸಿಸಲಾರರು. ಶಕ್ರನು ನಿನಗೆ ವರ ಕೊಟ್ಟುದನ್ನು ನೆನೆಸಿಕೊ. ಇಷ್ಟರಲ್ಲಿಯೆ ಒಳ್ಳೆಯದಾಗುವುದು" ಎಂದಳು.

ಆಗ ಮಹಾಸತ್ತ್ವನು ಶೋಕವನ್ನು ದೂರಮಾಡಿ, ಅವಳೊಡನೆ ಪರ್ವತದಿಂದ ಇಳಿದು ಮನಸ್ಸನ್ನು ದೃಢಮಾಡಿಕೊಂಡು ಪರ್ಣಶಾಲೆಯ ಬಾಗಿಲಲ್ಲಿ ಕುಳಿತನು.

ಆದೇ ಕ್ಷಣದಲ್ಲಿ ಸಂಜಯನು ದೇವಿಯನ್ನು ಕರೆದು "ಭದ್ರೆ, ಸ್ಪೃಶತೀ, ನಾವೆಲ್ಲರೂ ಒಟ್ಟಾಗಿ ಹೋದರೆ ಅವನಿಗೆ ಶೋಕ ಹೆಚ್ಚಾಗುವುದು. ಮೊದಲು ನಾನು ಮಾತ್ರ ಹೋಗುತ್ತೇನೆ. ಅನಂತರ, 'ಈಗ ಶೋಕವನ್ನು ಕಳೆದುಕೊಂಡು ಕುಳಿತಿರುವರು' ಎಂದು ತಿಳಿದಾಗ ನೀನು ಮಹಾಪರಿವಾರದೊಡನೆ ಬರಬಹುದು" ಎಂದು ಹೇಳಿ, ಸ್ವಲ್ಪ ಕಾಲವಾದ ಬಳಿಕ ಜಾಲಿ ಕೃಷ್ಣಾಜಿನೆಯರನ್ನು ಬನ್ನಿರೆಂದು ಕರೆದು, ರಥವನ್ನು ತಿರುಗಿಸಿ ಬಂದ ಕಡೆಗೇ ಮುಖಮಾಡಿ ನಿಲ್ಲಿಸಿ, ಅಲ್ಲಲ್ಲಿಗೆ ಕಾವಲಿರಿಸಿ, ಅಲಂಕರಿಸಿದ ಆನೆಯ ಮೇಲೆ ಮಗನ ಬಳಿಗೆ ಹೋದನು.

ಹೀಗೆ ಆ ತಂದೆಯು ರಥವನ್ನು ತಿರುಗಿಸಿ, ಸೇನೆಯನ್ನು ಕಾವಲಿರಿಸಿ, ಒಬ್ಬನೇ ತನ್ನ ಮಗನ ಬಳಿಗೆ ಬಂದನು. ಆನೆಯ ಮೇಲೇರಿ, ಉತ್ತರೀಯವನ್ನು ಹೆಗಲ ಮೇಲೆ ಹೊದ್ದು, ಕೈಮುಗಿದುಕೊಂಡು, ಮಗನಿಗೆ ರಾಜ್ಯಾಭಿಷೇಕ ಮಾಡಲು ಬಂದನು. ಬಂದು, ಹೆದರಿಕೆಯಿಲ್ಲದೆ ಸಮಾಧಾನಚಿತ್ತದಿಂದ ಪರ್ಣಶಾಲೆಯಲ್ಲಿ ಧ್ಯಾನಮಾಡುತ್ತಿದ್ದ ಆ ರಮ್ಯರೂಪನಾದ ಕುಮಾರನನ್ನು ಕಂಡನು.

ಮಗನ ಮೇಲಿನ ಪ್ರೀತಿಯಿಂದ ಆ ತಂದೆ ಬರುವುದನ್ನು ಕಂಡು ವಿಶ್ವಂತರನೂ ಮಾದ್ರಿಯೂ ಇದಿರೆದ್ದು ವಂದಿಸಿದರು. ಮಾದ್ರಿಯು "ದೇವ, ನಿನ್ನ ಸೊಸೆಯಾದ ನಾನು ಮಾದ್ರಿ, ವಂದಿಸುತ್ತೇನೆ" ಎಂದು ಮಾವನ ಪಾದಗಳಿಗೆ ಶಿರಸಾ ಅಭಿವಂದಿಸಿದಳು. ಅವನು ಅವರನ್ನು ಆಲಿಂಗಿಸಿ ಅವರ ಬೆನ್ನು ಸವರಿದನು.

ಅನಂತರ ರಾಜನು ಶೋಕದಿಂದ ಅಳುತ್ತಾ ಮಗನ ಕ್ಷೇಮಸಮಾಚಾರವನ್ನು ಕುರಿತು ಪ್ರಶ್ನಿಸಿದನು. ವಿಶ್ವಂತರನು ತನ್ನ ಕ್ಷೇಮವನ್ನು ತಿಳಿಸುತ್ತಾ "ಹಾಗೂ ಹೀಗೂ ಬದುಕುತ್ತಿದ್ದೇವೆ, ದೇವ. ಸಾರಥಿಯ ಕೈಗೆ ಸಿಕ್ಕಿದ ಕುದುರೆಯಂತೆ ಹಣವಿಲ್ಲದವನು ಹದಕ್ಕೆ ಬರುತ್ತಾನೆ. ನಾವು ಹಣವಿಲ್ಲದವರು ಹದಕ್ಕೆ ಬಂದಿದ್ದೇವೆ. ಆದರೆ ತಾಯಿತಂದೆಯರನ್ನು ಕಾಣದಿರುವುದರಿಂದ ನಾವು ಕೃಶರಾಗಿದ್ದೇವೆ. ರಾಜ್ಯದಿಂದ ಹೊರಗಾಗಿ ಕಾಡಿನಲ್ಲಿ ಶೋಕಪಡುತ್ತಾ ವಾಸಿಸುತ್ತಿದ್ದೇವೆ" ಎಂದು ಹೇಳಿ, "ಶಿಬಿಶ್ರೇಷ್ಠ, ನಿನ್ನ ಮೊಮ್ಮಕ್ಕಳಿಬ್ಬರೂ ಒಬ್ಬ ಬ್ರಾಹ್ಮಣನ

ವಶವಾದರು. ಆ ಲುಬ್ಧನು ಅವರನ್ನು ಗೋಗಳನ್ನು ಅಟ್ಟುವಂತೆ ಅಟ್ಟಿ ಕೊಂಡು ಹೋದನು. ರಾಜಪುತ್ರಿಯ ಮಕ್ಕಳಾದ ಅವರಿಬ್ಬರ ವಿಷಯ ಗೊತ್ತಿದ್ದರೆ, ತಿಳಿಸು " ಎಂದನು.

ಅದಕ್ಕೆ ರಾಜನು " ಜಾಲಿ ಕೃಷ್ಣಾಜಿನೆಯರಿಬ್ಬರನ್ನೂ ಬೆಲೆ ಕೊಟ್ಟು ಪಡೆದೆ. ಬ್ರಾಹ್ಮಣನಿಗೆ ಹಣ ಕೊಟ್ಟೆ. ಹೆದರಬೇಡ, ಸಂತೈ ಸಿಕೊ " ಎಂದನು.

ಅದನ್ನು ಕೇಳಿ ಮಹಾಸತ್ತ್ವನ ಮನಸ್ಸು ಸಮಾಧಾನವಾಯಿತು. " ಅಪ್ಪ, ನೀನು ಆರೋಗ್ಯದಿಂದಿರುವೆಯಲ್ಲವೆ? ನಮ್ಮ ತಾಯಿ ಅತ್ತೂ ಅತ್ತೂ ಕಣ್ಣು ಕೆಡಿಸಿಕೊಳ್ಳುವುದಿಲ್ಲ ತಾನೆ?" ಎಂದು ಕೇಳಿದನು.

ಅದಕ್ಕೆ ರಾಜನು " ನಾನು ಆರೋಗ್ಯವಾಗಿದ್ದೇನೆ. ನಿಮ್ಮ ತಾಯಿ ಅತ್ತೂ ಅತ್ತೂ ಕಣ್ಣು ಕೆಡಿಸಿಕೊಳ್ಳುವುದಿಲ್ಲ " ಎಂದನು.

ಮಹಾಸತ್ತ್ವನು ಪುನಃ "ರಾಜ್ಯ ಚೆನ್ನಾಗಿದೆಯೆ? ಹಳ್ಳಿಗಳೂ ನಗರಗಳೂ ಚೆನ್ನಾಗಿವೆಯೆ? ಮಳೆ ಆಗುತ್ತಿದೆಯೆ?" ಎಂದನು.

" ರಾಜ್ಯ ಚೆನ್ನಾಗಿದೆ. ಹಳ್ಳಿಗಳೂ ನಗರಗಳೂ ಚೆನ್ನಾಗಿವೆ. ಮಳೆ ಆಗುತ್ತಿದೆ" ಎಂದು ರಾಜನು ಹೇಳಿದನು.

ಹೀಗೆ ಅವರು ಮಾತನಾಡುತ್ತಿರಲು, ಸ್ಪೃಶತೀದೇವಿ 'ಈಗ ಶೋಕ ಕಡಿಮೆಯಾಗಿ ಕುಳಿತಿರಬೇಕು' ಎಂದು ತಿಳಿದು ಮಹಾಪರಿವಾರ ದೊಡನೆ ಮಗನ ಬಳಿಗೆ ಬರಿಗಾಲಿನಲ್ಲಿ ನಡೆದುಕೊಂಡೇ ಹೋದಳು. ಮಗನ ಮೇಲಿನ ಪ್ರೀತಿಯಿಂದ ಆ ತಾಯಿ ಬರುವುದನ್ನು ಕಂಡು, ವಿಶ್ವಂತರನೂ ಮಾದ್ರಿಯೂ ಇದಿರೆದ್ದು ಅವಳಿಗೆ ವಂದಿಸಿದರು. 'ಆರ್ಯೆ, ಸೊಸೆಯಾದ ನಾನು, ಮಾದ್ರಿ, ವಂದಿಸುತ್ತೇನೆ' ಎಂದು ಮಾದ್ರಿಯು ಅತ್ತೆಯ ಕಾಲಿಗೆ ಶಿರಸಾ ವಂದಿಸಿದಳು. ಮಕ್ಕಳೂ ಮಾದ್ರಿಯನ್ನು ದೂರದಿಂದ ಕಂಡರು. ತಾಯನ್ನು ಕಂಡ ಕರುಗಳಂತೆ ಕೂಗುತ್ತಾ ಓಡಿ ಬಂದರು. ಮಕ್ಕಳನ್ನು ಮಾದ್ರಿಯೂ ಕಂಡಳು. ಕಂಡು, ದೆವ್ವ ಮೆಟ್ಟಿ ದವಳಂತೆ ಓಡಿದಳು. ಮಕ್ಕಳನ್ನು ಕಂಡು ಅವಳ ಎದೆಯಿಂದ ಹಾಲು ಉಕ್ಕಿ ಹರಿಯಿತು.

ಅದೇ ಕ್ಷಣದಲ್ಲಿ ಪರ್ವತಗಳು ಧ್ವನಿಕೊಟ್ಟುವು, ಭೂಮಿ ನಡುಗಿತು, ಮಹಾಸಮುದ್ರ ಸಂಕ್ಷೋಭಗೊಂಡಿತು, ಗಿರಿರಾಜನಾದ ಸುಮೇರು ಬಗ್ಗಿತು. ಆರು ಕಾಮಾವಚರದೇವಲೋಕಗಳಲ್ಲೂ ಏಕಕೋಲಾಹಲ ವಾಯಿತು. ದೇವರಾಜನಾದ ಶಕ್ರನು "ಆರುಜನ ಕ್ಷತ್ರಿಯರೂ ತಮ್ಮ ಪರಿಸೆಯೊಡನೆ ಎಚ್ಚರತಪ್ಪಿರುವರು. ಇವರಲ್ಲಿ ಎದ್ದು ಮೈಮೇಲೆ ನೀರು ಚಿಮುಕಿಸಬಲ್ಲವರು ಒಬ್ಬರೂ ಇಲ್ಲ. ಹನಿಮಳೆ ಸುರಿಸುವೆನು" ಎಂದು ಚಿಂತಿಸಿ ಹನಿಮಳೆ ಸುರಿಸಿದನು. ನೆನೆಯಬಯಸಿದವರು ನೆನೆದರು; ನೆನೆಯಬಯಸದವರ ಮೇಲೆ ಒಂದು ಹನಿಯೂ ನಿಲ್ಲಲಿಲ್ಲ, ಪದ್ಮಪತ್ರದ ನೀರಿನಂತೆ ಹರಿದುಹೋಯಿತು. ಹೀಗೆ ಆ ಮಳೆ ಕಮಲವನದಲ್ಲಿ ಬಿದ್ದ ಮಳೆಯಂತಾಯಿತು. ಆರುಜನ ಕ್ಷತ್ರಿಯರೂ ಎಚ್ಚೆತ್ತರು. ಮಹಾ ಜನರು "ಈ ಜ್ಞಾತಿಗಳು ಸೇರಿದಾಗ ಹನಿಮಳೆಯಾಯಿತು, ಮಹಾ ಪೃಥ್ವಿ ಕಂಪಿಸಿತು" ಎಂದು ಆಶ್ಚರ್ಯವನ್ನು ನುಡಿದರು.

## ಮಾದ್ರೀ ವಿಶ್ವಂತರರ ಅಭಿಷೇಕ

ಅನಂತರ ಆ ರಾಷ್ಟ್ರದವರೆಲ್ಲರೂ ಒಂದೇ ದನಿಯಿಂದ "ನೀನು ನಮಗೆ ಈಶ್ವರನಾಗು, ರಾಜ. ನೀವಿಬ್ಬರೂ ನಮ್ಮನ್ನು ಆಳಿರಿ" ಎಂದು ವಿಶ್ವಂತರನನ್ನೂ ಮಾದ್ರಿಯನ್ನೂ ಬೇಡಿದರು.

ಅದಕ್ಕೆ ಮಹಾಸತ್ತ್ವನು ತಂದೆಯೊಡನೆ "ಧರ್ಮದಿಂದ ರಾಜ್ಯ ವಾಳುತ್ತಿದ್ದ ನನ್ನನ್ನು ನೀನೂ ನಿನ್ನ ದೇಶದವರೂ ಸೇರಿ ರಾಷ್ಟ್ರದಿಂದ ಹೊರಗಟ್ಟಿದಿರಿ" ಎಂದನು.

ಆಗ ರಾಜನು ಮಗನನ್ನು ಸಂತೈಸುತ್ತಾ "ಶಿಬಿಗಳ ಮಾತಿನಂತೆ ನಿರ್ದೋಷಿಯನ್ನು ಹೊರಗಟ್ಟಿ ನಾನು ಕೆಟ್ಟಕೆಲಸಮಾಡಿದೆ" ಎಂದು ತನ್ನ ದುಃಖವನ್ನು ಹೋಗಲಾಡಿಸುವುದಕ್ಕೋಸ್ಕರ "ಅಪ್ಪ, ತಂದೆಯ ದುಃಖವನ್ನಾಗಲಿ, ತಾಯಿ ತಂಗಿಯರ ದುಃಖವನ್ನಾಗಲಿ ಜೀವವನ್ನು ಕೊಟ್ಟಾದರೂ ಕಳೆಯಬೇಕು. ಆದ್ದರಿಂದ ನಿನ್ನ ಋಷಿವೇಷವನ್ನು ಬಿಡು, ರಾಜವೇಷವನ್ನು ತಾಳು" ಎಂದು ಬೇಡಿದನು.

ಬೋಧಿಸತ್ತ್ವನಿಗೆ ರಾಜ್ಯವಾಳಲು ಇಷ್ಟವಿತ್ತು; ಆದರೂ ಹೇಳಿದೊಡನೆ ಒಪ್ಪುವುದು ಗೌರವವಲ್ಲವೆಂದು ಸುಮ್ಮನಿದ್ದನು. ಅನಂತರ ಆಗಲೆಂದು ಒಪ್ಪಿದನು. ಅವನ ಒಪ್ಪಿಗೆಯನ್ನು ತಿಳಿದು, ಅವನೊಡನೆ ಹುಟ್ಟಿದ ಅರುವತ್ತುಸಾವಿರ ಅಮಾತ್ಯರೂ "ಸ್ನಾನಕ್ಕೆ ಸಮಯವಾಯಿತು, ಮಹಾರಾಜ, ದೂಳುಕೊಳೆ ತೊಳೆದುಕೊ" ಎಂದರು. ಆಗ ಮಹಾಸತ್ತ್ವನು "ಸ್ವಲ್ಪ ತಾಳಿರಿ" ಎಂದು ಹೇಳಿ, ಪರ್ಣಶಾಲೆಯೊಳಕ್ಕೆ ಹೋಗಿ, ತನ್ನ ಋಷಿಯ ವೇಷವನ್ನು ಕಳಚಿಟ್ಟು ಹೊರಗೆಬಂದನು. ಅಲ್ಲಿ "ನಾನು ಒಂಬತ್ತೂವರೆ ತಿಂಗಳು ಶ್ರಮಣಧರ್ಮವನ್ನು ನಡೆಸಿದ ಸ್ಥಾನವಿದು. ಪಾರಮಿಯ ತುದಿಯನ್ನು ಹಿಡಿದು ದಾನ ಕೊಟ್ಟುದರಿಂದ ಭೂಮಿಯು ನಡುಗಿದ ಸ್ಥಾನವಿದು" ಎಂದು ಪರ್ಣಶಾಲೆಯನ್ನು ಮೂರುಸಲ ಪ್ರದಕ್ಷಿಣ ಮಾಡಿದನು, ನೆಲದುದ್ದ ನಮಸ್ಕಾರ ಮಾಡಿ ನಿಂತನು. ಆಗ ಅವನ ಬೆಳೆದ ಗಡ್ಡ ಮೀಸೆಗಳನ್ನು ಸುಂದರವಾಗಿ ಕತ್ತರಿಸಿದರು, ಅವನಿಗೆ ರಾಜ್ಯಾಭಿಷೇಕ ಮಾಡಿದರು. ಸರ್ವಾಭರಣಗಳಿಂದ ಭೂಷಿತನಾದ ದೇವರಾಜನಂತೆ ಅವನು ವಿರಾಜಿಸಿದನು.

ವಿಶ್ವಂತರನು ಹೀಗೆ ತನ್ನ ದೂಳುಕೊಳೆಗಳನ್ನು ಕಳೆದುಕೊಂಡನು. ಆಗ ಅವನ ಯಶಸ್ಸು ಬಹಳವಾಯಿತು. ಅವನು ಕಂಡ ಕಂಡ ಕಡೆ ಭೂಮಿ ನಡುಗಿತು. ಮಂಗಲಗಾಯಕರು ಮಂಗಲಗಳನ್ನು ಹೇಳಿದರು, ಎಲ್ಲಾ ತೆರದ ವಾದ್ಯಗಳನ್ನೂ ಧ್ವನಿಮಾಡಿದರು. ಮಹಾಸಮುದ್ರದ ಬಸಿರಲ್ಲಿ ಮೇಘಾಡಂಬರದಂತಹ ಧ್ವನಿಯಾಯಿತು. ಅವನ ಹಸ್ತಿರತ್ನವಾದ ಪ್ರತ್ಯಯಕ್ಕೆ ಅಲಂಕಾರಮಾಡಿ ಅದನ್ನು ಕರೆತಂದರು. ಅವನೂ ಖಡ್ಗರತ್ನವನ್ನು ನಡುವಿಗೆ ಬಿಗಿದು ಹಸ್ತಿರತ್ನವನ್ನು ಏರಿದನು. ಆಗ, ಅವನ ಜೊತೆಯಲ್ಲಿ ಹುಟ್ಟಿದ ಅರುವತ್ತುಸಾವಿರ ಅಮಾತ್ಯರು ಸರ್ವಾಲಂಕಾರಗಳಿಂದ ಅಲಂಕರಿಸಿಕೊಂಡು ಅವನ ಸುತ್ತಲೂ ಹೊರಟರು.

ಆಗ ಶಿಬಿಕನ್ಯೆಯರು ಮಾದ್ರೀದೇವಿಗೂ ಸ್ನಾನ ಮಾಡಿಸಿದರು, ಅಲಂಕರಿಸಿದರು, ಅಭಿಷೇಕಮಾಡಿದರು. ತಲೆಯ ಮೇಲೆ ಅಭಿಷೇಕದ ನೀರನ್ನು ಚಿಮುಕಿಸಿ, "ವಿಶ್ವಂತರನು ನಿನ್ನನ್ನೂ ಜಾಲಿ ಕೃಷ್ಣಾಜಿನೆಯ

ರನ್ನೂ ಪಾಲಿಸಲಿ. ಸಂಜಯರಾಜನು ನಿಮ್ಮನ್ನು ಕಾಪಾಡಲಿ" ಎಂದು ಮೊದಲಾಗಿ ಮಂಗಲಗಳನ್ನು ನುಡಿದರು.

ಹೀಗೆ ರಾಜ್ಯಾಭಿಷೇಕವಾದಮೇಲೆ, ವಿಶ್ವಂತರನೂ ಮಾದ್ರಿಯೂ ತಾವು ಹಿಂದೆ ವನವಾಸದಲ್ಲಿದ್ದುದನ್ನು ಸ್ಮರಿಸಿಕೊಂಡರು; ಮಕ್ಕಳನ್ನು ಪುನಃ ಪಡೆದುದಕ್ಕೆ ಆನಂದಿಸಿದರು. ಆಗ ಮಾದ್ರಿಯು ಮಕ್ಕಳನ್ನು ಕುರಿತು "ನಾನು ಒಂದೇ ಹೊತ್ತು ಊಟಮಾಡಿ ನೆಲದಮೇಲೆ ಮಲಗುತ್ತಿದ್ದೆ. ನಿಮ್ಮ ಮೇಲಿನ ಪ್ರೀತಿಯಿಂದ ಇದೇ ನನಗೆ ವ್ರತವಾಗಿತ್ತು. ಈಗ ನಿಮ್ಮನ್ನು ಸೇರಿ ನನ್ನ ವ್ರತ ಮುಗಿಯಿತು. ಮಕ್ಕಳೆ, ನಿಮ್ಮ ತಾಯಿಯೂ ತಂದೆಯೂ ಮಾಡಿರುವ ಪುಣ್ಯ ನಿಮ್ಮನ್ನು ಕಾಪಾಡಲಿ. ಮೇಲಾಗಿ, ಸಂಜಯಮಹಾರಾಜನೂ ನಿಮ್ಮನ್ನು ರಕ್ಷಿಸಲಿ. ನಾನೂ ನಿಮ್ಮ ತಂದೆಯೂ ಪುಣ್ಯವೇನನ್ನಾದರೂ ಮಾಡಿದ್ದರೆ, ಆ ಸತ್ಯವಾದ ಕುಶಲದಿಂದ ನೀವು ಮುಪ್ಪಿಲ್ಲದವರಾಗಿರಿ, ಸಾವಿಲ್ಲದವರಾಗಿರಿ'' ಎಂದಳು.

ಅತ್ತ ಸ್ಪೃಶತೀದೇವಿ ''ಇಂದಿನಿಂದ ನನ್ನ ಸೊಸೆ ಇದೇ ವಸ್ತ್ರಗಳನ್ನು ಉಡಲಿ, ಇದೇ ಆಭರಣಗಳನ್ನು ಧರಿಸಲಿ'' ಎಂದು ಪೆಟ್ಟಿಗೆ ತುಂಬಿ ಕಳಿಸಿದಳು. ಕಾಶಿಯ ವಸ್ತ್ರಗಳನ್ನೂ ಕ್ಷೌಮಕೌಟುಂಬರಗಳನ್ನೂ ಆ ಅತ್ತೆ ಸೊಸೆಗೆ ಕಳಿಸಿದಳು. ಮಾದ್ರಿ ಅದರಿಂದ ಶೋಭಿಸಿದಳು. ಚಿನ್ನದ ಕೊರಳಹಾರವನ್ನೂ ಖರ್ಜೂರಸರವನ್ನೂ ಮಣಿಮಯಮೇಖಲೆಯನ್ನೂ ಆ ಅತ್ತೆ ಸೊಸೆಗೆ ಕಳಿಸಿದಳು. ಮಾದ್ರಿ ಅದರಿಂದ ಶೋಭಿಸಿದಳು. ಅತ್ತೆ ಕಳಿಸಿದ ಅನೇಕ ಅಲಂಕಾರಗಳನ್ನು ಧರಿಸಿ ಆ ರಾಜಪುತ್ರಿಯು ನಂದನವನದ ದೇವಕನ್ಯೆಯಂತೆ ಶೋಭಿಸಿದಳು. ತಲೆಗೆ ಸ್ನಾನಮಾಡಿ, ಶುಚಿವಸ್ತ್ರಗಳನ್ನೂ ಸರ್ವಾಭರಣಗಳನ್ನೂ ಧರಿಸಿ, ಆ ರಾಜಪುತ್ರಿಯು ತ್ರಯಸ್ತ್ರಿಂಶಸ್ಸ್ವರ್ಗದ ಅಪ್ಸರೆಯಂತೆ ಶೋಭಿಸಿದಳು. ಚಿತ್ರಲತಾವನದಲ್ಲಿ ಗಾಳಿ ಮುತ್ತುಕೊಟ್ಟ ಬಾಳೆಯಂತೆ ಆ ಚೆಲುವಾದ ತುಟಿಗಳ ರಾಜಪುತ್ರಿ ಶೋಭಿಸಿದಳು.

ಆಗ ಅತಿಯಾಗಿ ಬೆಳೆಯದ ಒಂದು ಆನೆಯನ್ನು ಅವಳಿಗಾಗಿ ತಂದರು. ಎಂತಹ ಬಾಣಭರ್ಜಿಗಳನ್ನಾದರೂ ಎದುರಿಸಬಲ್ಲ ಆ ಉದ್ದ ಕೊಂಬಿನ ಆನೆಯನ್ನು ಮಾದ್ರಿಯು ಏರಿದಳು.

## ಜೇತುತ್ತರನಗರಕ್ಕೆ ಪ್ರಯಾಣ

ಹೀಗೆ ಅವರಿಬ್ಬರೂ ಮಹಾವೈಭವದಿಂದ ಪಾಳಯಕ್ಕೆ ಬಂದರು. ಸಂಜಯರಾಜನು ಹನ್ನೆರಡು ಅಕ್ಷೋಹಿಣಿಯೊಡನೆ ಒಂದು ತಿಂಗಳ ಕಾಲ ಪರ್ವತಕ್ರೀಡೆಯಾಡಿದನು, ವನಕ್ರೀಡೆಯಾಡಿದನು. ಆದರೂ ಮಹಾಸತ್ತ್ವನ ತೇಜಸ್ಸಿನಿಂದ ಆ ಮಹಾರಣ್ಯದಲ್ಲಿ ಯಾವ ಕ್ರೂರ ಮೃಗಕ್ಕಾಗಲಿ ಹಕ್ಕಿಗಾಗಲಿ ಏನೂ ಹಿಂಸೆಯಾಗಲಿಲ್ಲ. ಒಂದು ಮೃಗ ಇನ್ನೊಂದನ್ನು ಹಿಂಸಿಸಲಿಲ್ಲ. ಒಂದು ಹಕ್ಕಿ ಇನ್ನೊಂದನ್ನು ಹಿಂಸಿಸಲಿಲ್ಲ. ವಿಶ್ವಂತರನು ಕಾಡಿನಿಂದ ತೆರಳುವಾಗ ಕಾಡಿನ ಎಲ್ಲಾ ಮೃಗಗಳೂ ಎಲ್ಲಾ ಹಕ್ಕಿಗಳೂ ಗುಂಪಾಗಿ ಬಂದುವು. ವಿಶ್ವಂತರನು ಕಾಡಿನಿಂದ ತೆರಳುವಾಗ, ಕಾಡಿನ ಇಂಪಾದ ಶಬ್ದಗಳೆಲ್ಲಾ ನಿಂತು ಹೋದುವು.

ಸಂಜಯ ನರೇಂದ್ರನು ತಿಂಗಳಕಾಲ ಕ್ರೀಡೆಯಾಡಿ ಸೇನಾಪತಿಯನ್ನು ಕರೆಕಳುಹಿ, "ಅಯ್ಯಾ, ನಾವು ಬಹುಕಾಲ ಅರಣ್ಯದಲ್ಲಿದ್ದೆವು. ನನ್ನ ಮಗನು ಹೋಗುವ ದಾರಿಯನ್ನು ಅಲಂಕರಿಸಿದೆಯ ?" ಎಂದು ಪ್ರಶ್ನಿಸಿ, "ಹೊರಡಲು ಸಮಯವಾಗಿದೆ, ದೇವ" ಎನ್ನಲು, ವಿಶ್ವಂತರನಿಗೆ ತಿಳಿಸಿ ಸೇನೆಯೊಡನೆ ಹೊರಟನು. ವಂಕಗಿರಿಯ ಬಸಿರಿಂದ ಜೇತುತ್ತರ ನಗರದವರೆಗಿನ ಅರುವತ್ತು ಯೋಜನ ಉದ್ದದ ಅಲಂಕೃತ ಮಾರ್ಗವನ್ನು ಮಹಾಸತ್ತ್ವನು ಮಹತ್ತಾದ ಪರಿವಾರದೊಡನೆ ನಡೆದನು.

ವಿಶ್ವಂತರನು ವಾಸಿಸಿದ್ದ ಕಡೆಯಿಂದ ಜೇತುತ್ತರನಗರದವರೆಗೆ ರಾಜಮಾರ್ಗವನ್ನು ವಿಚಿತ್ರವಾದ ಪುಷ್ಪಗಳಿಂದ ಅಲಂಕರಿಸಿದರು. ನೋಡಲು ಲಕ್ಷಣರಾದ ಅರುವತ್ತುಸಾವಿರ ಯೋಧರು ವಿಶ್ವಂತರನ ಸುತ್ತಲೂ ಪರಿವಾರವಾಗಿ ನಡೆದರು. ಮಕ್ಕಳು, ಸ್ತ್ರೀಯರು, ವೈಶ್ಯರು, ಬ್ರಾಹ್ಮಣರು, ಹಸ್ತ್ಯಶ್ವರಥಪದಾತಿಗಳು, ಕತ್ತಿ ಹಿಡಿದವರು, ಗುರಾಣಿ ಹಿಡಿದವರು—ಎಲ್ಲರೂ ವಿಶ್ವಂತರನ ಸುತ್ತಲೂ ಪರಿವಾರವಾಗಿ ನಡೆದರು.

ರಾಜನು ಆ ಅರುವತ್ತು ಯೋಜನದ ಮಾರ್ಗವನ್ನು ಎರಡು ತಿಂಗಳಲ್ಲಿ ದಾಟಿ, ಜೇತುತ್ತರನಗರವನ್ನು ಮುಟ್ಟಿದನು ; ಅಲಂಕರಿಸಿದ ಆ ನಗರವನ್ನು ಪ್ರವೇಶಿಸಿ ತನ್ನ ಅರಮನೆಗೆ ಹೋದನು.



ಮಾದ್ರಿ ಆಶ್ರಮಕ್ಕೆ ಹಿಂದಿರುಗಿದುದು ಮಕ್ಕಳು ತಾತನ ತೊಡೆಯ ಮೇಲೆ

ಅವರ ಬರುವಿಕೆಗೋಸ್ಕರ, ಬಹುಪ್ರಾಕಾರತೋರಣಗಳಿಂದ ರಮ್ಯವಾದ ಆ ಪುರದಲ್ಲಿ ಅನ್ನಪಾನಗಳನ್ನೂ ನೃತ್ಯಗೀತಗಳನ್ನೂ ಒದಗಿಸಿದ್ದರು. ಶಿಬಿಕುಮಾರನು ಬಂದಾಗ ಆ ಊರಿನವರೂ ಆ ದೇಶದವರೂ ಸಂತೋಷದಿಂದ ಬಟ್ಟೆಗಳನ್ನು ಮೇಲೆ ಎಸೆದಾಡಿದರು. ಆ ದಾನದಾಯಕನು ನಗರಕ್ಕೆ ಬಂದಾಗ ಸೆರೆಯಲ್ಲಿದ್ದವರನ್ನೆಲ್ಲಾ ಬಿಟ್ಟು ಬಿಡಬೇಕೆಂದು ಸಾರಿದರು.

ಬೆಕ್ಕು ಕೂಡ ಮೊದಲುಗೊಂಡು ವಿಶ್ವಂತರ ಮಹಾರಾಜನು ಎಲ್ಲಾ ಪ್ರಾಣಿಗಳಿಗೂ ಬಂಧನಬಿಡಿಸಿದನು. ಬಳಿಕ, ತಾನು ನಗರವನ್ನು ಹೊಕ್ಕ ದಿವಸವೇ ಬೆಳಗಿನಜಾವದಲ್ಲಿ "ನಾಳೆ, ರಾತ್ರಿ ಹಗಲಾದರೆ, ನಾನು ಬಂದುದನ್ನು ಕೇಳಿ ಯಾಚಕರು ಬರುವರು. ಅವರಿಗೆ ಏನು ಕೊಡಲಿ?" ಎಂದು ಚಿಂತಿಸಿದನು. ಅದೇ ಕ್ಷಣದಲ್ಲಿ ಶಕ್ರನ ಆಸನ ಬಿಸಿಯಾಯಿತು. ಅವನು ಅದರ ಕಾರಣವನ್ನು ಗಮನಿಸಿ ತಿಳಿದು, ರಾಜನ ಮನೆಯ ಹಿಂದುಗಡೆಯೂ ಮುಂದುಗಡೆಯೂ ಸೊಂಟದವರೆಗೆ ತುಂಬುವಂತೆ ಸಪ್ತರತ್ನಗಳ ಮಳೆ ಸುರಿಸಿದನು. ಊರೊಳಗೆಲ್ಲಾ ಮೊಣಕಾಲಿನವರೆಗೆ ಸುರಿಸಿದನು. ಮಾರನೆಯ ದಿವಸ ಮಹಾಸತ್ತ್ವನು ಅರಮನೆಯ ಹಿಂದೆಯೂ ಮುಂದೆಯೂ ಇದ್ದ ಮನೆಯವರನ್ನು ಕರೆಸಿ, "ಅಲ್ಲಲ್ಲಿ ವೃಷ್ಟಿಯಾದುದು ಅವರವರಲ್ಲಿಯೆ ಇರಲಿ" ಎಂದು ಕೊಟ್ಟು, ಉಳಿದುದನ್ನು ತರಿಸಿ, ತನ್ನ ಮನೆಯಲ್ಲಿದ್ದ ಧನದ ಜೊತೆಗೆ ಬೊಕ್ಕಸದಲ್ಲಿ ರಾಶಿಹಾಕಿಸಿ ದಾನಕ್ಕೆ ತೊಡಗಿದನು.

ಹೀಗೆ, ಶಿಬಿರಾಷ್ಟ್ರವರ್ಧನನಾದ ವಿಶ್ವಂತರನು ರಾಜ್ಯಕ್ಕೆ ಪ್ರವೇಶಿಸಿದಾಗ ಚಿನ್ನದ ಮಳೆಗರೆಯಿತು. ಕ್ಷತ್ರಿಯನಾದ ವಿಶ್ವಂತರರಾಜನು ದಾನಗಳನ್ನು ಕೊಟ್ಟು, ಸತ್ತಮೇಲೆ, ಪ್ರಜ್ಞೆಯುಳ್ಳವನಾಗಿ ಸ್ವರ್ಗಕ್ಕೆ ತೆರಳಿದನು.

# ವಿಶ್ವಂತರನ ಪೂರ್ವೋತ್ತರ ಕಥೆ

## ವಿಶ್ವಂತರನ ಪೂರ್ವಕಥೆ

### ಸುಮೇಧ ಬ್ರಾಹ್ಮಣ

ಹಿಂದೆ, ಎಣಿಕೆಗೆ ಸಿಕ್ಕದಷ್ಟು ಕಾಲ ಹಿಂದೆ, ಅಮರವತೀ ಎಂಬ ನಗರದಲ್ಲಿ ಸುಮೇಧನೆಂಬ ಬ್ರಾಹ್ಮಣನಿದ್ದನು. ಅವನು ಉತ್ತಮ ವಂಶದಲ್ಲಿ ಹುಟ್ಟಿ ಮಹಾವರ್ಚಸ್ವಿಯಾಗಿದ್ದನು. ಅವನು ಬೇರೆ ಕೆಲಸಗಳ ಗೋಜಿಗೆ ಹೋಗದೆ ಬ್ರಾಹ್ಮಣಕರ್ಮಗಳಲ್ಲಿಯೇ ನಿರತನಾಗಿದ್ದನು.

ಸುಮೇಧನು ಇನ್ನೂ ಚಿಕ್ಕವನಾಗಿರುವಾಗಲೇ ಅವನ ತಾಯಿ ತಂದೆ ಕಾಲವಾದರು. ಆಗ ಮನೆಯ ಆಡಳಿತವನ್ನು ನೋಡುತ್ತಿದ್ದ ಮಂತ್ರಿಯು ಲೆಕ್ಕಪತ್ರದ ಪುಸ್ತಕಗಳನ್ನು ತಂದು, ಬೊಕ್ಕಸದ ಬಾಗಿಲನ್ನು ತೆಗೆದು, "ಇದು ನಿನ್ನ ತಾಯಿಯದು. ಇದು ನಿನ್ನ ತಂದೆಯದು. ಇದು ಅವರ ಹಿರಿಯರು ಸಂಪಾದಿಸಿ ಇಟ್ಟುದು. ನೀನು ಇದನ್ನು ಒಪ್ಪಿಸಿಕೊ" ಎಂದು ಮನೆಯ ಐಶ್ವರ್ಯವನ್ನೆಲ್ಲಾ ತೋರಿಸಿದನು.

ಆಗ ಪಂಡಿತನಾದ ಸುಮೇಧನು ಆ ಐಶ್ವರ್ಯವಷ್ಟನ್ನೂ ಗಮನಿಸಿ, "ನನ್ನ ಮನೆಯವರು ಈ ಎಲ್ಲಾ ಸಂಪತ್ತನ್ನೂ ಸಂಪಾದಿಸಿದರು, ಸರಿ. ಆದರೆ ಅವರು ಪರಲೋಕಕ್ಕೆ ಹೋಗುವಾಗ ಮಾತ್ರ ಏನೂ ತೆಗೆದು ಕೊಂಡು ಹೋಗಲಿಲ್ಲ. ನಾನು ಹೋಗುವಾಗ ನನ್ನೊಡನೆ ಇದನ್ನು ತೆಗೆದುಕೊಂಡುಹೋಗಬೇಕೆಂಬುದು ಸರಿಯಲ್ಲ" ಎಂದು ಚಿಂತಿಸಿ ತಾನು ಸಂನ್ಯಾಸಿಯಾಗಬೇಕೆಂದು ನಿಶ್ಚಯಿಸಿದನು.

ಅನಂತರ ಸುಮೇಧನು ತನ್ನ ನಿಶ್ಚಯವನ್ನು ಅಮರವತೀನಗರದ ರಾಜನಿಗೆ ತಿಳಿಸಿ ನಗರದಲ್ಲೆಲ್ಲಾ ಡಂಗುರ ಹುಯಿಸಿದನು. ಮನೆಯ ಬಾಗಿಲಿಗೆ ಬಂದ ಯಾಚಕರಿಗೆಲ್ಲಾ ಯಥೇಚ್ಛವಾಗಿ ದಾನಮಾಡಿದನು. ಹೀಗೆ, ತನ್ನ ಸರ್ವಸಂಪತ್ತಿನಿಂದಲೂ ಬಿಡುಗಡೆ ಹೊಂದಿ, ಸುಮೇಧನು ಅಮರಾನಗರವನ್ನು ಬಿಟ್ಟು ಹಿಮವಂತಕ್ಕೆ ಹೋದನು. ಅಲ್ಲಿ ಧರ್ಮಕ ವೆಂಬ ಪರ್ವತದಲ್ಲಿ ಆಶ್ರಮವನ್ನು ಮಾಡಿಕೊಂಡು ತಪಸ್ಸು ಮಾಡು ತ್ತಿದ್ದನು.

## ದೀಪಂಕರ ಬುದ್ಧ

ಸುಮೇಧನು ಹೀಗೆ ಹಿಮವಂತದಲ್ಲಿ ತಪಸ್ಸುಮಾಡುತ್ತಿದ್ದ ಕಾಲದಲ್ಲಿ, ದೀಪಂಕರನೆಂಬ ಬುದ್ಧನು ಜಗತ್ತಿನಲ್ಲಿ ಉದಯಿಸಿದನು. ಆತನು ತಾಯಿಯ ಗರ್ಭಕ್ಕೆ ಅವತರಿಸಿದಾಗಲೂ ಆತನ ಜನನವಾದಾಗಲೂ ಆತನು ತಪಸ್ಸುಮಾಡಿ ಬುದ್ಧತ್ವವನ್ನು ಪಡೆದಾಗಲೂ ಭೂಮಿ ನಡನಡುಗಿ ಗುಡುಗಿತು, ಇತರ ಅದ್ಭುತಗಳೂ ಆದವು. ಆದರೆ ತನ್ನ ತಪಸ್ಸಿನ ಫಲಗಳನ್ನು ಸವಿಯುತ್ತಿದ್ದ ಸುಮೇಧನಿಗೆ ಅದರ ಅರಿವೇ ಆಗಲಿಲ್ಲ.

ಭಗವಂತನಾದ ದೀಪಂಕರಬುದ್ಧನು, ಒಂದು ಸಲ, ತನ್ನ ಶಿಷ್ಯಸಮೂಹದೊಡನೆ ರಮ್ಯನಗರಕ್ಕೆ ಬಂದು, ಸುದರ್ಶನವೆಂಬ ವಿಹಾರದಲ್ಲಿ ತಂಗಿದನು. ಊರಿಗೆ ಊರೇ ಬಂದು ಅವನನ್ನು ಪೂಜಿಸಿತು, ಅವನ ಧರ್ಮವನ್ನು ಕೇಳಿ ಸಮಾಧಾನಪಡೆಯಿತು. ಊರಿನವರು ಬುದ್ಧನನ್ನು ಮಾರನೆಯ ದಿನ ಭಿಕ್ಷೆಗೆ ಕರೆದರು. ಬುದ್ಧನು ಒಪ್ಪಿಕೊಂಡನು.

ಮಾರನೆಯ ದಿವಸ ಊರಿನವರೆಲ್ಲರೂ ಸೇರಿ ಬುದ್ಧನು ಭಿಕ್ಷೆಗಾಗಿ ಬರುವ ಮಾರ್ಗವನ್ನು ಸಮಗೊಳಿಸತೊಡಗಿದರು. ತಿಟ್ಟುಗಳನ್ನು ಕೆತ್ತಿ ಸಮಮಾಡಿದರು, ತಗ್ಗುಗಳಿಗೆ ತುಂಬಿ ಸಮಮಾಡಿದರು. ದಾರಿಯುದ್ದಕ್ಕೂ ಅರಳುಗಳನ್ನೂ ಹೂಗಳನ್ನೂ ಚೆಲ್ಲಿದರು, ಧ್ವಜಗಳನ್ನೂ ಪತಾಕೆಗಳನ್ನೂ ಏರಿಸಿದರು, ಬಾಳೆಗಳನ್ನು ಕಟ್ಟಿದರು, ಪೂರ್ಣಕುಂಭಗಳನ್ನು ನಿಲ್ಲಿಸಿದರು.

## ಸುಮೇಧನ ಸೇವೆ

ಅದೇ ದಿನ ಸಂನ್ಯಾಸಿಯಾದ ಸುಮೇಧನು ತನ್ನ ಆಶ್ರಮವನ್ನು ಬಿಟ್ಟು ರಮ್ಯನಗರಕ್ಕೆ ಬಂದನು. ಅಲ್ಲಿ ನಡೆಯುತ್ತಿದ್ದ ಸಿದ್ಧತೆಗಳನ್ನು ಕಂಡು, ಅದಕ್ಕೆ ಕಾರಣ ಕೇಳಿದನು. ಆದಕ್ಕೆ ಊರಿನವರು "ಆರ್ಯ ಸುಮೇಧ, ದೀಪಂಕರ ಬುದ್ಧನು ಧರ್ಮಚಕ್ರವನ್ನು ತಿರುಗಿಸುತ್ತಾ ನಮ್ಮ ಊರಿಗೂ ಬಂದಿರುವನು. ಇಂದು ಅವನು ಇಲ್ಲಿ ಭಿಕ್ಷೆಗಾಗಿ ಬರುವನು. ಅದಕ್ಕಾಗಿ ಈ ಮಾರ್ಗವನ್ನು ಸರಿಪಡಿಸಿ ಅಲಂಕರಿಸುತ್ತಿದ್ದೇವೆ" ಎಂದರು.

ಆಗ ಸುಮೇಧನು "ಬುದ್ಧನೆಂಬ ಶಬ್ದ ಕಿವಿಗೆ ಬೀಳುವುದೆ ಈ ಲೋಕದಲ್ಲಿ ವಿರಳ. ಸಾಕ್ಷಾತ್ತಾಗಿ ಬುದ್ಧನನ್ನು ಕಾಣುವುದು ಇನ್ನೂ ಅಪೂರ್ವ. ಆದುದರಿಂದ ಇವರಂತೆ ನಾನೂ ಬುದ್ಧನಿಗಾಗಿ ಸೇವೆ ಮಾಡುವುದೇ ಶ್ರೇಯಸ್ಕರ" ಎಂದು ಚಿಂತಿಸಿ, ಅಲ್ಲಿಯ ಜನರನ್ನು ಕುರಿತು "ನೀವು ಈ ದಾರಿಯನ್ನು ಅಣಿಗೊಳಿಸುತ್ತಿದ್ದರೆ, ನನಗೂ ಸ್ವಲ್ಪ ದೂರ ಕೊಡಿರಿ. ನಾನೂ ಇದನ್ನು ಸರಿಪಡಿಸುತ್ತೇನೆ" ಎಂದು ಕೇಳಿದನು.

ಅವರು ಅದಕ್ಕೆ ಒಪ್ಪಿದರು. ಒಪ್ಪಿ, "ಇವನು ಈ ಸ್ಥಳವನ್ನು ತನ್ನ ತಪಸ್ಸಾಮರ್ಥ್ಯದಿಂದ ಸುಲಭವಾಗಿ ಸರಿಗೊಳಿಸುವನು" ಎಂದು ಮಾರ್ಗದಲ್ಲಿದ್ದ ಒಂದು ಜೌಗುಪ್ರದೇಶವನ್ನು ಅವನಿಗೆ ಬಿಟ್ಟುಕೊಟ್ಟರು. ಆದರೆ ಸುಮೇಧನು "ನಾನು ನನ್ನ ತಪಸ್ಸಾಮರ್ಥ್ಯದಿಂದ ಇದನ್ನು ನೇರಮಾಡಬಲ್ಲೆನಾದರೂ ಇತರರಂತೆಯೇ ಕೈಂಕರ್ಯ ನಡೆಸಿದ ಹೊರತು ನನಗೆ ತೃಪ್ತಿಯಿಲ್ಲ" ಎಂದು ತನ್ನ ಕೈಗಳಿಂದಲೇ ಮಣ್ಣು ಹೊತ್ತು ತಂದು ಹಾಕುತ್ತಿದ್ದನು.

ಈ ರೀತಿಯ ಸೇವೆಯಿಂದ ಅವನು ಆ ಜೌಗನ್ನು ಸರಿಪಡಿಸುವ ಮೊದಲೇ ದೀಪಂಕರ ಬುದ್ಧನು ತನ್ನ ಶಿಷ್ಯ ಸಂಘದೊಡನೆ ಆ ದಾರಿಯಲ್ಲಿ ಬಂದನು. ಆ ಮಹಾಪುರುಷನು ಬರುವುದನ್ನು ಸುಮೇಧನು ಕಂಡನು. ಕಂಡು, "ನನ್ನ ಪಾಲಿಗೆ ಬಂದ ಈ ಮಾರ್ಗ ಇನ್ನೂ ನಡೆಯಲು ಯೋಗ್ಯವಾಗಿಲ್ಲ. ಭಗವಂತನ ಪಾದಗಳಿಗೆ ಕೆಸರು ಅಂಟದಂತೆ ಮಾಡಲು ನಾನು ಇಂದು ನನ್ನ ದೇಹವನ್ನು ಅರ್ಪಿಸುತ್ತೇನೆ. ಭಗವಂತನೂ ಆತನ ಭಿಕ್ಷುಸಂಘವೂ ನನ್ನ ಮೈಯ ಹಲಗೆಯಮೇಲೆ ನಡೆದು ಹೋಗಲಿ. ಈ ಸೇವೆಯ ಪುಣ್ಯದಿಂದ ನನಗೆ ಚಿರಕಾಲ ಹಿತವಾಗಲಿ, ಚಿರಕಾಲ ಸುಖವಾಗಲಿ" ಎಂದುಕೊಂಡು, ಅಲ್ಲಿ ಕೆಸರು ಇದ್ದ ಕಡೆ ತನ್ನ ಕೃಷ್ಣಾಜಿನವನ್ನು ಹಾಸಿ, ತಾನು ಅದರ ಮೇಲೆ ಮಲಗಿದನು.

### ಸುಮೇಧನ ಸಂಕಲ್ಪ

ಸುಮೇಧನು ಹಾಗೆಯೇ ಮಲಗಿದ್ದಂತೆಯೇ ಬಳಿಗೆ ಬರುತ್ತಿದ್ದ ದೀಪಂಕರ ಬುದ್ಧನನ್ನು ಕುರಿತು ನೋಡಿ, "ನಾನು ಇದೇ ದಿವಸ

ಬುದ್ಧನ ಸಂಘದಲ್ಲಿ ಸೇರಿ, ಅವನ ಧರ್ಮದಂತೆ ನಡೆದು ನಿರ್ವಾಣವನ್ನು ಪಡೆಯಬಹುದು. ಆದರೆ ಇದಕ್ಕಿಂತ ನಾನೂ ದೀಪಂಕರ ಬುದ್ಧನಂತೆ ಆಗುವುದೆ ಮೇಲು. ನಾನು ನನ್ನ ನಿರ್ವಾಣವನ್ನು ಮಾತ್ರವೇ ಸಾಧಿಸುವುದಕ್ಕಿಂತ ಇತರರಿಗೂ ನಿರ್ವಾಣಮಾರ್ಗವನ್ನು ತೋರಿಸಿದ ಬಳಿಕ ನಾನೂ ನಿರ್ವಾಣ ಪಡೆಯುವುದೇ ತಕ್ಕುದು" ಎಂದು ನಿಶ್ಚಯ ಮಾಡಿದನು.

ಹೀಗೆ, ತಾನು ಶೀಘ್ರದಲ್ಲಿ ಪಡೆಯಬಹುದಾದ ತನ್ನ ಸ್ವಂತ ನಿರ್ವಾಣವನ್ನು ಸುಮೇಧನು ಒಲ್ಲದೆ ಹೋದನು. ಅದಕ್ಕಿಂತ, ಅನೇಕ ಜನ್ಮಗಳನ್ನು ಎತ್ತಿ, ಬುದ್ಧನಾಗುವುದಕ್ಕೆ ಬೇಕಾದ ಗುಣಗಳನ್ನು ಪ್ರತಿ ಜನ್ಮದಲ್ಲಿಯೂ ಬೆಳಸಿಕೊಂಡು, ಕಡೆಗೆ ಬುದ್ಧನಾಗಿ ಲೋಕದ ಕಲ್ಯಾಣಕ್ಕಾಗಿ ಕೆಲಸ ಮಾಡುವುದೇ ತಕ್ಕುದೆಂದು ಅವನು ನಿರ್ಧರಿಸಿದನು.

## ದೀಪಂಕರನ ಆಶ್ವಾಸನೆ

ಆ ವೇಳೆಗೆ ದೀಪಂಕರ ಬುದ್ಧನು ಸುಮೇಧನ ಬಳಿ ಬಂದು ನಿಂತನು. ನಿಂತು, ಅವನ ಮುಖ ನೋಡಿದುದರಿಂದಲೇ ಅವನ ನಿರ್ಧಾರವನ್ನು ತಿಳಿದು, ಕಾಲಗರ್ಭವನ್ನು ಹೊಕ್ಕು ಮುಂದಾಗುವುದನ್ನು ನೋಡಿ, 'ಇವನ ನಿಶ್ಚಯ ಕೈಗೂಡುವುದು. ಇವನು ಬುದ್ಧನಾಗುವನು', ಎಂದು ಕಂಡನು. ಆಗ ಆ ಊರಿನವರನ್ನು ಕುರಿತು, "ಇದೋ ಇಲ್ಲಿ ಮಲಗಿರುವ ಈ ಸುಮೇಧನು ತಾನೂ ಬುದ್ಧನಾಗಬೇಕೆಂದು ಸಂಕಲ್ಪಿಸಿರುವನು. ಇವನ ಸಂಕಲ್ಪವು ಈಡೇರುವುದು. ಇನ್ನು ನಾಲ್ಕು ಅಸಂಖ್ಯೇಯ ಕಾಲಗಳೂ ನೂರು ಸಾವಿರ ಕಲ್ಪಗಳೂ ಕಳೆದ ಬಳಿಕ ಈತನು ಗೌತಮನೆಂಬ ಬುದ್ಧನಾಗುವನು. ಕಪಿಲವಸ್ತು ಇವನ ಜನ್ಮಸ್ಥಲವಾಗುವುದು. ಮಾಯಾದೇವಿ ಶುದ್ಧೋದನ ಎಂಬವರು ಇವನ ತಾಯಿತಂದೆಯಾಗುವರು" ಎಂದು ಮೊದಲಾಗಿ ಮುಂದೆ ಆಗುವುದನ್ನೆಲ್ಲಾ ತಿಳಿಸಿದನು.

ತನ್ನ ಸಂಕಲ್ಪ ಸಿದ್ಧಿಸುವುದೆಂದು ಸುಮೇಧನಿಗೆ ಆನಂದವಾಯಿತು. "ಬುದ್ಧನಾಗುವ ಸತ್ತ್ವ ಸುಮೇಧನಲ್ಲಿ ಉಂಟು, ಸುಮೇಧನು ಬೋಧಿಸತ್ತ್ವನು" ಎಂದು ನಗರದವರೆಲ್ಲಾ ಆನಂದಪಟ್ಟರು. "ದೀಪಂಕರ

ಭಗವಂತನ ಕಾಲದಲ್ಲಿಯೇ ನಾವು ಧರ್ಮಮಾರ್ಗದಲ್ಲಿ ನಡೆದು ಅದರ ಫಲವನ್ನು ಪೂರ್ಣವಾಗಿ ಅನುಭವಿಸುವುದು ಆಗದಿದ್ದರೂ ಈ ಮುಂದೆ ಆಗುವ ಗೌತಮ ಬುದ್ಧನ ಕಾಲದಲ್ಲಿಯಾದರೂ ಅನುಭವಿಸುವಂತೆ ಆಗಲಿ" ಎಂದು ಹರಕೆ ಹೊತ್ತು ಅವರು ಸುಮೇಧ ಬೋಧಿಸತ್ತ್ವನಿಗೆ ಪೂಜೆ ಮಾಡಿದರು. ದೀಪಂಕರ ಬುದ್ಧನು ಕೂಡ ಸುಮೇಧನಿಗೆ ಎಂಟು ಹಿಡಿ ಹೂಗಳನ್ನು ಗೌರವದಿಂದ ಅರ್ಪಿಸಿ ತೆರಳಿದನು. ಅವನ ಭಿಕ್ಷು ಸಂಘವೂ ಸುಮೇಧನಿಗೆ ಮಾಲಾಗಂಧಗಳನ್ನು ಅರ್ಪಿಸಿತು. ಊರಿನವರೂ ಅವನನ್ನು ಪೂಜಿಸಿ ಹೋದರು.

### ಪಾರಮಿತೆಗಳ ಚಿಂತನೆ

ಹೀಗೆ ಎಲ್ಲರೂ ಹೊರಟುಹೋದ ಮೇಲೆ, ಸುಮೇಧನು ಮೇಲೆದ್ದು, "ಬುದ್ಧನಾಗುವುದಕ್ಕೆ ಬೇಕಾದ ಪಾರಮಿತೆಗಳನ್ನು ಚಿಂತನೆಮಾಡು ವೆನು" ಎಂದು ಒಂದು ಹೂವಿನ ರಾಶಿಯ ಮೇಲೆ ಕುಳಿತನು. ಆಗ ಅನೇಕಾನೇಕ ದೇವತೆಗಳು ಬಂದು, "ಸಾಧು, ಸಾಧು, ಸುಮೇಧ. ಪೂರ್ವದಲ್ಲಿ ಬೋಧಿಸತ್ತ್ವರುಗಳು ಪಾರಮಿತೆಗಳನ್ನು ಚಿಂತನೆಮಾಡುವೆ ವೆಂದು ಸಂಕಲ್ಪಿಸಿದಾಗ ಏನೇನು ಆಶ್ಚರ್ಯಗಳು ನಡೆದುವೋ ಅವೆಲ್ಲಾ ಇಂದೂ ನಡೆದಿವೆ. ಆದ್ದರಿಂದ ನೀನು ಬುದ್ಧನಾಗುವುದು ಖಂಡಿತ" ಎಂದು ಕೀರ್ತಿಸಿದರು.

ದೀಪಂಕರ ಬುದ್ಧನು ನುಡಿದ ಭವಿಷ್ಯದಿಂದಲೂ ದೇವತೆಗಳ ಸುವಾರ್ತೆಗಳಿಂದಲೂ ಸುಮೇಧನಿಗೆ ಅಮಿತವಾದ ಉತ್ಸಾಹ ಬಂದಿತು. "ಬುದ್ಧರ ಮಾತು ಸುಳ್ಳಾಗುವುದಿಲ್ಲ. ಮೇಲಕ್ಕೆ ಎಸೆದ ಕಲ್ಲು ಕೆಳಗೆ ಬೀಳುವಂತೆ, ಹುಟ್ಟಿದವರು ಸಾಯುವಂತೆ, ಮುಳುಗಿದ ಸೂರ್ಯ ಉದಯಿಸುವಂತೆ ಬುದ್ಧರ ವಚನ ನಡೆದೇ ನಡೆಯುವುದು. ನಾನು ಬುದ್ಧನಾಗುವುದು ಖಂಡಿತ" ಎಂದು ದೃಢಮಾಡಿಕೊಂಡು, ಬುದ್ಧನಾಗಲು ಬೇಕಾದ ಪಾರಮಿತೆಗಳನ್ನು ಅವನು ಚಿಂತನೆಮಾಡತೊಡಗಿದನು.

"ಮೊದಲನೆಯದು ದಾನಪಾರಮಿ. ಹಣಕ್ಕಾಗಲಿ ಹೆಸರಿಗಾಗಲಿ ಆಸೆಪಡದೆ ಹೆಂಡತಿ ಮಕ್ಕಳನ್ನೂ ಉಳ್ಳ ಎಲ್ಲವನ್ನೂ ದಾನಕೊಡುವುದೆ

ತಕ್ಕುದು. ಯಾರು ಏನು ಬೇಡಿದರೂ ಅವರಿಗೆ ಅದನ್ನು ಸಮಾಧಾನ ಚಿತ್ತದಿಂದ ಕೊಡುವುದೆ ತಕ್ಕುದು. ನಾನು ಈ ಪಾರಮಿಯನ್ನು ಪೂರೈಸ ಬೇಕು.

" ಎರಡನೆಯದು ಶೀಲಪಾರಮಿ. ಸಾವು ಬಂದರೂ ಸರಿಯೆ, ಕೈಕೊಂಡ ಶೀಲಗಳನ್ನು ಸಂಪೂರ್ಣವಾಗಿ ನಡಸುವುದೇ ತಕ್ಕುದು. ಏನೇನು ಕಷ್ಟಗಳು ಬಂದರೂ ನಡತೆಯನ್ನು ಸರಿಯಾಗಿ ಇಟ್ಟುಕೊಳ್ಳುವುದೆ ತಕ್ಕುದು. ನಾನು ಈ ಪಾರಮಿಯನ್ನು ಪೂರೈಸಬೇಕು.

"ಮೂರನೆಯದು ನೈಷ್ಕ್ರಮ್ಯಪಾರಮಿ. ಸೆರೆಯಲ್ಲಿ ಸಿಕ್ಕಿಬಿದ್ದವನು ಬಿಡುಗಡೆ ಪಡೆಯುವುದಕ್ಕಾಗಿ ಹಂಬಲಿಸುವಂತೆ, ಈ ಮನೆಯಲ್ಲಿ ವಾಸಿಸು ವುದನ್ನು ಬಿಟ್ಟು ಸಂನ್ಯಾಸಿಜೀವನವನ್ನು ಕೈಕೊಳ್ಳುವುದೇ ತಕ್ಕುದು. ನಾನು ಈ ಪಾರಮಿಯನ್ನು ಪೂರೈಸಬೇಕು.

"ನಾಲ್ಕನೆಯದು ಪ್ರಜ್ಞಾಪಾರಮಿ. ಭಿಕ್ಷುವಾದವನು ಇದು ಸಣ್ಣ ಮನೆ, ಇದು ದೊಡ್ಡ ಮನೆ ಎಂದು ಭೇದವೆಣಿಸದೆ ಎಲ್ಲಾ ಮನೆಗಳಲ್ಲೂ ತಿಂದು ಹೊಟ್ಟೆಹೊರೆದುಕೊಳ್ಳುವಂತೆ ಬುದ್ಧನಾಗಬಯಸುವವನು ಇವರು ಸಣ್ಣವರು, ಇವರು ದೊಡ್ಡವರು ಎಂದು ಭೇದವೆಣಿಸದೆ ಎಲ್ಲಾ ಜ್ಞಾನಿಗಳನ್ನೂ ಕೇಳಿ ತಿಳಿದುಕೊಳ್ಳಬೇಕು. ಇದೇ ತಕ್ಕುದು. ನಾನು ಈ ಪಾರಮಿಯನ್ನು ಪೂರೈಸಬೇಕು.

" ಐದನೆಯದು ವೀರ್ಯಪಾರಮಿ. ಸಿಂಹವು, ಏನು ಕೆಲಸ ಮಾಡಿ ದರೂ ಅಲಸಿಕೆಯಿಲ್ಲದೆ ದೃಢವಾದ ವೀರ್ಯದಿಂದ ಮಾಡುವಂತೆ ನಾನೂ ಮಾಡಬೇಕು. ಈ ಪಾರಮಿಯನ್ನೂ ಪೂರೈಸಬೇಕು.

"ಆರನೆಯದು ಕ್ಷಾಂತಿಪಾರಮಿ. ಹೊಗಳಿದರೆ ಹಿಗ್ಗದೆ ಬೈದರೆ ಕುಗ್ಗದೆ ಇರಬೇಕು. ಎರಡನ್ನೂ ಸಮಾನವಾಗಿ ಸಹಿಸಬೇಕು. ಕಸ ಎಸೆದರು ಕೂಡ ಭೂಮಿ ಹೇಗೆ ಸಹಿಸಿಕೊಂಡು ಇರುವುದೋ ಹಾಗೆ ಕ್ಷಮೆಯಿಂದ ಇರುವುದೆ ತಕ್ಕುದು. ನಾನು ಈ ಪಾರಮಿಯನ್ನೂ ಪೂರೈಸಬೇಕು.

"ಏಳನೆಯದು ಸತ್ಯಪಾರಮಿ. ತಲೆಯ ಮೇಲೆ ಸಿಡಿಲೆರಗಿದರೂ ಸುಳ್ಳಾಡದಿರುವುದೆ ತಕ್ಕುದು. ಔಷಧಿತಾರಕೆಯು, ಯಾವ ಋತು ಬಂದರೂ, ತನ್ನ ಗಮನಮಾರ್ಗವನ್ನು ಬಿಟ್ಟು ಬೇರೆ ಹಾದಿ ಹಿಡಿಯದ ರೀತಿಯಲ್ಲಿ ಸತ್ಯವನ್ನು ಸದಾ ಬಿಡದಿರುವುದೆ ತಕ್ಕುದು. ನಾನು ಈ ಪಾರಮಿಯನ್ನೂ ಪೂರೈಸಬೇಕು.

"ಎಂಟನೆಯದು ಅಧಿಷ್ಠಾನಪಾರಮಿ. ಮಾಡಬೇಕೆಂದು ಸಂಕಲ್ಪ ಮಾಡಿದುದನ್ನು ಕಡೆಮುಟ್ಟ ಮಾಡುವುದೆ ತಕ್ಕುದು. ಗಾಳಿ ಎಷ್ಟೇ ಬೀಸಿದರೂ ಪರ್ವತವು ಅಲುಗದೆ ಸ್ಥಿರವಾಗಿ ನಿಲ್ಲುವಂತೆ, ಏನೇ ಎಡರು ಬಂದರೂ ಹಿಡಿದ ಸಂಕಲ್ಪದಿಂದ ಕದಲದೆ ಇರುವುದೆ ತಕ್ಕುದು. ನಾನು ಈ ಪಾರಮಿಯನ್ನೂ ಪೂರೈಸಬೇಕು.

"ಒಂಬತ್ತನೆಯದು ಮೈತ್ರೀಪಾರಮಿ. ಶತ್ರುಗಳೂ ಸ್ನೇಹಿತರೂ ಒಂದೇ ಎಂಬ ಮನಸ್ಸನ್ನು ಬೆಳಸುವುದೇ ತಕ್ಕುದು. ನೀರು ಒಳ್ಳೆಯವರು ಕೆಟ್ಟವರು ಇಬ್ಬರಿಗೂ ಒಂದೇಸಮವಾದ ತಂಪನ್ನೂ ಹಿತವನ್ನೂ ಕೊಡುವಂತೆ ಎಲ್ಲಾ ಜೀವಿಗಳಲ್ಲಿಯೂ ಮೈತ್ರಿಯಿಂದಿರುವುದೇ ತಕ್ಕುದು. ನಾನು ಈ ಪಾರಮಿಯನ್ನೂ ಪೂರೈಸಬೇಕು.

"ಹತ್ತನೆಯದು ಉಪೇಕ್ಷಾಪಾರಮಿ. ಸುಖ ಬರಲಿ, ದುಃಖ ಬರಲಿ, ಸಮಚಿತ್ತದಿಂದಿರುವುದೇ ತಕ್ಕುದು. ಕಸ ಸುರಿಯಲಿ, ರಸ ಸುರಿಯಲಿ, ಭೂಮಿ ಸಮಚಿತ್ತದಿಂದಿರುವಂತೆ ಇರುವುದೇ ತಕ್ಕುದು. ನಾನು ಈ ಪಾರಮಿಯನ್ನೂ ಪೂರೈಸಬೇಕು.

"ಬುದ್ಧನಾಗುವುದಕ್ಕೆ ಮೊದಲು ಪೂರೈಸಬೇಕಾದ ಪರಿಪೂರ್ಣ ಗುಣಗಳೆಂದರೆ ಈ ಹತ್ತು ಪಾರಮಿತೆಗಳೇ. ಈ ಹತ್ತನ್ನು ಉಳಿದು ಬೇರೆ ಇಲ್ಲ. ಈ ಹತ್ತೂ ಪಾರಮಿತೆಗಳು ಆಕಾಶದಲ್ಲಾಗಲಿ ನೆಲದಲ್ಲಾಗಲಿ ದಿಕ್ಕುಗಳಲ್ಲಾಗಲಿ ದಿಕ್ಕುಗಳ ಮಧ್ಯಗಳಲ್ಲಾಗಲಿ ಇಲ್ಲ. ಈ ಪಾರಮಿತೆಗಳು ಇರುವುದು ನನ್ನ ಹೃದಯದಲ್ಲಿ. ಇವುಗಳನ್ನು ನಾನು ಪೂರೈಸಬೇಕು.

"ದಾನ, ಶೀಲ, ನೈಷ್ಕ್ರಮ್ಯ, ಪ್ರಜ್ಞಾ, ವೀರ್ಯ, ಕ್ಷಾಂತಿ, ಸತ್ಯ, ಅಧಿಷ್ಠಾನ, ಮೈತ್ರೀ, ಉಪೇಕ್ಷಾ—ಎಂಬಿವು ಮೊದಲಿನಿಂದ ಕ್ರಮವಾಗಿ

ಹತ್ತು ಪಾರಮಿತೆಗಳ ಹೆಸರು. ಉಪೇಕ್ಷಾ, ಮೈತ್ರೀ, ಅಧಿಷ್ಠಾನ, ಸತ್ಯ, ಕ್ಷಾಂತಿ, ವೀರ್ಯ, ಪ್ರಜ್ಞಾ, ನೈಷ್ಕ್ರಮ್ಯ, ಶೀಲ, ದಾನ—ಎಂಬಿವು ಕಡೆಯಿಂದ ಕ್ರಮವಾಗಿ ಹತ್ತು ಪಾರಮಿತೆಗಳ ಹೆಸರು. ”

—ಎಂದು ಈ ರೀತಿಯಾಗಿ ಸುಮೇಧ ಬೋಧಿಸತ್ವನು ದಶಪಾರ ಮಿತೆಗಳನ್ನು ಕುರಿತು ಚಿಂತನೆಮಾಡುತ್ತಿದ್ದಾಗ, ಅವನ ಧರ್ಮದ ತೇಜಸ್ಸಿಗೆ ತಡೆಯಲಾರದೆ ಭೂಮಿ ನಡುಗಿತು, ಕುಂಬಾರನ ಚಕ್ರದಂತೆ ಭ್ರಮಿಸಿತು. ಆಗ, ಕಬ್ಬಿನ ಗಾಣ ತಿರುಗಿದಂತೆ ಮಹಾಶಬ್ದವಾಯಿತು.

ರಮ್ಯನಗರದ ಜನರು ಆ ಭೂಕಂಪವನ್ನೂ ಮಹಾಶಬ್ದವನ್ನೂ ತಾಳಲಾರದೆ ಬಂದು ದೀಪಂಕರ ಬುದ್ಧನ ಪಾದಗಳಿಗೆ ಎರಗಿ ಅಭಯ ಬೇಡಿದರು. ದೀಪಂಕರ ಭಗವಂತನು ಅವರ ಭಯವನ್ನು ಶಮನಗೊಳಿಸಿ “ ಸುಮೇಧ ಬೋಧಿಸತ್ತ್ವನು ಪಾರಮಿತೆಗಳನ್ನು ಚಿಂತನೆಮಾಡುತ್ತಿರು ವನು. ಅದರಿಂದ ಈ ಅದ್ಭುತಗಳಾಗುತ್ತಿವೆ. ನೀವು ಹೆದರಬೇಡಿರಿ. ಆತನು ಬುದ್ಧನಾಗುವುದನ್ನು ಈ ಅದ್ಭುತಗಳು ಸೂಚಿಸುತ್ತಿವೆ” ಎಂದನು. ಆಗ ಆ ಜನರು ಭಯವನ್ನು ಕಳೆದುಕೊಂಡು, ಸುಮೇಧ ಬೋಧಿಸತ್ತ್ವನ ಬಳಿ ಸಾರಿ ಅವನನ್ನು ಪೂಜಿಸಿದರು. ಅದೇ ವೇಳೆಯಲ್ಲಿ ದೇವತೆಗಳೂ ಬಂದು ಅವನನ್ನು ಕೀರ್ತಿಸಿ ಪೂಜಿಸಿ ಹೋದರು.

ಅನಂತರ ಸುಮೇಧನು ಎದ್ದು ಹಿಮವಂತಕ್ಕೆ ಹಿಂದಿರುಗಿದನು.

## ದೀಪಂಕರನ ಅನಂತರದ ಬುದ್ಧರ ಕಾಲದಲ್ಲಿ

ದೀಪಂಕರ ಬುದ್ಧನು ತನ್ನ ಆಯುಸ್ಸು ಇರುವವರೆಗೆ ಇದ್ದು, ಲೋಕಕ್ಕೆ ಧರ್ಮವನ್ನು ಬೋಧಿಸಿ, ಅನಂತರ ತಾನು ಪರಿನಿರ್ವಾಣ ಪಡೆದನು. ಅವನು ಆದ ಒಂದು ಅಸಂಖ್ಯೇಯ ಕಾಲದ ಮೇಲೆ ಕೌಂಡನ್ಯನೆಂಬ ಬುದ್ಧನು ಆದನು. ಅವನ ಕಾಲದಲ್ಲಿ ಸುಮೇಧ ಬೋಧಿಸತ್ತ್ವನು ವಿಜಿತಾವಿನ್ ಎಂಬ ಚಕ್ರವರ್ತಿಯಾಗಿ, ಬುದ್ಧನ ಧರ್ಮವನ್ನು ಕೇಳಿದ ಬಳಿಕ ರಾಜ್ಯಪರಿತ್ಯಾಗಮಾಡಿ ಸಂನ್ಯಾಸಿಯಾಗಿ ಬ್ರಹ್ಮಲೋಕ ಪಡೆದನು.

ಕೌಂಡನ್ಯನಾದ ಒಂದು ಅಸಂಖ್ಯೇಯಕಾಲದ ಬಳಿಕ ಮಂಗಲ, ಸುಮನ, ರೇವತ ಮತ್ತು ಶೋಭಿತ ಎಂಬ ನಾಲ್ವರು ಬುದ್ಧರು ಒಂದೇ ಕಲ್ಪದಲ್ಲಿ ಆಗಿ ಹೋದರು. ಮಂಗಲ ಬುದ್ಧನ ಕಾಲದಲ್ಲಿ ಸುಮೇಧ ಬೋಧಿಸತ್ತ್ವನು ಸುರುಚಿಯೆಂಬ ಬ್ರಾಹ್ಮಣನಾಗಿದ್ದನು, ಸುಮನ ಬುದ್ಧನ ಕಾಲದಲ್ಲಿ ಅತುಲನೆಂಬ ನಾಗರಾಜನಾಗಿದ್ದನು, ರೇವತಬುದ್ಧನ ಕಾಲದಲ್ಲಿ ಅತಿದೇವನೆಂಬ ಬ್ರಾಹ್ಮಣನಾಗಿದ್ದನು, ಶೋಭಿತ ಬುದ್ಧನ ಕಾಲದಲ್ಲಿ ಅಜಿತನೆಂಬ ಬ್ರಾಹ್ಮಣನಾಗಿದ್ದನು.

ಈ ನಾಲ್ವರು ಬುದ್ಧರಾದ ಮೇಲೆ, ಕೆಲಕೆಲವು ಅಸಂಖ್ಯೇಯ ಕಾಲಗಳ ಅಂತರದಲ್ಲಿ ಅನುಮದರ್ಶಿ, ಪದ್ಮ, ನಾರದ, ಪದ್ಮೋತ್ತರ, ಸುಮೇಧ, ಸುಜಾತ, ಪ್ರಿಯದರ್ಶಿ, ಅರ್ಥದರ್ಶಿ, ಧರ್ಮದರ್ಶಿ, ಸಿದ್ಧಾರ್ಥ, ತಿಷ್ಯ, ಪುಷ್ಯ, ವಿಪಶ್ಯಿ, ಶಿಬಿ, ವಿಶ್ವಭೂ, ಕ್ರಕುಸಂಧ, ಕನಕಮುನಿ, ಕಶ್ಯಪ ಎಂಬ ಹದಿನೆಂಟು ಜನ ಬುದ್ಧರು ಆಗಿ ಹೋದರು. ಈ ಬುದ್ಧರು ಪ್ರತಿಯೊಬ್ಬರ ಕಾಲದಲ್ಲಿಯೂ ಸುಮೇಧ ಬೋಧಿಸತ್ತ್ವನು ಭೂಮಿಯಲ್ಲಿ ಅವತಾರಮಾಡಿದ್ದನು. ಮೂರು ಸಲ ಬ್ರಾಹ್ಮಣನಾಗಿ, ನಾಲ್ಕು ಸಲ ಋಷಿಯಾಗಿ, ನಾಲ್ಕು ಸಲ ರಾಜನಾಗಿ, ಎರಡು ಸಲ ಸಾಮಾನ್ಯಕ್ಷತ್ರಿಯನಾಗಿ, ಒಮ್ಮೆ ಚಕ್ರವರ್ತಿಯಾಗಿ ಜನಿಸಿದ್ದನು; ಒಂದು ಸಲ ಯಕ್ಷನಾಗಿಯೂ ಒಮ್ಮೆ ಸಿಂಹವಾಗಿಯೂ ಒಮ್ಮೆ ಸರ್ಪ ರಾಜನಾಗಿಯೂ ಜನಿಸಿದ್ದನು; ಒಂದು ಸಲ ದೇವೇಂದ್ರನಾಗಿಯೂ ಇದ್ದನು.

ಹೀಗೆ ದೀಪಂಕರ ಬುದ್ಧನ ಕಾಲದಿಂದ ಹಿಡಿದು ಕಶ್ಯಪ ಬುದ್ಧನ ಕಾಲದವರೆಗೆ, ಎಂದರೆ ನಾಲ್ಕು ಅಸಂಖ್ಯೇಯಗಳ ಮೇಲೆ ನೂರು ಸಾವಿರ ಕಲ್ಪ ಕಳೆಯುವವರೆಗೆ ಇಪ್ಪತ್ತುನಾಲ್ಕು ಬುದ್ಧರು ಆಗಿ ಹೋದರು. ಈ ಇಪ್ಪತ್ತುನಾಲ್ಕು ಬುದ್ಧರ ಕಾಲದಲ್ಲಿಯೂ ಸುಮೇಧ ಬೋಧಿಸತ್ತ್ವನು ಭೂಮಿಯಲ್ಲಿ ಅವತರಿಸಿ ಬರುತ್ತಿದ್ದನು. ಅಲ್ಲದೆ ಪ್ರತಿ ಬುದ್ಧನ ಸನ್ನಿಧಿಯಲ್ಲಿಯೂ ತಾನೂ ಬುದ್ಧನಾಗಬೇಕೆಂಬ ಸಂಕಲ್ಪವನ್ನು ನಿವೇದಿಸಿಕೊಳ್ಳುತ್ತಿದ್ದನು. ಪ್ರತಿ ಬುದ್ಧನೂ "ನೀನು ಮುಂದೆ ಗೌತಮನೆಂಬ ಬುದ್ಧನಾಗುವೆ" ಎಂದು ಅವನಿಗೆ ಧೈರ್ಯಕೊಡುತ್ತಿದ್ದನು.

ಸುಮೇಧ ಬೋಧಿಸತ್ತ್ವನು, ಮೇಲೆ ಹೇಳಿದಂತೆ, ಇಪ್ಪತ್ತು ನಾಲ್ಕು ಬುದ್ಧರ ಕಾಲದಲ್ಲಿ ಇಪ್ಪತ್ತುನಾಲ್ಕು ಸಲ ಜನ್ಮವೆತ್ತಿದುದು ಮಾತ್ರವಲ್ಲದೆ ಇನ್ನೂ ಎಣಿಕೆಗೆ ಸಿಕ್ಕದಷ್ಟು ಸಲ ಹುಟ್ಟಿ, ತಾನು ಸಂಕಲ್ಪ ಮಾಡಿಕೊಂಡಿದ್ದಂತೆ ಪಾರಮಿತೆಗಳನ್ನು ಪೂರೈಸಿದನು. ಆ ಪಾರಮಿಗಳನ್ನು ಪೂರೈಸುವುದಕ್ಕಾಗಿ ಅವನು ಮನುಷ್ಯನಾದನು, ಮೃಗವಾದನು, ಹಕ್ಕಿಯಾದನು, ಹಾವಾದನು, ದೇವತೆಯಾದನು. ಯಾವ ಯಾವ ಜನ್ಮ ತಾಳಿದರೂ ಕೈಕೊಂಡ ಪಾರಮಿಯನ್ನು ಕಡೆ ಮುಟ್ಟ ನಡಸಿದನು.

ಹೀಗೆ ಸುಮೇಧ ಬೋಧಿಸತ್ತ್ವನು ಬುದ್ಧನಾಗುವುದಕ್ಕೆ ಮುಂಚೆ ತಾಳಿದ ಅನೇಕ ಜನ್ಮಗಳಲ್ಲಿ ಅವನ ವಿಶ್ವಂತರ ಜನ್ಮವೇ ಕಡೆಯದು. ಈ ಜನ್ಮದಲ್ಲಿಯೇ ಅವನ ದಾನಪಾರಮಿತೆ ಅದರ ತುತ್ತ ತುದಿಯನ್ನು ಮುಟ್ಟಿದುದು.

## ವಿಶ್ವಂತರನ ಉತ್ತರ ಕಥೆ

### ತುಶಿತ ಸ್ವರ್ಗದಲ್ಲಿ

ಹೀಗೆ ಸುಮೇಧ ಬೋಧಿಸತ್ತ್ವನು ತಾನು ಬುದ್ಧನಾಗುವುದಕ್ಕೆ ಮುಂಚೆ ತಾಳಿದ ಅನೇಕ ಜನ್ಮಗಳಲ್ಲಿ ಕಡೆಯದಾದ ವಿಶ್ವಂತರ ಜನ್ಮದಲ್ಲಿ ದಾನಪಾರಮಿಯನ್ನು ಪೂರೈಸಿ ತುಶಿತಸ್ವರ್ಗದಲ್ಲಿ ಹುಟ್ಟಿದನು. ಅಲ್ಲಿ ಅವನು ತನ್ನ ಆಯುಸ್ಸು ಇರುವವರೆಗೆ ಇದ್ದನು.

ಅವನ ಆಯುಸ್ಸು ಮುಗಿಯುತ್ತಿರುವಾಗ ಲೋಕಪಾಲಕರಾದ ದೇವತೆಗಳೆಲ್ಲರೂ ಅವನ ಬಳಿಗೆ ಬಂದು, " ದೇವ, ನೀನು ಬಹು ಸಲ ಭೂಮಿಯಲ್ಲಿ ಅವತರಿಸಿ ಹತ್ತುಪಾರಮಿಗಳನ್ನೂ ನಡಸಿರುವೆ. ಇಂದ್ರ ನಾಗಬೇಕು, ಬ್ರಹ್ಮನಾಗಬೇಕು ಎಂಬ ಆಸೆಗಳಿಂದ ನೀನು ಆ ಪಾರಮಿಗಳನ್ನು ಪೂರೈಸಿದವನಲ್ಲ. ಆ ಪಾರಮಿಗಳಿಂದ ನಾನು ಬುದ್ಧನಾಗಿ ಲೋಕಕಲ್ಯಾಣವನ್ನುಂಟುಮಾಡುವೆನು — ಎಂದು ನೀನು ಪೂರೈಸಿದೆ. ನೀನು ಬುದ್ಧನಾಗುವ ಕಾಲ ಸಮೀಪಿಸುತ್ತಿದೆ, ದೇವ " ಎಂದರು.

ಆಗ ಬೋಧಿಸತ್ತ್ವನು ತಾನುಭೂಮಿಗೆ ಅವತರಿಸಿ ಬುದ್ಧನಾಗುವ ವೇಳೆಯಾಯಿತೆಂದು ತಿಳಿದು, ತನ್ನ ಜನ್ಮಭೂಮಿಯಾಗಲು ಮಧ್ಯದೇಶದ ಕಪಿಲವಸ್ತು ನಗರವೇ ತಕ್ಕುದೆಂದು ದಿವ್ಯದೃಷ್ಟಿಯಿಂದ ತಿಳಿದನು. ಅಲ್ಲಿಯ ಕ್ಷತ್ರಿಯನಾದ ಶುದ್ಧೋದನನು ತನಗೆ ತಂದೆಯಾಗಬೇಕೆಂದೂ, ಅವನ ಹೆಂಡತಿಯಾದ ಮಾಯಾದೇವಿಯು ತನಗೆ ತಾಯಿಯಾಗಬೇಕೆಂದೂ ಅವನು ವರಿಸಿದನು.

ಹೀಗೆ ತನ್ನ ಜನ್ಮಸ್ಥಲವನ್ನೂ ತಾಯಿತಂದೆಯರನ್ನೂ ವರಿಸಿ, ತಾನು ಭೂಮಿಗೆ ಹೋಗುವೆನೆಂದು ಹೇಳಿ ಆ ಲೋಕಪಾಲಕರನ್ನು ಬೀಳ್ಕೊಟ್ಟನು. ಹೀಗೆ ಅವರನ್ನು ಕಳಿಸಿಕೊಟ್ಟು, ಬೋಧಿಸತ್ತ್ವನು ತುಶಿತಸ್ವರ್ಗದ ನಂದನವನದಲ್ಲಿ ತಿರುಗಾಡುತ್ತಿರುವಾಗ ಅಲ್ಲಿಯ ದೇವತೆಗಳು ಅವನ ಬಳಿ ಸಾರಿ " ದೇವ, ನೀನು ಇಲ್ಲಿಂದ ಉತ್ತಮವಾದ ಗತಿಗೆ ಹೋಗು " ಎಂದು ಪ್ರೋತ್ಸಾಹಿಸಿದರು. ಆಗ ಬೋಧಿಸತ್ತ್ವನು ಭೂಮಿಗೆ ಅವತರಿಸಿದನು.

## ಬೋಧಿಸತ್ತ್ವನ ಅವತಾರ

ಆ ಕಾಲದಲ್ಲಿ ಕಪಿಲವಸ್ತುನಗರದವರು ಆಷಾಢಮಾಸದ ಉತ್ಸವವನ್ನು ಆಚರಿಸುತ್ತಿದ್ದರು. ಆಗ ಹುಣ್ಣಿಮೆಗೆ ಹಿಂದಿನ ಏಳು ದಿವಸಗಳ ಕಾಲ ಮಾಯಾದೇವಿ ತಾನೂ ಆ ಉತ್ಸವದಲ್ಲಿ ಭಾಗವಹಿಸಿದಳು. ಏಳನೆಯ ದಿವಸ ಅವಳು ಬೆಳಗಿನ ಜಾವದಲ್ಲಿಯೇ ಎದ್ದು, ಪರಿಮಳದ ಜಲದಲ್ಲಿ ಮಿಂದು, ನಾಲ್ಕುನೂರುಸಾವಿರ ನಾಣ್ಯಗಳನ್ನು ದಾನಮಾಡಿದಳು. ಸರ್ವ ಅಲಂಕಾರಗಳನ್ನೂ ಧರಿಸಿಕೊಂಡು, ಒಳ್ಳೆಯ ಊಟಮಾಡಿ, ನಡಸಬೇಕಾದ ವ್ರತಗಳನ್ನು ನಡಸಿ, ತನ್ನ ಅಂತಃಪುರದಲ್ಲಿ ಹೋಗಿ ಮಲಗಿದಳು. ಮಲಗಿದವಳು ಒಂದು ಸ್ವಪ್ನ ಕಂಡಳು.

ನಾಲ್ವರು ಲೋಕಪಾಲಕರು ಅವಳನ್ನು ಮಂಚಸಹಿತವಾಗಿ ಎತ್ತಿಕೊಂಡು ಹಿಮಾಲಯಪರ್ವತಕ್ಕೆ ಒಯ್ದು, ಅಲ್ಲಿಯ ಅರುವತ್ತು ಯೋಜನದಗಲದ ಮನೋಶಿಲಾತಲದಲ್ಲಿದ್ದ ಏಳುಯೋಜನ ಎತ್ತರದ ಶಾಲಾವೃಕ್ಷದ ಕೆಳಗೆ ಇಳಿಸಿದರು. ಇಳಿಸಿ, ಒಂದು ಪಕ್ಕಕ್ಕೆ ನಿಂತರು. ಆಗ ಆ ಲೋಕಪಾಲಕರ ದೇವಿಯರು ಮುಂದೆ ಬಂದು ಆಕೆಯನ್ನು ಅನವತಪ್ತವೆಂಬ ಸರಸ್ಸಿಗೆ ಒಯ್ದು ಸ್ನಾನಮಾಡಿಸಿದರು, ದಿವ್ಯ ವಸ್ತ್ರಗಳನ್ನು ಉಡಿಸಿದರು, ಗಂಧಮಾಲಾದಿಗಳಿಂದ ಸಿಂಗರಿಸಿದರು, ದಿವ್ಯವಾದ ಹೂಗಳನ್ನು ಮುಡಿಸಿದರು. ಅನಂತರ, ಅಲ್ಲಿಗೆ ಸ್ವಲ್ಪದೂರದಲ್ಲಿದ್ದ ರಜತಪರ್ವತದೊಳಗಿನ ಕನಕವಿಮಾನದಲ್ಲಿ ಅವಳನ್ನು ಒಂದು ಮಂಚದ ಮೇಲೆ ಉತ್ತರದಿಕ್ಕಿಗೆ ತಲೆಮಾಡಿ ಮಲಗಿಸಿದರು. ಆಗ ಬೋಧಿಸತ್ತ್ವನು ಸೊಗಸಾದ ಬಿಳಿಯ ಆನೆಯಾಗಿ ಬಳಿಯ ಸುವರ್ಣಗಿರಿಯ ಮೇಲೆ ಓಡಾಡುತ್ತಿದ್ದನು. ಅವನು ಅಲ್ಲಿಂದ ಇಳಿದು ರಜತಪರ್ವತವನ್ನು ಏರಿ ಉತ್ತರದಿಕ್ಕಿನಿಂದ ಮಾಯಾದೇವಿಯ ಬಳಿಗೆ ಬಂದನು. ಸೊಂಡಿಲಿನಲ್ಲಿ ಒಂದು ಬಿಳಿಯ ಪದ್ಮವನ್ನು ಹಿಡಿದು ಘೀಂಕರಿಸುತ್ತಾ ಕನಕವಿಮಾನಕ್ಕೆ ಬಂದು, ಆ ತಾಯಿಯ ಮಂಚವನ್ನು ಮೂರು ಸಲ ಪ್ರದಕ್ಷಿಣೆಮಾಡಿ, ಅವಳ ಬಲಗಡೆಯನ್ನು ಮುಟ್ಟಿ ಹೊಟ್ಟೆಯೊಳಕ್ಕೆ ಹೋದಂತೆ ಕಂಡಿತು. ಹೀಗೆ ಉತ್ತರಾಷಾಢಾನಕ್ಷತ್ರದಲ್ಲಿ ಬೋಧಿಸತ್ತ್ವನು ಮಾಯಾದೇವಿಯ ಗರ್ಭದಲ್ಲಿ ಅವತರಿಸಿದನು.

ಮಾಯಾದೇವಿ ಎಚ್ಚೆತ್ತು, ತನ್ನ ಸ್ವಪ್ನವನ್ನು ರಾಜನಿಗೆ ತಿಳಿಸಿದಳು. ಅವನು ಬ್ರಾಹ್ಮಣರನ್ನು ಕರೆಸಿ ಅದರ ಅರ್ಥ ಕೇಳಿದನು. ಅವರು "ಮಹಾರಾಜ, ನಿನ್ನ ಸತಿಯ ಗರ್ಭಕ್ಕೆ ಒಬ್ಬ ಮಹಾಪುರುಷನ ಅವತಾರವಾಗಿದೆ. ಆತನು ಮನೆಯಲ್ಲಿಯೇ ನಿಂತರೆ ಚಕ್ರವರ್ತಿಯಾಗುವನು. ಆತನು ಮನೆಬಿಟ್ಟು ಹೋಗಿ ಸಂನ್ಯಾಸಿಯಾದರೆ ಲೋಕಗುರುವಾಗುವ ಬುದ್ಧನಾಗುವನು" ಎಂದರು.

ಬೋಧಿಸತ್ತ್ವನು ಭೂಮಿಗೆ ತುಶಿತಸ್ವರ್ಗದಿಂದ ಅವತರಿಸಿದಾಗ ಅಪರಿಮಿತವಾದ ಪ್ರಭೆ ಕಾಣಿಸಿಕೊಂಡಿತು. ಕುರುಡರು ಕಂಡರು. ಕಿವುಡರು ಕೇಳಿದರು. ಮೂಗರು ಮಾತನಾಡಿದರು. ಕುಬ್ಜರು ನೇರವಾದರು. ಕುಂಟರು ನಡೆದರು. ಸೆರೆಯಲ್ಲಿದ್ದವರಿಗೆಲ್ಲಾ ಬಿಡುಗಡೆಯಾಯಿತು. ನರಕಗಳಲ್ಲಿ ಬೆಂಕಿ ಆರಿತು. ಪ್ರೇತಗಳ ಹಸಿವು ದಾಹ ಅಡಗಿತು. ಮೃಗಗಳ ಭಯ ನಿಂತಿತು. ರೋಗಿಗಳು ಆರೋಗ್ಯ ಪಡೆದರು. ಜನರೆಲ್ಲಾ ದಯಾವಂತರಾದರು. ಕುದುರೆಗಳು ಕೆನೆದುವು, ಆನೆಗಳು ಘೀಂಕರಿಸಿದುವು. ಸರ್ವವಾದ್ಯಗಳೂ ತಮ್ಮಷ್ಟಕ್ಕೆ ತಾವೇ ದನಿಕೊಟ್ಟುವು. ಬಳೆ ಮುಂತಾದ ಆಭರಣಗಳು ತಮ್ಮಷ್ಟಕ್ಕೆ ತಾವೇ ರವಕೊಟ್ಟುವು. ಆಕಾಶ ನಿರ್ಮಲವಾಯಿತು. ಮೆಲುಮೆಲನೆ ತಂಗಾಳಿ ಬೀಸಿತು. ಅಕಾಲದ ಮಳೆ ಹನಿಯಿತು. ನೆಲದಿಂದ ನೀರು ಉಕ್ಕಿ ಹರಿಯಿತು. ಹಕ್ಕಿಗಳು ಹಾರುವುದನ್ನು ಬಿಟ್ಟುವು. ನದಿಗಳು ಹರಿಯುವುದನ್ನು ನಿಲ್ಲಿಸಿದುವು. ಸಮುದ್ರವೆಲ್ಲ ಸಿಹಿನೀರಾಯಿತು. ಸಮುದ್ರದ ತುಂಬ ಬಣ್ಣ ಬಣ್ಣದ ತಾವರೆ ತಲೆಯೆತ್ತಿಕೊಂಡಿತು. ನೀರಿನ ತುಂಬ, ನೆಲದ ತುಂಬ ವಿವಿಧವಾದ ಹೂ ಅರಳಿತು. ಪ್ರತಿ ಮರದ ಅಡಿಯಿಂದ ಮುಡಿವರೆಗೆ ಅನುರೂಪವಾದ ಹೂ ಮುಚ್ಚಿಕೊಂಡಿತು. ದಂಡಪದ್ಮಗಳೆಂಬವು ನೆಲದ ಶಿಲೆಗಳನ್ನು ಭೇದಿಸಿಕೊಂಡು ಏಳೇಳಾಗಿ ಒಟ್ಟಿಗೆ ಹುಟ್ಟಿಕೊಂಡವು. ಅವಲಂಬಕಪದ್ಮಗಳೆಂಬವು ಆಕಾಶದಲ್ಲಿ ಹುಟ್ಟಿಕೊಂಡು ಎಲ್ಲೆಲ್ಲೂ ಹೂ ಮಳೆ ಕರೆದವು. ಗಗನದಲ್ಲಿ ದಿವ್ಯ ತೂರ್ಯಗಳಾದುವು. ಬೋಧಿಸತ್ತ್ವನು ಭೂಮಿಗೆ ಅವತರಿಸಿದಾಗ ಇಷ್ಟೆಲ್ಲಾ ಆಯಿತು.

## ಬೋಧಿಸತ್ತ್ವನ ಜನನ

ಮಾಯಾದೇವಿ ಬೋಧಿಸತ್ತ್ವನನ್ನು ಹತ್ತು ತಿಂಗಳ ಕಾಲ ಗರ್ಭದಲ್ಲಿ ಹೊತ್ತಳು. ಅನಂತರ, ತನ್ನ ತವರುಮನೆಯಾದ ದೇವದಹಕ್ಕೆ ಹೋಗಲು ಬಯಸಿ ಶುದ್ಧೋದನನ ಅಪ್ಪಣೆ ಬೇಡಿದಳು. ಶುದ್ಧೋದನನು ಕಪಿಲವಸ್ತುವಿನಿಂದ ದೇವದಹದ ವರೆಗಿನ ಮಾರ್ಗವನ್ನು ಅಲಂಕಾರಗೊಳಿಸಿ ಅವಳನ್ನು ಮಹಾಪರಿವಾರದೊಡನೆ ಕಳಿಸಿಕೊಟ್ಟನು.

ಮಧ್ಯಮಾರ್ಗದಲ್ಲಿ ಲುಂಬಿನಿಯೆಂಬ ವನ. ಅದು ಕಪಿಲವಸ್ತು ದೇವದಹವೆರಡಕ್ಕೂ ಸೇರಿದುದು. ಆ ಋತುವಿಗೆ ಉಚಿತವಾದ ಹೂಗಳಿಂದ ಶೋಭಿಸುತ್ತಿದ್ದ ಆ ವನದಲ್ಲಿ ಕ್ರೀಡಿಸಬೇಕೆಂದು ಮಾಯಾದೇವಿ ಬಯಸಿ ಅಲ್ಲಿಗೆ ತನ್ನ ಪರಿವಾರದೊಡನೆ ಹೋದಳು. ಅಲ್ಲಿಯೇ, ಮಾಯಾದೇವಿ ಒಂದು ಶಾಲವೃಕ್ಷದ ಕೆಳಗೆ ನಿಂತಿರುವಾಗಲೇ ಬೋಧಿಸತ್ತ್ವನನ್ನು ಪ್ರಸವಿಸಿದಳು.

ಆಗ ಶುದ್ಧಚಿತ್ತರಾದ ನಾಲ್ವರು ಮಹಾಬ್ರಹ್ಮರು ಬಂದು, ತಾವು ತಂದ ಕಾಂಚನಜಾಲದಲ್ಲಿ ಮಗುವನ್ನು ಪಡೆದರು. ಅದೇ ಕ್ಷಣದಲ್ಲಿ ಆಕಾಶದಿಂದ ಎರಡು ಉದಕಧಾರೆ ಇಳಿದು ಬೋಧಿಸತ್ತ್ವನನ್ನೂ ಅವನ ತಾಯನ್ನೂ ತೊಳೆದು ತಂಪುಮಾಡಿದುವು.

ನಾಲ್ವರು ಮಹಾಬ್ರಹ್ಮರು ಹಿಡಿದ ಕಾಂಚನಜಾಲದಿಂದ ಬೋಧಿಸತ್ತ್ವನನ್ನು ನಾಲ್ವರು ರಾಜರು ಮೃದುವಾದ ಕೃಷ್ಣಾಜಿನಗಳ ಮೇಲೆ ಸ್ವೀಕರಿಸಿದರು. ಅನಂತರ ಜನರು ನಯವಾದ ಬಟ್ಟೆಯ ಮೇಲೆ ಅವನನ್ನು ಎತ್ತಿಕೊಂಡರು. ಅವರ ಕೈದಾಟಿದ ಮೇಲೆ, ಬೋಧಿಸತ್ತ್ವನು ಕಾಲೂರಿ ನೆಲದಲ್ಲಿ ನಿಂತು ಪೂರ್ವದ ಕಡೆಗೆ ನೋಡಿದನು. ನಿಂತಂತೆಯೇ ಹತ್ತು ದಿಕ್ಕುಗಳಿಗೂ ದೃಷ್ಟಿ ಬೀರಿ, ಏಳು ಹೆಜ್ಜೆ ನಡೆದನು. ಆಗ ಮಹಾಬ್ರಹ್ಮನು ಅವನಿಗೆ ಬೆಳ್ಗೊಡೆ ಹಿಡಿದನು, ಸುಯಾಮದೇವತೆಯು ಚಾಮರವಿಕ್ಕಿದನು, ಇತರ ದೇವತೆಗಳು ಇತರ ರಾಜಚಿಹ್ನೆಗಳನ್ನು ಹಿಡಿದರು. ಏಳನೆಯ ಹೆಜ್ಜೆಯಿಟ್ಟಾದ ಮೇಲೆ ಬೋಧಿಸತ್ತ್ವನು "ನನಗೆ ಇದೇ ಕಡೆಯ ಜನ್ಮ. ಈ ಜನ್ಮದಲ್ಲಿ ನಾನು ಬುದ್ಧನಾಗುವೆನು" ಎಂದನು.

ಬೋಧಿಸತ್ತ್ವನು ಮೂರು ಜನ್ಮಗಳಲ್ಲಿ ಮಾತ್ರ ತನ್ನ ತಾಯ ಗರ್ಭದಿಂದ ಬಂದೊಡನೆಯೇ ಮಾತನಾಡಿದನು; ಆತನು ಮಹೌಷಧ ಕುಮಾರನಾದಾಗ ಒಮ್ಮೆ, ವಿಶ್ವಂತರ ಜನ್ಮದಲ್ಲಿ ಇನ್ನೊಮ್ಮೆ, ಈ ಜನ್ಮದಲ್ಲಿ ಕಡೆಗೊಮ್ಮೆ.

ಬೋಧಿಸತ್ತ್ವನು ಮಹೌಷಧಕುಮಾರನಾಗಿ ಜನ್ಮ ತಾಳುವಾಗ ದೇವರಾಜನಾದ ಶಕ್ರನು ಬಂದು ಅವನ ಕೈಯಲ್ಲಿ ಒಂದು ಚಂದನ ಚೂರನ್ನು ಇರಿಸಿಹೋದನು. ಅವನು ಅದನ್ನು ತನ್ನ ಕಿರುಮುಷ್ಟಿಯಲ್ಲಿ ಹಿಡಿದಿದ್ದುದನ್ನು ಕಂಡು ಅವನ ತಾಯಿ 'ಇದೇನು, ಕಂದ?' ಎಂದಳು. ಅದಕ್ಕೆ ಕುಮಾರನು 'ಇದು ಔಷಧ, ಅಮ್ಮ' ಎಂದನು. ಅದರಿಂದ ಅವನಿಗೆ ಔಷಧಕುಮಾರನೆಂದೇ ಹೆಸರಾಯಿತು.

ಪುನಃ, ಅವನ ವಿಶ್ವಂತರ ಜನ್ಮದಲ್ಲಿ, ಹುಟ್ಟಿದೊಡನೆಯೆ ಬಲಗೈಯನ್ನು ನೀಡಿ "ಅಮ್ಮ, ದಾನಕೊಡಲು ಏನಾದರೂ ಉಂಟೆ?" ಎಂದು ತಾಯಿಯನ್ನು ಕೇಳಿದನು. ಅವಳು ಸಾವಿರದ ಚೀಲವನ್ನು ಅವನ ಕೈಯಲ್ಲಿಟ್ಟಳು. ಅದನ್ನು ಅವನು ದಾನಕೊಟ್ಟನು.

ಕಡೆಯದಾಗಿ, ಈ ಜನ್ಮದಲ್ಲಿ ಕೂಡ ಬೋಧಿಸತ್ತ್ವನು ಹುಟ್ಟಿದೊಡನೆಯೇ ಮಾತನಾಡಿದನು.

ಬೋಧಿಸತ್ತ್ವನು ಭೂಮಿಗೆ ಅವತಾರ ಮಾಡಿದಾಗ ಕಾಣಿಸಿಕೊಂಡ ಶುಭಚಿಹ್ನೆಗಳೆಲ್ಲವೂ ಅವನು ಜನಿಸಿದಾಗಲೂ ಕಾಣಿಸಿಕೊಂಡವು.

ಹೀಗೆ ಲುಂಬಿನಿ ವನದಲ್ಲಿ ಬೋಧಿಸತ್ತ್ವನು ಜನಿಸಿದ ಅದೇ ಕ್ಷಣದಲ್ಲಿಯೇ ರಾಹುಲಮಾತೆಯೂ ಛನ್ನನೂ ಕಾಲುದಾಯಿಯೂ ಕಂಥಕನೂ, ಮಹಾಬೋಧಿವೃಕ್ಷವೂ ನಾಲ್ಕು ನಿಧಿಕುಂಭಗಳೂ ಹುಟ್ಟಿಕೊಂಡವು. ಈ ಏಳನ್ನೂ 'ಸಹಜಾತಗಳು' ಎನ್ನುತ್ತಾರೆ. ಇವುಗಳಲ್ಲಿ ರಾಹುಲಮಾತೆಯು ಮುಂದೆ ಬೋಧಿಸತ್ತ್ವನ ಹೆಂಡತಿಯಾದಳು, ಛನ್ನನು ಅವನ ಸಾರಥಿಯಾದನು, ಕಾಲುದಾಯಿಯು ಅವನ ಶಿಷ್ಯನಾದನು, ಕಂಥಕನು ಅವನ ಕುದುರೆಯಾಯಿತು.

## ಗೌತಮ ಬುದ್ಧ

ಬೋಧಿಸತ್ತ್ವನನ್ನು ಕಪಿಲವಸ್ತುವಿಗೆ ಕರೆದೊಯ್ದರು. ಆಗ, ಕಾಳದೇವಲನೆಂಬ ಋಷಿಯು ಹಿಮವಂತದಿಂದ ಕಪಿಲವಸ್ತುವಿಗೆ ಬಂದು, ಬೋಧಿಸತ್ತ್ವನ ಮಹಾಪುರುಷಲಕ್ಷಣಗಳನ್ನು ಗಮನಿಸಿ, "ರೋಗ ಮುಪ್ಪು ಸಾವುಗಳು ಈತನ ಕಣ್ಣಿಗೆ ಗೋಚರವಾದಾಗ, ಈತನು ಮನೆಯನ್ನು ಬಿಟ್ಟುಹೋಗಿ ಸಂನ್ಯಾಸಿಯಾಗಿ ಬುದ್ಧನಾಗುವನು" ಎಂದು ಭವಿಷ್ಯ ನುಡಿದನು. ಮಗನ ಕಣ್ಣಿಗೆ ರೋಗ ಮುಪ್ಪು ಸಾವುಗಳು ಕಾಣದಿರುವಂತೆ ಶುದ್ಧೋದನನು ಏನೇನೋ ಏರ್ಪಾಟುಮಾಡಿದನು. ಆದರೂ ಬೋಧಿಸತ್ತ್ವನಿಗೆ ಲೋಕದಲ್ಲಿದ್ದ ದುಃಖಗಳ ಪರಿಚಯವಾಯಿತು. ದುಃಖವನ್ನು ನೀಗುವ ಮಾರ್ಗವನ್ನು ತಿಳಿಯಬೇಕೆಂಬ ದೃಢನಿಶ್ಚಯದಿಂದ ಬೋಧಿಸತ್ತ್ವನು ತನ್ನ ಹೆಂಡತಿಯನ್ನೂ ಮಗುವನ್ನೂ ತಂದೆಯನ್ನೂ ಬಿಟ್ಟು ಕಾಡಿಗೆ ಹೋದನು. ಅವನ ತಾಯಿಯಾದ ಮಾಯಾದೇವಿಯಂತೂ ಅವನು ಹುಟ್ಟಿದ ಏಳನೆಯ ದಿವಸವೆ ಕಾಲವಾಗಿದ್ದಳು.

ಹೀಗೆ ಅವನು ಮನೆಬಿಟ್ಟು ಹೋದಾಗ ಅವನಿಗೆ ಇಪ್ಪತ್ತೊಂಬತ್ತು ವರ್ಷ ವಯಸ್ಸು. ಅಂದಿನಿಂದ ಆರುವರ್ಷಗಳ ಕಾಲ, ಬೋಧಿಸತ್ತ್ವನು ದುಃಖವನ್ನು ನಿರ್ಮೂಲಮಾಡುವ ಮಾರ್ಗವನ್ನು ಹುಡುಕುತ್ತಾ ತಪಸ್ಸುಮಾಡಿದನು. ಆರುವರುಷದ ಅಂತ್ಯದಲ್ಲಿ ದುಃಖವನ್ನು ಉಪಶಮನಮಾಡುವ ಬೋಧಿಯೆಂಬ ದಿವ್ಯಜ್ಞಾನ ಅವನಿಗೆ ಪ್ರಾಪ್ತವಾಯಿತು. ಬೋಧಿಸತ್ತ್ವನು ಬುದ್ಧನಾದನು. ಆಗ ಅವನಿಗೆ ಮೂವತ್ತೈದು ವರ್ಷ ವಯಸ್ಸು.

ಅಲ್ಲಿಂದ ಮುಂದೆ ನಲುವತ್ತೈದು ವರ್ಷಗಳ ಕಾಲ ಬುದ್ಧನು ಮಧ್ಯಹಿಂದೂದೇಶದಲ್ಲೆಲ್ಲಾ ಸಂಚಾರಮಾಡಿ, ತಾನು ಕಂಡುಕೊಂಡ ಧರ್ಮವನ್ನು ಲೋಕಕ್ಕೆ ತಿಳಿಸಿ ತಿದ್ದಿದನು. ಕಡೆಗೆ, ತನ್ನ ಎಂಬತ್ತನೆಯ ವರ್ಷದಲ್ಲಿ ಪರಿನಿರ್ವಾಣಪಡೆದನು.

ಹೀಗೆ, ಸುಮೇಧ ಬ್ರಾಹ್ಮಣನು ತಾನು ಬುದ್ಧನಾಗಬೇಕೆಂಬ ಸಂಕಲ್ಪವನ್ನು ದೀಪಂಕರ ಬುದ್ಧನ ಸನ್ನಿಧಿಯಲ್ಲಿ ಮಾಡಿದನು. ಬುದ್ಧ

ನಾಗುವುದಕ್ಕೆ ಅರ್ಹತೆಯನ್ನು ಕೊಡುವ ದಶಪಾರಮಿತೆಗಳನ್ನೂ ಪೂರೈಸುವುದಕ್ಕಾಗಿ ಅನೇಕ ಜನ್ಮವೆತ್ತಿದನು. ಪ್ರತಿಜನ್ಮದಲ್ಲಿಯೂ ಪಾರಮಿತೆಗಳನ್ನು ಪೂರೈಸಿದನು. ವಿಶ್ವಂತರನಾಗಿ ಜನ್ಮವೆತ್ತಿ ಬಂದನು. ಧಾನ ಪಾರಮಿತೆಯ ಶಿಖರವನ್ನು ಮುಟ್ಟಿದನು. ಬುದ್ಧನಾಗುವುದಕ್ಕೆ ಮೊದಲು ಬೋಧಿಸತ್ತ್ವನು ಎತ್ತಿದ ಅನೇಕ ಜನ್ಮಗಳಲ್ಲಿ ಈ ವಿಶ್ವಂತರಜನ್ಮವೆ ಕಡೆಯ ಜನ್ಮ. ವಿಶ್ವಂತರನು ತನ್ನ ಆಯುಸ್ಸು ಮುಗಿದಬಳಿಕ ತುಶಿತ ಸ್ವರ್ಗದಲ್ಲಿ ಹುಟ್ಟಿದನು. ಅಲ್ಲಿನ ಆಯುಸ್ಸು ಮುಗಿಯಲು ಭೂಮಿಗೆ ಅವತರಿಸಿ ಮಾಯಾದೇವಿಯ ಮಗನಾದನು, ಪಾರಮಿತೆಗಳನ್ನು ಪೂರೈಸಿದುದರ ಫಲವಾಗಿ ಬುದ್ಧನಾದನು.

## ವಿಶ್ವಂತರನ ಬಳಗ

ವಿಶ್ವಂತರನೇ ಮುಂದೆ ಬುದ್ಧನಾದನು.
ಸಂಜಯರಾಜನು ಬುದ್ಧನ ತಂದೆಯಾದ ಶುದ್ಧೋದನನಾದನು.
ಸ್ಪೃಶತೀದೇವಿ ಬುದ್ಧನ ತಾಯಿ ಮಾಯಾದೇವಿಯಾದಳು.
ಮಾದ್ರೀದೇವಿ ಬುದ್ಧನ ಹೆಂಡತಿಯಾದ ರಾಹುಲಮಾತೆಯಾದಳು.
ಜಾಲಿಕುಮಾರನು ಬುದ್ಧನ ಮಗನಾದ ರಾಹುಲನಾದನು.
ಕೃಷ್ಣಾಜಿನೆಯು ಬುದ್ಧನ ಶಿಷ್ಯೆಯಾದ ಉತ್ಪಲವರ್ಣೆಯಾದಳು.
ಶಕ್ರನು ಬುದ್ಧನ ಶಿಷ್ಯನಾದ ಅನುರುದ್ಧನೆಂಬವನಾದನು.
ಅಚ್ಯುತಋಷಿ ಬುದ್ಧನ ಮುಖ್ಯಶಿಷ್ಯನಾದ ಸಾರಿಪುತ್ರನಾದನು.
ಚೇತಪುತ್ರನು ಬುದ್ಧನ ಸಾರಥಿಯಾದ ಛನ್ನನಾದನು.

ಜೂಜಕ ಬ್ರಾಹ್ಮಣನು ಬುದ್ಧನ ಮೇಲೆ ದ್ವೇಷಕಟ್ಟಿ ಅವನನ್ನು ಕೊಲ್ಲಲು ಯತ್ನಿಸಿದ ದೇವದತ್ತನಾದನು.

ಅಮಿತ್ರತಾಪನೆಯು ಬುದ್ಧನನ್ನು ದ್ವೇಷಿಸುತ್ತಿದ್ದವರ ಕಡೆ ಸೇರಿಕೊಂಡು ಬುದ್ಧನ ಹೆಸರನ್ನು ಕೆಡಿಸಲು ಯತ್ನಿಸಿದ ಚಿಂಚಾ ಎಂಬ ಹೆಂಗುಸಾದಳು.

ವಿಶ್ವಂತರನ ಕಾಲದವರಲ್ಲಿ ಉಳಿದ ಜನ ಬುದ್ಧನ ಕಾಲದಲ್ಲಿ ಅವನ ಶಿಷ್ಯರಾದರು.

# ವಿ ವ ರ


| ಜಾತಕಗಳ ಹೆಸರು. | | | | ಪುಟ |
|---|---|---|---|---|
| ಪಂಚಾಯುಧ | ... | ... | ... | ೧ |
| ಶ್ರೀ ವಾಣಿಜ | ... | ... | ... | ೫ |
| ಕ್ಷುಲ್ಲಕಶ್ರೇಷ್ಠಿ | ... | ... | ... | ೯ |
| ನಂದಿ ವಿಶಾಲ | ... | ... | ... | ೧೩ |
| ಕೃಷ್ಣ | ... | ... | ... | ೧೬ |
| ನಾಮಸಿದ್ಧಿ | ... | ... | ... | ೧೯ |
| ಉಭಯತೋಭ್ರಷ್ಟ | ... | ... | ... | ೨೨ |
| ಮಹಾಸಾರ | ... | . | . . | ೨೪ |
| ಕುರುಧರ್ಮ | ... | ... | ... | ೩೦ |
| ಗ್ರಾಮಣಿ ಚಂಡ | ... | ... | ... | ೪೬ |
| ಅಲೀನ ಚಿತ್ತ | ... | ... | ... | ೬೨ |
| ವೈದರ್ಭ | ... | ... | ... | ೬೮ |
| ಸುಪಾರಗ | ... | ... | ... | ೭೩ |
| ದಧಿವಾಹನ | ... | ... | ... | ೮೦ |
| ಸರ್ವದಂಷ್ಟ್ರ | ... | ... | ... | ೮೭ |
| ವರ್ಧಕಿ ಸೂಕರ | ... | ... | ... | ೯೧ |
| ಆಭ್ಯಂತರ | ... | .... | ... | ೯೭ |
| ಧರ್ಮಧ್ವಜ | ... | ... | ... | ೧೦೪ |

# ಪಂಚಾಯುಧ

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ ಬೋಧಿಸತ್ತ್ವನು ಆ ರಾಜನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಜನ್ಮ ತಾಳಿದನು.

ಅವನಿಗೆ ಹೆಸರಿಡುವ ದಿವಸ ಎಂಟುನೂರು ಬ್ರಾಹ್ಮಣರಿಗೆ ಬೇಕಾದುದನ್ನೆಲ್ಲಾ ಕೊಟ್ಟು ತೃಪ್ತಿಪಡಿಸಿ, ಅವನ ಲಕ್ಷಣಗಳನ್ನು ಕುರಿತು ಕೇಳಿದರು. ಲಕ್ಷಣಗಳ ಅರ್ಥವನ್ನು ಬಲ್ಲ ಆ ಬ್ರಾಹ್ಮಣರು ಅವನ ಲಕ್ಷಣ ಸಂಪತ್ತಿಯನ್ನು ಕಂಡು, "ಮಹಾರಾಜ, ಈ ಕುಮಾರನು ಪುಣ್ಯಸಂಪನ್ನ. ನಿನ್ನ ಅನಂತರ ರಾಜ್ಯವನ್ನು ಪಡೆಯುವನು. ಪಂಚಾಯುಧ ಕರ್ಮವನ್ನು ತಿಳಿದು, ತೋರಿಸಿ, ಜಂಬೂದ್ವೀಪದಲ್ಲಿ ಅಗ್ರಪುರುಷನಾಗುವನು" ಎಂದರು. ಆ ಬ್ರಾಹ್ಮಣರ ಮಾತನ್ನು ಕೇಳಿ, ಮಗುವಿಗೆ ಹೆಸರಿಡುವವರು ಅವನಿಗೆ ಪಂಚಾಯುಧಕುಮಾರನೆಂದು ಹೆಸರಿಟ್ಟರು.

ಅವನಿಗೆ ಬುದ್ಧಿಬಂದು ಹದಿನಾರು ವಯಸ್ಸಾಗಲು, ರಾಜನು ಅವನನ್ನು ಕರೆದು, "ಅಪ್ಪ, ವಿದ್ಯೆ ಕಲಿ" ಎಂದನು.

ಕುಮಾರನು "ಯಾರ ಬಳಿ ಕಲಿಯಲಿ, ದೇವ?" ಎಂದು ಕೇಳಿದನು.

"ಹೋಗಪ್ಪ, ಗಂಧಾರ ರಾಷ್ಟ್ರದ ತಕ್ಷಶಿಲಾ ನಗರದಲ್ಲಿ ಇರುವ ಆಚಾರ್ಯನ ಬಳಿ ಕಲಿ. ಅವನ ಹೆಸರು ದಿಕ್ಕುದಿಕ್ಕಿಗೂ ಹರಡಿದೆ. ಇದನ್ನು ಆಚಾರ್ಯನಿಗೆ ಭಾಗವಾಗಿ ಕೊಡು" ಎಂದು ತಂದೆಯು ಒಂದು ಸಾವಿರವನ್ನು ಕೊಟ್ಟು ಅವನನ್ನು ಕಳಿಸಿದನು.

ಅವನು ಅಲ್ಲಿಗೆ ಹೋಗಿ, ವಿದ್ಯೆ ಕಲಿತು, ಆಚಾರ್ಯನು ಕೊಟ್ಟ ಪಂಚಾಯುಧಗಳನ್ನು ಹಿಡಿದು, ಆಚಾರ್ಯನಿಗೆ ವಂದಿಸಿ, ತಕ್ಷಶಿಲಾನಗರದಿಂದ ಹೊರಟು, ಸನ್ನದ್ಧಪಂಚಾಯುಧನಾಗಿ ವಾರಾಣಸಿ ಮಾರ್ಗದಲ್ಲಿ ನಡೆದನು.

ಅವನಿಗೆ ದಾರಿಯ ನಡುವೆ ಶ್ಲೇಷರೋಮನೆಂಬ ಯಕ್ಷನು ಆಳುತ್ತಿದ್ದ ಒಂದು ಅಡವಿ ಸಿಕ್ಕಿತು. ಆಗ ಅಡವಿಯ ಮುಖದಲ್ಲಿ ಜನರು

ಅವನನ್ನು ನೋಡಿ, "ಅಯ್ಯಾ ಹುಡುಗ, ಈ ಅಡವಿಯೊಳಗೆ ಹೋಗ ಬೇಡ. ಇಲ್ಲಿ ಶ್ಲೇಷರೋಮನೆಂಬ ಯಕ್ಷನಿದ್ದಾನೆ. ಅವನು ಕಂಡಕಂಡ ಮನುಷ್ಯರನ್ನೆಲ್ಲಾ ಕೊಲ್ಲುತ್ತಾನೆ" ಎಂದು ತಡೆದರು. ಆದರೆ ಬೋಧಿ ಸತ್ತ್ವನು ತನ್ನಲ್ಲಿಯೇ ತರ್ಕಮಾಡಿಕೊಂಡು, ಹೆದರಿಕೆಯಿಲ್ಲದ ಕೇಸರಿ ಸಿಂಹದಂತೆ ಆ ಅಡವಿಯನ್ನು ಹೊಕ್ಕೇಹೊಕ್ಕನು.

ಆ ಅಡವಿಯ ನಡುವಿಗೆ ಬರಲು, ಅಲ್ಲಿಯ ಯಕ್ಷನು ತಾಳೆಯ ಮರ ದಷ್ಟು ಎತ್ತರ ಆಗಿ ಬೋಧಿಸತ್ತ್ವನಿಗೆ ಕಾಣಿಸಿಕೊಂಡನು. ಅವನ ತಲೆ ಮನೆಯಷ್ಟು ಗಾತ್ರವಾಗಿತ್ತು. ಕಣ್ಣು ಪಾತ್ರೆಯಷ್ಟು ಅಗಲ. ಗೆಣಸಿ ನಂಥ ಎರಡು ದಾಡೆ. ಗಿಡುಗನ ಮೂಗು. ಹೊಟ್ಟೆಯ ಮೇಲೆಲ್ಲಾ ಮಚ್ಚೆ. ಕೈಕಾಲು ಎಲ್ಲಾ ನೀಲಿ.

ಅವನು ಬೋಧಿಸತ್ತ್ವನನ್ನು ಕುರಿತು "ಎಲ್ಲಿಗೆ ಹೋಗುವೆ? ನಿಲ್ಲು. ನೀನು ನನ್ನ ಊಟ" ಎಂದನು.

ಆಗ ಬೋಧಿಸತ್ತ್ವನು ಅವನನ್ನು ಕುರಿತು "ಯಕ್ಷ, ನಾನು ವಿಚಾರ ಮಾಡಿಯೇ ಇಲ್ಲಿ ಪ್ರವೇಶಿಸಿದ್ದೇನೆ. ನೀನು ಪ್ರಮತ್ತನಾಗಿ ನನ್ನ ಬಳಿಗೆ ಬರುತ್ತಿರುವೆ. ವಿಷಕುಡಿದ ಸರಳಿನಿಂದ ಹೊಡೆದು ನಿನ್ನನ್ನು ಇಲ್ಲಿಯೇ ಬೀಳಿ ಸುವೆನು" ಎಂದು ಗದರಿಸುತ್ತಾ ಹಾಲಾಹಲವಿಷ ಕುಡಿದ ಸರಳನ್ನು ಹೂಡಿ ಬಿಟ್ಟನು. ಅದು ಯಕ್ಷನ ರೋಮದಲ್ಲೇ ಸಿಕ್ಕಿಬಿತ್ತು. ಅನಂತರ ಇನ್ನೂ ಐವತ್ತು ಸರಳು ಬಿಟ್ಟನು. ಎಲ್ಲವೂ ಅವನ ರೋಮದಲ್ಲೇ ಸಿಕ್ಕಿಬಿತ್ತು.

ಯಕ್ಷನು ಆ ಸರಳುಗಳೆಲ್ಲವನ್ನೂ ಒದರಿ ತನ್ನ ಕಾಲಬಳಿಯಲ್ಲಿಯೇ ಬೀಳಿಸಿ ಬೋಧಿಸತ್ತ್ವನ ಬಳಿಗೆ ಬಂದನು. ಬೋಧಿಸತ್ತ್ವನು ಪುನಃ ಅವನನ್ನು ಗದರಿಸುತ್ತಾ ಖಡ್ಗವನ್ನು ಎಳೆದು ಹೊಡೆದನು. ಮೂವತ್ತು ಮೂರು ಅಂಗುಲಗಳ ಉದ್ದದ ಖಡ್ಗ ರೋಮದಲ್ಲಿಯೇ ಸಿಕ್ಕಿಬಿತ್ತು. ಆಗ ಅವನನ್ನು ಕಣೆಯಿಂದ ಹೊಡೆದನು. ಅದೂ ರೋಮದಲ್ಲೇ ಸಿಕ್ಕಿ ಬಿತ್ತು. ಅದು ಸಿಕ್ಕಿಬೀಳಲು ಮುದ್ಗರದಿಂದ ಹೊಡೆದನು. ಅದೂ ರೋಮದಲ್ಲೇ ಸಿಕ್ಕಿಬಿತ್ತು.

ಅದೂ ಸಿಕ್ಕಿಬಿದ್ದುದನ್ನು ತಿಳಿದು, "ಓ ಯಕ್ಷ, ನಾನು ಪಂಚಾ ಯುಧಕುಮಾರನೆಂಬುದನ್ನು ನೀನು ಹಿಂದೆ ಕೇಳಿಲ್ಲವೇನು? ನೀನು

ವಾಸಿಸುತ್ತಿರುವ ಈ ಕಾಡನ್ನು ಪ್ರವೇಶಿಸುವಾಗ ನಾನು ಧನುಸ್ಸೇ ಮೊದಲಾದವುಗಳನ್ನು ನಂಬಿ ಪ್ರವೇಶಿಸಲಿಲ್ಲ; ನನ್ನನ್ನೇ ನಾನು ನಂಬಿ ಪ್ರವೇಶಿಸಿದೆ. ಈಗ ನಿನ್ನನ್ನು ಹೊಡೆದು ಪುಡಿಪುಡಿಮಾಡಿಬಿಡುವೆನು" ಎಂದು ಕೂಗುತ್ತಾ ಬಲಗೈಯಿಂದ ಯಕ್ಷನನ್ನು ಹೊಡೆದನು. ಬಲಗೈ ಕೂದಲಲ್ಲೇ ಸಿಕ್ಕಿಬಿತ್ತು. ಎಡಗೈಯಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ಬಲಗಾಲಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ಎಡಗಾಲಿಂದ ಹೊಡೆದನು. ಅದೂ ಸಿಕ್ಕಿಬಿತ್ತು. ತಲೆಯಿಂದ ಅವನನ್ನು ಗುದ್ದುತ್ತಾ "ನಿನ್ನನ್ನು ಪುಡಿಪುಡಿಮಾಡುವೆನು" ಎಂದು ತಲೆಯಿಂದ ಹೊಡೆದನು. ಆದೂ ಕೂದಲಿನಲ್ಲೇ ಸಿಕ್ಕಿಬಿತ್ತು. ಹೀಗೆ ಅವನು ಐದು ಬಲೆಗಳಲ್ಲಿ ಐದು ಕಡೆ ಸಿಕ್ಕಿಬಿದ್ದು ನೇತಾಡುತ್ತಿದ್ದರೂ ನಿರ್ಭಯವಾಗಿ ಚಿಂತೆಯಿಲ್ಲದೆ ಇದ್ದನು.

ಯಕ್ಷನು "ಇವನು ಒಬ್ಬ ಪುರುಷಸಿಂಹ, ಪುರುಷಾಜಾನೇಯ. ಇವನು ಪುರುಷಮಾತ್ರನಲ್ಲ. ನನ್ನಂತಹ ಯಕ್ಷನು ಹಿಡಿದರೂ ಇಷ್ಟೂ ನಡುಗುವುದಿಲ್ಲ. ನಾನು ಈ ದಾರಿಯಲ್ಲಿ ಅನೇಕರನ್ನು ಕೊಂದಿದ್ದೇನೆ. ಆವರಲ್ಲಿ ಇಂತಹವನು ಒಬ್ಬನನ್ನೂ ಹಿಂದೆ ಕಾಣೆ. ಇವನು ಭಯಪಡದಿರಲು ಕಾರಣವೇನು?" ಎಂದು ಅವನನ್ನು ತಿನ್ನುವುದಕ್ಕೆ ಹಿಂದೆಗೆದು, "ಅಯ್ಯಾ ಹುಡುಗ, ನೀನು ಸಾವಿಗೆ ಹೆದರದಿರುವುದು ಹೇಗೆ?" ಎಂದು ಕೇಳಿದನು.

"ಏಕೆ ಭಯಪಡಲಿ, ಯಕ್ಷ? ಒಂದು ಸಲ ಹುಟ್ಟಿದವನಿಗೆ ಒಂದು ಮರಣ ನಿಯತ ತಾನೆ. ಅಲ್ಲದೆ, ನನ್ನ ಹೊಟ್ಟೆಯಲ್ಲಿ ವಜ್ರಾಯುಧವಿದೆ. ನನ್ನನ್ನು ನೀನು ತಿಂದರೆ, ನೀನು ಆ ಆಯುಧವನ್ನು ಜೀರ್ಣಿಸಿಕೊಳ್ಳಲಾರೆ. ಅದು ನಿನ್ನ ಒಳಗನ್ನು ಚೂರುಚೂರಾಗಿ ಕತ್ತರಿಸಿ ನಿನ್ನನ್ನು ಸಾಯಿಸಿಬಿಡುವುದು. ಹೀಗೆ ಇಬ್ಬರೂ ನಾಶವಾಗುವೆವು. ಈ ಕಾರಣಗಳಿಂದ ನಾನು ಭಯಪಡುವುದಿಲ್ಲ" ಎಂದು ಬೋಧಿಸತ್ತ್ವನು ತನ್ನೊಳಗಿರುವ ಜ್ಞಾನಾಯುಧವನ್ನು ಕುರಿತು ಇದನ್ನು ಹೇಳಿದನು.

ಯಕ್ಷನು ಅದನ್ನು ಕೇಳಿ, "ಈ ಹುಡುಗನು ತಥ್ಯವನ್ನೇ ಹೇಳುವನು. ಈ ಪುರುಷಸಿಂಹನ ಶರೀರದಿಂದ ಬೇಳೆಯಷ್ಟು ಮಾಂಸವನ್ನೂ

ನನ್ನ ಹೊಟ್ಟೆ ಜೀರ್ಣಿಸಿಕೊಳ್ಳಲಾರದು. ಇವನನ್ನು ಬಿಟ್ಟುಬಿಡುವೆನು" ಎಂದು ಚಿಂತಿಸಿ, ಮರಣಭಯದಿಂದ ಹೆದರಿ ಬೋಧಿಸತ್ತ್ವನನ್ನು ಬಿಟ್ಟು, "ಓ ಹುಡುಗ, ನೀನು ಪುರುಷಸಿಂಹ. ನಾನು ನಿನ್ನ ಮಾಂಸ ತಿನ್ನುವುದಿಲ್ಲ. ನೀನು ಇಂದು ರಾಹುಮುಖದಿಂದ ಮುಕ್ತನಾದ ಚಂದ್ರನಂತೆ ನನ್ನ ಕೈಯಿಂದ ಬಿಡುಗಡೆ ಹೊಂದಿರುವೆ. ಜ್ಞಾತಿಸುಹೃದಯರ ಮಂಡಲವನ್ನು ಸಂತೋಷಗೊಳಿಸು, ಹೋಗು" ಎಂದನು.

ಆಗ ಬೋಧಿಸತ್ತ್ವನು ಅವನಿಗೆ "ಯಕ್ಷ, ನಾನು ಇಷ್ಟರಲ್ಲೇ ಹೋಗುತ್ತೇನೆ. ನೀನು ಹಿಂದೆ ಪಾಪಮಾಡಿ, ಲುಬ್ಧನಾದೆ ; ರಕ್ತದಿಂದ ನಿನ್ನ ಕೈ ಕೆಂಪಾಗಿದೆ ; ಕಂಡವರ ರಕ್ತಮಾಂಸಗಳನ್ನು ತಿನ್ನುವ ಯಕ್ಷನಾಗಿ ಹುಟ್ಟಿರುವೆ. ಈಗಲಾದರೂ ಹೀಗೆಯೇ ಪಾಪವನ್ನೇ ಮಾಡಿದರೆ ಕತ್ತಲೆಯಿಂದ ಕತ್ತಲೆಗೆ ಹೋಗುವೆ. ಆದರೆ ನನ್ನನ್ನು ಕಂಡಕಾಲದಿಂದ ತೊಡಗಿ ನೀನು ಪಾಪಮಾಡಲಾರೆ. ಪ್ರಾಣಿಹಿಂಸೆಯಿಂದ ನರಕದಲ್ಲಿ, ಮೃಗವಾಗಿ, ಪ್ರೇತವಾಗಿ, ಅಸುರನಾಗಿ ಹುಟ್ಟಬೇಕಾಗುವುದು; ಮನುಷ್ಯನಾಗಿ ಹುಟ್ಟಿದರೆ ಆಯುಸ್ಸು ಬಹಳ ಕಡಿಮೆಯಾಗಿರುವುದು" ಎಂದು ಮೊದಲಾಗಿ ಕೆಟ್ಟ ನಡತೆಯಿಂದಾಗುವ ತೊಂದರೆಗಳನ್ನೂ ಒಳ್ಳೆಯ ನಡತೆಯಿಂದ ಆಗುವ ಹಿತವನ್ನೂ ಹೇಳಿದನು. ಯಕ್ಷನನ್ನು ನಾನಾ ರೀತಿಗಳಲ್ಲಿ ಗದರಿಸಿ, ಅವನಿಗೆ ಧರ್ಮವನ್ನು ತೋರಿಸಿ, ಅವನನ್ನು ದಮನ ಮಾಡಿದನು ; 'ಇದೇ ಕಾಡಿನಲ್ಲಿದ್ದು ಜನರು ಒಪ್ಪಿಸುವ ಬಲಿಗಳನ್ನು ನೀನು ತೆಗೆದುಕೊ' ಎಂದು ಅವನನ್ನು ಆ ಕಾಡಿಗೆ ದೇವತೆಯನ್ನಾಗಿ ಮಾಡಿದನು. ಹೀಗೆ ಅವನಿಗೆ ಬುದ್ಧಿಹೇಳಿ, ಅಡವಿಯಿಂದ ಹೊರಟು, ಅಡವಿಯ ಮುಖದಲ್ಲಿದ್ದ ಜನರಿಗೆ ನಡೆದುದನ್ನು ತಿಳಿಸಿದನು.

ಅನಂತರ ಸನ್ನದ್ಧಪಂಚಾಯುಧನಾಗಿ ವಾರಾಣಸಿಗೆ ಹೋಗಿ, ತಾಯಿ ತಂದೆಯನ್ನು ಕಂಡನು. ಆಮೇಲೆ ರಾಜ್ಯವನ್ನು ಧರ್ಮದಿಂದ ಆಳುತ್ತಾ, ದಾನಾದಿ ಪುಣ್ಯಗಳನ್ನು ಮಾಡಿ, ಕಾಲವಾದ ಬಳಿಕ ತನ್ನ ಕರ್ಮಗಳಿಗೆ ತಕ್ಕಂತೆ ಹೋದನು.

# ಶ್ರೀ ವಾಣಿಜ

ಹಿಂದೆ, ಐದು ಕಲ್ಪಗಳ ಹಿಂದೆ, ಬೋಧಿಸತ್ತ್ವನು ಶ್ರೀವಂತ ರಾಷ್ಟ್ರದಲ್ಲಿ ಶ್ರೀಮಂತನೆಂಬ ವ್ಯಾಪಾರಿಯಾಗಿದ್ದನು. ಅವನು ಪಾತ್ರೆ ಪದಾರ್ಥಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ಮನೆಮನೆಗೆ ಹೊತ್ತು ಮಾರುತ್ತಿದ್ದನು.

ಒಂದು ಸಲ ಅವನು ಶ್ರೀಮಂತನೆಂಬ ಇನ್ನೊಬ್ಬ ಆಸೆಬುರುಕ ವರ್ತಕನೊಡನೆ ತೈಲವಾಹವೆಂಬ ನದಿಯನ್ನು ದಾಟಿ, ಅಂಧಪುರವೆಂಬ ನಗರಕ್ಕೆ ಪ್ರವೇಶಿಸಿ, ನಗರದ ಬೀದಿಗಳನ್ನು ಹಂಚಿಕೊಂಡು, ತನ್ನ ಪಾಲಿಗೆ ಬಂದ ಬೀದಿಗಳಲ್ಲಿ ತನ್ನ ವಸ್ತುಗಳನ್ನು ಮಾರುತ್ತಾ ತಿರುಗಿದನು. ಇನ್ನೊಬ್ಬನು ತನ್ನ ಪಾಲಿಗೆ ಬಂದ ಬೀದಿಗಳನ್ನು ತಾನು ಹಿಡಿದನು.

ಅದೇ ನಗರದಲ್ಲಿ ಒಂದು ಶ್ರೇಷ್ಠಿಯ ಮನೆ ಬಹಳ ದುರ್ಗತಿಗೆ ಬಂದಿತ್ತು. ಅಲ್ಲಿ ಮಕ್ಕಳೂ ಸೋದರರೂ ಹಣವೂ ನಾಶವಾಗಿತ್ತು. ಅಜ್ಜಿಯೊಡನೆ ಒಬ್ಬ ಮಗಳು ಮಾತ್ರ ಉಳಿದುಕೊಂಡಿದ್ದಳು. ಅವರಿಬ್ಬರೂ ಇತರರಿಗೆ ಕೂಲಿಮಾಡಿಕೊಂಡು ಬದುಕುತ್ತಿದ್ದರು.

ಅವರ ಮನೆಯಲ್ಲಿ ಒಂದು ಚಿನ್ನದ ಪಾತ್ರೆಯಿತ್ತು. ಹಿಂದೆ ಅದರಲ್ಲಿ ಮಹಾಶ್ರೇಷ್ಠಿ ಊಟ ಮಾಡುತ್ತಿದ್ದನು. ಅದು ಅನೇಕ ಕಾಲ ಪಾತ್ರೆಗಳ ನಡುವೆ ಬಿದ್ದು ಉಪಯೋಗಿಸದೆ ದೂಳು ಹಿಡಿದಿತ್ತು. ಅದು ಚಿನ್ನದ್ದೆಂಬುದೂ ಅವರಿಗೆ ಗೊತ್ತಿರಲಿಲ್ಲ.

ಆ ಸಮಯದಲ್ಲಿ ಆ ಆಸೆಬುರುಕ ವ್ಯಾಪಾರಿ "ಮಣಿ ಕೊಳ್ಳಿರಿ, ಮಣಿ ಕೊಳ್ಳಿರಿ" ಎಂದು ತಿರುಗುತ್ತಾ ಆ ಮನೆಬಾಗಿಲಿಗೆ ಬಂದನು.

ಆ ಹುಡುಗಿ ಅವನನ್ನು ಕಂಡು, "ಅಮ್ಮಾ, ನನಗೊಂದು ಆಭರಣ ತೆಗೆದುಕೊಡು" ಎಂದು ಅಜ್ಜಿಯನ್ನು ಕೇಳಿದಳು.

"ಅಮ್ಮಾ, ನಮಗೆ ಗತಿಯಿಲ್ಲ. ಏನು ಕೊಟ್ಟು ತೆಗೆದುಕೊಳ್ಳೋಣ?"

" ನಮ್ಮಲ್ಲಿ ಈ ಪಾತ್ರೆಯಿದೆ. ಇದರಿಂದ ನಮಗೆ ಉಪಯೋಗವಿಲ್ಲ. ಇದನ್ನು ಕೊಟ್ಟು ತೆಗೆದುಕೊ."

ಅವಳು ಆ ವ್ಯಾಪಾರಿಯನ್ನು ಕೂಗಿ ಕರೆದು, ಕುಳ್ಳಿರಿಸಿ, ಆ ಪಾತ್ರೆಯನ್ನು ಕೊಟ್ಟು, " ಅಯ್ಯಾ, ಇದನ್ನು ತೆಗೆದುಕೊಂಡು ನಿನ್ನ ತಂಗಿಗೆ ಏನಾದರೂ ಕೊಡು" ಎಂದಳು.

ವ್ಯಾಪಾರಿ ಪಾತ್ರೆಯನ್ನು ಕೈಯಲ್ಲಿ ಹಿಡಿದು, ಚಿನ್ನದ ಪಾತ್ರೆಯಿರಬಹುದೆಂದು ತಿರುಗಿಸಿ ನೋಡಿ, ಪಾತ್ರೆಯ ಕೆಳಗೆ ಸೂಜಿಯಿಂದ ಬರೆದು ಗೀಚಿ, ಚಿನ್ನವೆಂಬುದನ್ನು ತಿಳಿದು, " ಇವರಿಗೆ ಏನೂ ಕೊಡದೆಯೇ ಈ ಪಾತ್ರೆಯನ್ನು ಹಾರಿಸುವೆನು" ಎಂದು, "ಇದೇನು ಬೆಲೆ ಬಾಳುವುದು? ಅರ್ಧ ಹಣ ಕೂಡ ಬೆಲೆ ಬಾಳುವುದಿಲ್ಲ" ಎಂದು ಅದನ್ನು ನೆಲದ ಮೇಲೆಸೆದು, ಆಸನದಿಂದೆದ್ದು ಹೋದನು.

ಅವನು ಹೊಕ್ಕು ಹೋದ ಬೀದಿಯಲ್ಲಿ ಇನ್ನೊಬ್ಬನು ಹೊಗಬಹುದೆಂದು ಬೋಧಿಸತ್ತ್ವನು ಆ ಬೀದಿಯನ್ನು ಹೊಕ್ಕು, "ಮಣಿ ಕೊಳ್ಳಿರಿ" ಎಂದು ಅದೇ ಮನೆಬಾಗಿಲಿಗೆ ಬಂದನು. ಪುನಃ ಆ ಹುಡುಗಿ ಅಜ್ಜಿಯನ್ನು ಹಾಗೆಯೇ ಕೇಳಿದಳು.

ಆಗ ಅಜ್ಜಿ "ಅಮ್ಮಾ, ಮೊದಲು ಬಂದ ವ್ಯಾಪಾರಿ ಪಾತ್ರೆಯನ್ನು ನೆಲದ ಮೇಲೆ ಎಸೆದು ಹೋದ. ಇವನಿಗೆ ಏನು ಕೊಟ್ಟು ತೆಗೆದುಕೊಳ್ಳೋಣ?" ಎಂದಳು.

" ಅಮ್ಮಾ, ಆ ವ್ಯಾಪಾರಿ ಕರ್ಕಶವಾಗಿ ಆಡಿದ. ಇವನಾದರೋ ನೋಡಲು ಪ್ರಿಯನಾಗಿದ್ದಾನೆ, ಮೃದುವಾಗಿ ಮಾತನಾಡುತ್ತಾನೆ. ಇವನು ಇದನ್ನು ತೆಗೆದುಕೊಂಡಾನು."

" ಹಾಗಾದರೆ, ಕೂಗು."

ಅವಳು ಅವನನ್ನು ಕೂಗಿದಳು. ಅವನು ಅವರ ಮನೆಗೆ ಬಂದು ಕುಳಿತುಕೊಳ್ಳಲು, ಆ ಪಾತ್ರೆಯನ್ನು ಕೊಟ್ಟಳು.

ಅವನು ಅದು ಚಿನ್ನವೆಂಬುದನ್ನು ತಿಳಿದು, " ಅಮ್ಮಾ, ಈ ಪಾತ್ರೆ ನೂರುಸಾವಿರ ಬೆಲೆ ಬಾಳುವುದು. ಈ ಪಾತ್ರೆಗೆ ಬೆಲೆ ಬಾಳುವ ವಸ್ತು ನನ್ನ ಕೈಯಲ್ಲಿಲ್ಲ" ಎಂದನು.

"ಅಯ್ಯಾ, ಮೊದಲು ಬಂದ ವ್ಯಾಪಾರಿ 'ಇದು ಅರ್ಧ ಹಣ ಕೂಡ ಬೆಲೆ ಬಾಳದು' ಎಂದು ನೆಲದ ಮೇಲೆಸೆದು ಹೋದ. ಇದು ನಿನ್ನ ಪುಣ್ಯದಿಂದ ಚಿನ್ನದ ಪಾತ್ರೆಯಾಗಿರಬೇಕು. ಆದ್ದರಿಂದ ನಾನು ಇದನ್ನು ನಿನಗೆ ಕೊಡುತ್ತೇನೆ. ಏನಾದರೂ ಕೊಟ್ಟು ಇದನ್ನು ಕೊಂಡು ಹೋಗು."

ಬೋಧಿಸತ್ತ್ವನು ಅದೇ ಕ್ಷಣದಲ್ಲಿಯೇ ಕೈಯಲ್ಲಿದ ಐನೂರು ನಾಣ್ಯಗಳನ್ನೂ ಐನೂರು ಬೆಲೆ ಬಾಳುವ ವಸ್ತುಗಳನ್ನೂ ಕೊಟ್ಟು, "ನನಗೆ ಈ ತಕ್ಕಡಿ, ಹಸುಬೆ, ಎಂಟು ನಾಣ್ಯ ಮಾತ್ರ ಕೊಡಿ" ಎಂದು ಅಷ್ಟು ಮಾತ್ರ ಬೇಡಿ ತೆಗೆದುಕೊಂಡು ಹೋದನು. ಬೇಗನೆಯೆ ನದೀತೀರಕ್ಕೆ ಹೋಗಿ, ನಾವಿಕನಿಗೆ ಎಂಟು ನಾಣ್ಯಕೊಟ್ಟು ನಾವೆಯನ್ನು ಏರಿದನು.

ಆಗ ಆ ಆಸೆಬುರುಕ ವ್ಯಾಪಾರಿ ಪುನಃ ಆ ಮನೆಗೆ ಹೋಗಿ, "ನಿಮ್ಮ ಪಾತ್ರೆ ತನ್ನಿ. ನಿಮಗೆ ಏನಾದರೂ ಕೊಡುವೆನು" ಎಂದನು.

ಮುದುಕಿ ಅವನನ್ನು ಚೆನ್ನಾಗಿ ಎಂದು, "ನೀನು ನಮ್ಮ ನೂರು ಸಾವಿರ ಬೆಲೆ ಬಾಳುವ ಚಿನ್ನದ ಪಾತ್ರೆಯನ್ನು ಅರ್ಧ ಹಣ ಕೂಡ ಬೆಲೆ ಬಾಳುವುದಿಲ್ಲವೆಂದೆ. ನಿನ್ನ ಸ್ವಾಮಿಯಂತಿದ್ದ ಒಬ್ಬ ಧರ್ಮಿಕ ವ್ಯಾಪಾರಿ ಬಂದು, ನಮಗೆ ಸಾವಿರ ಕೊಟ್ಟು ಕೊಂಡು ಹೋದ" ಎಂದಳು.

ಅವನು ಅದನ್ನು ಕೇಳಿ, "ಇವನಿಂದ ನೂರುಸಾವಿರ ಬೆಲೆಬಾಳುವ ಚಿನ್ನದ ಪಾತ್ರೆ ನನಗೆ ನಷ್ಟವಾಯಿತು. ಇವನು ನನ್ನನ್ನು ಲೂಟಿಮಾಡಿದನು" ಎಂದು ಬಹುವಾಗಿ ಶೋಕಪಟ್ಟು, ಎಚ್ಚರ ತಪ್ಪಿ ಪರವಶನಾಗಿ, ಕೈಯಲ್ಲಿದ್ದ ಹಣವನ್ನೂ ವಸ್ತುಗಳನ್ನೂ ಮನೆಯ ಬಾಗಿಲಲ್ಲೇ ಚೆಲ್ಲಿ, ಉಟ್ಟು ಹೊದೆದ ಬಟ್ಟೆಗಳನ್ನು ಬಿಸಾಡಿ, ತಕ್ಕಡಿಯ ಕಡ್ಡಿಯನ್ನೇ ಗದೆ ಮಾಡಿಕೊಂಡು ಬೋಧಿಸತ್ತ್ವನ ಹೆಜ್ಜೆಯನ್ನೇ ಹಿಡಿದು ನದೀತೀರಕ್ಕೆ ಹೋಗಿ, ಬೋಧಿಸತ್ತ್ವನು ಹೋಗುವುದನ್ನು ಕಂಡು, "ಏ, ನಾವಿಕ, ನಾವೆಯನ್ನು ಹಿಂದಿರುಗಿಸು" ಎಂದನು.

ಬೋಧಿಸತ್ತ್ವನು ತಿರುಗಿಸಬೇಡವೆಂದು ತಡೆದನು. ಬೋಧಿಸತ್ತ್ವನು ಹೋಗುವುದನ್ನು ನೋಡುತ್ತಾ ನೋಡುತ್ತಾ ಇನ್ನೊಬ್ಬನಿಗೆ

ಬಲವಾದ ಶೋಕವುಂಟಾಯಿತು, ಹೃದಯ ಬಿಸಿಯಾಯಿತು. ಅವನು ಮುಖದಲ್ಲಿ ರಕ್ತ ಕಾರಿದನು, ಬಾವಿಯ ಕೆಸರಿನಂತೆ ಅವನ ಹೃದಯ ಸೀಳಿತು. ಅವನು ಬೋಧಿಸತ್ತ್ವನಲ್ಲಿ ದ್ವೇಷ ಕಟ್ಟಿಕೊಂಡು ಅಲ್ಲಿಯೇ ಸತ್ತನು.

ಬೋಧಿಸತ್ತ್ವನು ದಾನಾದಿ ಪುಣ್ಯಗಳನ್ನು ಮಾಡಿ, ಕಾಲವಾದ ಬಳಿಕ ತನ್ನ ಕರ್ಮಗಳಿಗೆ ತಕ್ಕಂತೆ ಹೋದನು.

# ಕ್ಷುಲ್ಲಕ ಶ್ರೇಷ್ಠಿ

ಹಿಂದೆ, ಕಾಶೀರಾಷ್ಟ್ರದ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯ ವಾಳುತ್ತಿದ್ದಾಗ, ಬೋಧಿಸತ್ತ್ವನು ಶ್ರೇಷ್ಠಿಗಳ ಮನೆಯಲ್ಲಿ ಜನ್ಮ ತಾಳಿದನು; ವಯಸ್ಸು ಬಂದಾಗ ಶ್ರೇಷ್ಠಿಯ ಸ್ಥಾನವನ್ನು ಪಡೆದು ಕ್ಷುಲ್ಲಕ ಶ್ರೇಷ್ಠಿಯೆಂದು ಹೆಸರಾದನು. ಅವನು ಬುದ್ಧಿವಂತ, ಜಾಣ; ನಕ್ಷತ್ರಗಳನ್ನು ನೋಡಿ ಮುಂದೆ ಆಗುವುದನ್ನು ತಿಳಿಯುತ್ತಿದ್ದನು.

ಅವನು ಒಂದು ದಿನ ರಾಜನ ಸೇವೆಗೆ ಹೋಗುತ್ತಾ ದಾರಿಯ ನಡುವೆ ಒಂದು ಸತ್ತ ಇಲಿಯನ್ನು ಕಂಡು, ಅದೇ ಕ್ಷಣದಲ್ಲಿ ನಕ್ಷತ್ರಗಳನ್ನು ಗುಣಿಸಿ, "ಕಣ್ಣಿರುವವನು ಯಾವನಾದರೂ ಒಳ್ಳೆಯ ವಂಶದಲ್ಲಿ ಹುಟ್ಟಿದವನು ಈ ಇಲಿಯನ್ನು ತೆಗೆದುಕೊಂಡು ಹೆಂಡತಿಮಕ್ಕಳನ್ನು ಸಾಕಬಹುದು ಅಥವಾ ಏನಾದರೂ ಕೆಲಸಕ್ಕೆ ಕೈಹಾಕಬಹುದು" ಎಂದನು.

ಬಲು ಬಡತನದಲ್ಲಿದ್ದ ಒಬ್ಬಾನೊಬ್ಬ ಕುಲಪುತ್ರನು ಆ ಶ್ರೇಷ್ಠಿಯ ಮಾತನ್ನು ಕೇಳಿ, "ಇವನು ತಿಳಿಯದೆ ಮಾತನಾಡುತ್ತಿಲ್ಲ" ಎಂದು ಆ ಇಲಿಯನ್ನು ತೆಗೆದುಕೊಂಡು, ಒಂದು ಅಂಗಡಿಯಲ್ಲಿ ಅದನ್ನು ಬೆಕ್ಕಿಗಾಗಿ ಮಾರಿ ಒಂದು ಕವಡೆಯನ್ನು ಪಡೆದನು.

ಆ ಕವಡೆಯಿಂದ ಕಾಕಂಬಿಯನ್ನು ಕೊಂಡುಕೊಂಡು ಒಂದು ಗಡಿಗೆಯಲ್ಲಿ ನೀರು ತೆಗೆದುಕೊಂಡನು. ಹೂವಿನ ಮಾಲೆ ಮಾಡುವವರು ಕಾಡಿನಿಂದ ಬರುವುದನ್ನು ಕಂಡು, ಅವರಿಗೆ ಕೊಂಚ ಕೊಂಚ ಕಾಕಂಬಿಯನ್ನು ಕೊಟ್ಟು, ಸೌಟಿನಿಂದ ನೀರನ್ನೂ ಕೊಟ್ಟನು. ಅವರಲ್ಲಿ ಪ್ರತಿಒಬ್ಬರೂ ಅವನಿಗೆ ಒಂದೊಂದು ಹಿಡಿ ಹೂ ಕೊಟ್ಟರು.

ಅವನು ಆ ಹೂಗಳನ್ನು ಕೊಟ್ಟು ಪುನಃ ಕಾಕಂಬಿಯನ್ನೂ ನೀರಿನ ಗಡಿಗೆಯನ್ನೂ ಕೊಂಡುಕೊಂಡು, ಮಾರನೆಯ ದಿನ ಹೂವಿನತೋಟಕ್ಕೆ ಹೋದನು. ಆ ದಿನ ಅವನಿಗೆ ಮಾಲಾಕಾರರು ಅರ್ಧಕಿತ್ತ ಹೂವಿನ ಗೊಂಚಲುಗಳನ್ನು ಕೊಟ್ಟು ಹೋದರು. ಅವನು ಬಹುಬೇಗನೆ ಈ ಉಪಾಯದಿಂದ ಎಂಟು ಹಣಗಳನ್ನು ಪಡೆದನು.

ಪುನಃ, ಒಂದು ಮಳೆಗಾಳಿಯ ದಿವಸ, ರಾಜನ ಉದ್ಯಾನದಲ್ಲಿ ಒಣಗಿದ ಕಡ್ಡಿಗಳೂ ಕೊಂಬೆಗಳೂ ಎಲೆಗಳೂ ಗಾಳಿಗೆ ಬಹಳವಾಗಿ ಬಿದ್ದಿದ್ದುವು. ಅವುಗಳನ್ನು ಗುಡಿಸುವ ಉಪಾಯ ಉದ್ಯಾನಪಾಲನಿಗೆ ಕಾಣಿಸಲಿಲ್ಲ. ಇವನು ಅಲ್ಲಿಗೆ ಹೋಗಿ, "ನೀನು ಈ ಕಡ್ಡಿಗಳನ್ನೂ ಎಲೆಗಳನ್ನೂ ನನಗೆ ಕೊಟ್ಟರೆ ನಾನು ಇವೆಲ್ಲವನ್ನೂ ತೆಗೆದುಹಾಕುತ್ತೇನೆ" ಎಂದು ಉದ್ಯಾನಪಾಲನಿಗೆಂದನು. ಅವನು "ತೆಗೆದುಕೊ, ಅಯ್ಯಾ" ಎಂದು ಒಪ್ಪಿದನು. ಆಗ ಕ್ಷುಲ್ಲಕಶ್ರೇಷ್ಠಿಯ ಶಿಷ್ಯನು ಮಕ್ಕಳು ಆಡುವ ಸ್ಥಳಕ್ಕೆ ಹೋಗಿ, ಅವರಿಗೆ ಕಾಕಂಬಿ ಕೊಟ್ಟು, ಒಂದೇ ಮುಹೂರ್ತದಲ್ಲಿ ಎಲ್ಲಾ ಕಡ್ಡಿ ಎಲೆಗಳನ್ನೂ ತೆಗೆಸಿ, ಉದ್ಯಾನದ್ವಾರದಲ್ಲಿ ರಾಶಿಮಾಡಿಸಿದನು.

ಆಗ ರಾಜನ ಕುಂಬಾರರು ರಾಜನ ಮನೆಗೆ ಪಾತ್ರೆಗಳನ್ನು ಸುಡುವುದಕ್ಕಾಗಿ ಕಟ್ಟಿಗೆಯನ್ನು ಹುಡುಕುತ್ತಾ ಉದ್ಯಾನದ ಬಾಗಿಲಲ್ಲಿ ಅದನ್ನು ಕಂಡು, ಅವನ ಕೈಯಿಂದ ಅದನ್ನು ಕ್ರಯಕೊಟ್ಟು ಪಡೆದರು. ಆ ದಿವಸ ಕ್ಷುಲ್ಲಕನ ಶಿಷ್ಯನಿಗೆ ಕಟ್ಟಿಗೆಯ ಮಾರಾಟದಿಂದ ಹದಿನಾರು ಹಣಗಳೂ ಚಟ್ಟಿಯೇ ಮೊದಲಾದ ಐದು ಪಾತ್ರೆಗಳೂ ದೊರೆತವು.

ಹೀಗೆ ಅವನಿಗೆ ಇಪ್ಪತ್ತುನಾಲ್ಕು ಹಣ ಸಂಪಾದನೆಯಾಗಲು, "ಇನ್ನೇನು ಉಪಾಯ?" ಎಂದು ನಗರದ ಬಾಗಿಲಿಗೆ ಸ್ವಲ್ಪ ದೂರದಲ್ಲಿ ಒಂದು ನೀರಿನ ಚಟ್ಟಿಯನ್ನಿಟ್ಟು, ಐನೂರು ಜನ ಹುಲ್ಲು ಹೊರುವವರಿಗೆ ನೀರಿನಿಂದ ಸೇವೆ ಮಾಡಿದನು. ಅವರು "ಅಯ್ಯಾ, ನಿನ್ನಿಂದ ನಮಗೆ ಬಹು ಉಪಕಾರವಾಯಿತು. ನಾವು ನಿನಗೇನು ಮಾಡೋಣ?" ಎಂದರು. ಅವನು "ನನಗೆ ಕೆಲಸವಾಗಬೇಕಾದಾಗ ಮಾಡಿರಿ" ಎಂದು ಹೇಳಿ, ಅಲ್ಲಿ ಇಲ್ಲಿ ತಿರುಗಾಡುತ್ತಾ ನೆಲದ ಮೇಲೂ ನೀರಿನ ಮೇಲೂ ವ್ಯಾಪಾರಮಾಡುವವರೊಡನೆ ಸ್ನೇಹ ಬೆಳೆಸಿದನು.

ನೆಲದ ಮೇಲೆ ವ್ಯಾಪಾರಮಾಡುವವರು ಒಂದು ದಿನ "ನಾಳೆ ಈ ನಗರಕ್ಕೆ ಕುದುರೆಮಾರುವವರು ಐನೂರು ಕುದುರೆಗಳನ್ನು ಕರೆದು ತರುವರು" ಎಂದು ಅವನಿಗೆ ತಿಳಿಸಿದರು. ಅವನು ಅವರ ಮಾತು ಕೇಳಿ, "ಅಯ್ಯಾ, ನೀವು ನನಗೆ ಒಬ್ಬೊಬ್ಬರು ಒಂದೊಂದು ಹುಲ್ಲಿನ ಕಂತೆ

ಕೊಡಿರಿ. ನಾನು ಹುಲ್ಲು ಮಾರುವವರೆಗೆ ನೀವು ನಿಮ್ಮ ಹುಲ್ಲನ್ನು ಮಾರಬೇಡಿರಿ" ಎಂದು ಹುಲ್ಲು ಹೊರುವವರಿಗೆ ಎಂದನು. ಅವರು ಒಳ್ಳೆಯದೆಂದು ಒಪ್ಪಿ ಐನೂರು ಹುಲ್ಲಿನ ಕಂತೆಗಳನ್ನು ತಂದು ಅವನ ಮನೆಯಲ್ಲಿ ಹಾಕಿದರು. ಕುದುರೆ ಮಾರುವವರು ಊರಲ್ಲೆಲ್ಲೂ ಕುದುರೆಗಳಿಗೆ ಹುಲ್ಲು ಸಿಕ್ಕದೆ ಅವನಿಗೆ ಸಾವಿರವನ್ನು ಕೊಟ್ಟು ಆ ಹುಲ್ಲನ್ನು ಕೊಂಡರು.

ಕೆಲವು ದಿನಗಳಾದ ಬಳಿಕ ಜಲದ ಮೇಲೆ ವ್ಯಾಪಾರಮಾಡುವ ಅವನ ಸ್ನೇಹಿತರು "ಪಟ್ಟಣಕ್ಕೆ ಮಹಾನಾವೆ ಬಂದಿದೆ" ಎಂದು ತಿಳಿಸಿದರು. ಅವನು "ಇದಕ್ಕೆ ಉಪಾಯವಿದೇ" ಎಂದು, ಸರ್ವಪರಿವಾರ ಸಂಪನ್ನವಾದ ಬಾಡಿಗೆಯ ರಥವನ್ನು ಎಂಟು ಹಣಗಳಿಗೆ ತೆಗೆದುಕೊಂಡು ಮಹಾವೈಭವದಿಂದ ರೇವೆಗೆ ಹೋಗಿ, ನಾವೆಯ ನಂಬಿಕೆಗಾಗಿ ಒಂದು ಮುದ್ರೆಯುಂಗುರವನ್ನು ಕೊಟ್ಟು, ಸ್ವಲ್ಪ ದೂರದಲ್ಲಿಯೇ ಗುಡಾರವನ್ನು ಹಾಕಿಸಿ ಕುಳಿತು, "ಹೊರಗಿನಿಂದ ವ್ಯಾಪಾರಿಗಳು ಬಂದರೆ ಮೂವರು ಸೇವಕರು ಕ್ರಮವಾಗಿ ಬಂದು ತಿಳಿಸಿರಿ" ಎಂದು ಜನಕ್ಕೆ ಆಜ್ಞೆಮಾಡಿದನು.

"ನಾವೆ ಬಂದಿತು" ಎಂದು ಕೇಳಿ, ವಾರಾಣಸಿಯಿಂದ ನೂರು ವ್ಯಾಪಾರಿಗಳು "ಪದಾರ್ಥಗಳನ್ನು ತೆಗೆದುಕೊಳ್ಳೋಣ" ಎಂದು ಬಂದರು. "ಹಡಗಿನ ವಸ್ತು ನಿಮಗೆ ದೊರಕದು. ಇಂತಹ ಸ್ಥಾನದಲ್ಲಿರುವ ಮಹಾವಾಣಿಜನು ನಂಬಿಕೆ ಕೊಟ್ಟಿರುವನು" ಎಂದು ಜನ ಹೇಳಿದರು.

ಅವರು ಅದನ್ನು ಕೇಳಿ ಅವನ ಬಳಿಗೆ ಬಂದರು. ಸೇವಕರು, ಮೊದಲೇ ಹೇಳಿಕೊಟ್ಟಿದ್ದಂತೆ, ಮೂವರು ಕ್ರಮವಾಗಿ ಬಂದು ಅವರ ಬರವನ್ನು ತಿಳಿಸಿದರು. ಆ ನೂರ್ವರು ವ್ಯಾಪಾರಿಗಳಲ್ಲಿ ಒಬ್ಬೊಬ್ಬನೂ ಸಾವಿರ ಕೊಟ್ಟು ಅವನೊಡನೆ ನಾವೆಯಲ್ಲಿ ಪಾಲುದಾರರಾಗಿ, ಪುನಃ ಪ್ರತಿ ಒಬ್ಬರೂ ಸಾವಿರ ಕೊಟ್ಟು ತಮ್ಮ ಪಾಲನ್ನು ಬಿಡಿಸಿಕೊಂಡು ಸ್ವಂತ ಮಾಡಿಕೊಂಡರು.

ಹೀಗೆ ಕ್ಷುಲ್ಲಕ ಶ್ರೇಷ್ಠಿಯ ಶಿಷ್ಯನು ಎರಡುನೂರುಸಾವಿರಗಳನ್ನು ಕೊಂಡು ವಾರಾಣಸಿಗೆ ಬಂದು, "ಕೃತಜ್ಞನಾಗುವುದು ತಕ್ಕುದು" ಎಂದು ಒಂದುನೂರುಸಾವಿರವನ್ನು ತೆಗೆಸಿಕೊಂಡು ಕ್ಷುಲಕಶ್ರೇಷ್ಠಿಯ

ಸಮೀಪಕ್ಕೆ ಹೋದನು. ಆಗ ಆ ಶ್ರೇಷ್ಠಿ "ಅಪ್ಪ, ನೀನು ಏನು ಮಾಡಿ ಈ ಧನ ಪಡೆದೆ?" ಎಂದು ಕೇಳಿದನು. ಅವನು "ನೀನು ಹೇಳಿದ ಉಪಾಯದ ಮೇಲೆ ನಾಲ್ಕೇತಿಂಗಳ ಒಳಗೆ ಇಷ್ಟನ್ನೂ ಪಡೆದೆ" ಎಂದು ಮೃತಮೂಷಿಕ ಮೊದಲುಗೊಂಡು ಎಲ್ಲಾ ವಸ್ತುವನ್ನೂ ತಿಳಿಸಿದನು.

ಕ್ಷುಲ್ಲಕ ಮಹಾಶ್ರೇಷ್ಠಿ ಅವನ ಮಾತು ಕೇಳಿ, "ಇಂತಹ ಹುಡುಗನನ್ನು ಬೇರೆಯವರ ಬಳಿಗೆ ಬಿಟ್ಟುಕೊಡತಕ್ಕುದಲ್ಲ" ಎಂದು, ವಯಸ್ಸಿಗೆ ಬಂದ ತನ್ನ ಮಗಳನ್ನು ಅವನಿಗೆ ಕೊಟ್ಟು, ಸಕಲ ಕುಟುಂಬಕ್ಕೆ ಅವನನ್ನು ಸ್ವಾಮಿ ಮಾಡಿದನು. ಶ್ರೇಷ್ಠಿ ಕಾಲವಾದ ಮೇಲೆ ಅವನಿಗೇ ಶ್ರೇಷ್ಠಿಸ್ಥಾನ ಲಭಿಸಿತು.

ಬೋಧಿಸತ್ತ್ವನೂ ತನ್ನ ಕರ್ಮಗಳಿಗೆ ತಕ್ಕಂತೆ ಹೋದನು.

# ನಂದಿವಿಶಾಲ

ಹಿಂದೆ, ಗಂಧಾರರಾಷ್ಟ್ರದ ತಕ್ಷಶಿಲೆಯಲ್ಲಿ ಗಂಧಾರರಾಜನು ರಾಜ್ಯವಾಳುತ್ತಿದ್ದನು. ಆಗ ಬೋಧಿಸತ್ತ್ವನು ಗೋವಿನ ಹೊಟ್ಟೆಯಲ್ಲಿ ಜನ್ಮತಾಳಿದನು. ಅವನು ಇನ್ನೂ ಚಿಕ್ಕ ಕರುವಾಗಿರುವಾಗಲೇ ಒಬ್ಬ ಬ್ರಾಹ್ಮಣನು ಗೋದಕ್ಷಿಣೆ ಕೊಡುವವರ ಬಳಿ ಹೋಗಿ ಅವನನ್ನು ಪಡೆದು, ನಂದಿವಿಶಾಲನೆಂದು ಹೆಸರಿಟ್ಟು, ಮಗುವಿನಂತೆ ಪ್ರೀತಿಸಿ, ಗಂಜಿ ಅನ್ನ ಮೊದಲಾದವುಗಳನ್ನು ಕೊಟ್ಟು ಪೋಷಿಸಿದನು.

ಬೋಧಿಸತ್ತ್ವನು ವಯಸ್ಸು ಬಂದ ಮೇಲೆ, "ಈ ಬ್ರಾಹ್ಮಣನು ಮಾಡಿದ ಕೆಲಸಗಳಿಂದ ನನಗೆ ಆರೈಕೆಯಾಗಿದೆ. ನನ್ನ ಜೊತೆಗೆ ಭಾರ ಹೊರುವ ಎತ್ತು ಸಕಲ ಜಂಬೂದ್ವೀಪದಲ್ಲಿ ಇನ್ನೊಂದಿಲ್ಲ. ನಾನು ನನ್ನ ಬಲವನ್ನು ತೋರಿಸಿ, ಬ್ರಾಹ್ಮಣನು ಪೋಷಿಸಿದುದಕ್ಕೆ ಬೆಲೆಯನ್ನು ತಂದುಕೊಡುವೆನು" ಎಂದು ಚಿಂತಿಸಿದನು.

ಅವನು ಒಂದು ದಿನ ಬ್ರಾಹ್ಮಣನನ್ನು ಕುರಿತು "ಹೋಗು, ಬ್ರಾಹ್ಮಣ. ಗೋಧನವಿರುವ ಶ್ರೇಷ್ಠಿಯ ಬಳಿ ಹೋಗಿ, 'ನನ್ನ ಎತ್ತು ನೂರು ಗಾಡಿಗಳನ್ನು ಕಟ್ಟಿದರೂ ಎಳೆಯುವುದು' ಎಂದು ಹೇಳಿ, ಸಾವಿರ ನಾಣ್ಯಗಳನ್ನು ಪಣವಾಗಿ ಕಟ್ಟು" ಎಂದನು.

ಆ ಬ್ರಾಹ್ಮಣನು ಶ್ರೇಷ್ಠಿಯ ಹತ್ತಿರ ಹೋಗಿ, "ಈ ನಗರದಲ್ಲಿ ಯಾರ ಎತ್ತುಗಳಿಗೆ ಸಾಮರ್ಥ್ಯವಿದೆ?" ಎಂದು ಮಾತು ಎತ್ತಿದನು.

ಆಗ ಆ ಶ್ರೇಷ್ಠಿ "ಇಂಥವರದು, ಇಂಥವರದು" ಎಂದು ಹೇಳಿ, "ಈ ಸಕಲನಗರದಲ್ಲಿ ನನ್ನ ಎತ್ತಿಗೆ ಸದೃಶವಾದುದು ಯಾವುದೂ ಇಲ್ಲ" ಎಂದನು.

ಬ್ರಾಹ್ಮಣನು "ನನ್ನ ಎತ್ತು ನೂರು ಗಾಡಿ ಕಟ್ಟಿದರೂ ಎಳೆಯಲು ಸಮರ್ಥವಾಗಿದೆ" ಎಂದನು.

ಶ್ರೇಷ್ಠಿ "ಅಂತಹ ಎತ್ತು ಎಲ್ಲಿ?" ಎಂದನು.

ಬ್ರಾಹ್ಮಣನು "ನನ್ನ ಮನೆಯಲ್ಲಿದೆ" ಎಂದನು.

" ಹಾಗಾದರೆ, ಪಣ ಕಟ್ಟು."

" ಒಳ್ಳೆಯದು, ಕಟ್ಟುತ್ತೇನೆ" ಎಂದು ಅವನು ಸಾವಿರ ಪಣ ಕಟ್ಟಿದನು.

ಅವನು ನೂರು ಗಾಡಿಗಳ ತುಂಬ ಮರಳು ಹರಳು ಕಲ್ಲುಗಳನ್ನು ತುಂಬಿ, ಒಂದರ ಹಿಂದೆ ಒಂದನ್ನು ನಿಲ್ಲಿಸಿ, ಹಗ್ಗದಿಂದ ಒಂದನ್ನು ಒಂದಕ್ಕೆ ಕಟ್ಟಿದನು. ನಂದಿವಿಶಾಲನಿಗೆ ಸ್ನಾನಮಾಡಿಸಿ, ಗಂಧದಿಂದ ಮೈಮೇಲೆ ಐದು ಬೆರಳುಗಳ ಗುರುತುಮಾಡಿ, ಕೊರಳಿಗೆ ಮಾಲೆಯನ್ನು ಅಲಂಕರಿಸಿ, ಮುಂದಿನ ಗಾಡಿಯ ನೊಗಕ್ಕೆ ಅದು ಒಂದನ್ನೇ ಹೂಡಿ, ತಾನು ನೊಗದ ಮೇಲೆ ಕುಳಿತು, ಬಾರುಕೋಲನ್ನು ಮೇಲೆತ್ತಿ, "ನಡೆ, ನಡೆ, ಪೋಲಿ! ಎಳೆ, ಎಳೆ, ಪೋಲಿ!" ಎಂದನು.

ಬೋಧಿಸತ್ತ್ವನು "ಪೋಲಿಯಲ್ಲದ ನನ್ನನ್ನು ಪೋಲಿಯೆನ್ನುವನಲ್ಲ!" ಎಂದು ನಾಲ್ಕು ಕಾಲುಗಳನ್ನೂ ಊರಿ, ಕಂಬದಂತೆ ಅಲ್ಲಾಡದೆ ನಿಂತುಬಿಟ್ಟನು.

ಶ್ರೇಷ್ಠಿ ಅದೇ ಗಳಿಗೆಯೆ ಬ್ರಾಹ್ಮಣನಿಂದ ಸಾವಿರವನ್ನು ತರಿಸಿಬಿಟ್ಟನು. ಬ್ರಾಹ್ಮಣನು ಸಾವಿರವನ್ನು ಕಳೆದುಕೊಂಡು, ಎತ್ತನ್ನು ಬಿಚ್ಚಿ ಮನೆಗೆ ಹೋಗಿ ಶೋಕಪಡುತ್ತಾ ಮಲಗಿದನು.

ನಂದಿವಿಶಾಲನು ತಿರುಗಾಡಿಕೊಂಡು ಬಂದು, ಬ್ರಾಹ್ಮಣನು ದುಃಖಪಡುವುದನ್ನು ಕಂಡು, ಬಳಿ ಸಾರಿ, " ಏಕೆ ಬ್ರಾಹ್ಮಣ? ನಿದ್ದೆ ಮಾಡುತ್ತಿರುವೆಯ?" ಎಂದು ಕೇಳಿತು.

" ಸಾವಿರವನ್ನು ಕಳೆದುಕೊಂಡ ನನಗೆ ನಿದ್ರೆಯೆಲ್ಲಿ?"

" ಬ್ರಾಹ್ಮಣ, ನಾನು ಇಷ್ಟು ಕಾಲ ನಿನ್ನ ಮನೆಯಲ್ಲಿ ವಾಸಿಸಿರುವೆನಲ್ಲ! ಹಿಂದೆ ಎಂದಾದರೂ ಏನಾದರೂ ಪಾತ್ರೆ ಒಡೆದುದುಂಟೆ? ತುಳಿದುದುಂಟೆ? ಸೆಗಣಿ ಗಂಜಳಗಳನ್ನು ಹಾಕಬಾರದ ಕಡೆ ಹಾಕಿದುದುಂಟೆ?"

" ಇಲ್ಲ, ಅಪ್ಪ!"

" ಹಾಗಾದರೆ, ನನ್ನನ್ನು ಏಕೆ ಪೋಲಿಯೆಂದು ಕರೆದೆ? ನಿನ್ನದೇ ದೋಷ, ನನ್ನದು ಏನೂ ಇಲ್ಲ. ಹೋಗಿ, ಅವನೊಡನೆ ಎರಡು ಸಾವಿರ ಪಣ ಕಟ್ಟು. ಆದರೆ ಪೋಲಿಯಲ್ಲದ ನನ್ನನ್ನು ಪೋಲಿಯೆಂದು ಮಾತ್ರ ಕರೆಯಬೇಡ."

ಬ್ರಾಹ್ಮಣನು ಅದರ ಮಾತು ಕೇಳಿ, ಹೋಗಿ, ಎರಡುಸಾವಿರ ಪಣ ಕಟ್ಟಿ, ಮೊದಲಿನಂತೆಯೇ ನೂರು ಗಾಡಿಗಳನ್ನು ಒಟ್ಟಿಗೆ ಕಟ್ಟಿ, ನಂದಿವಿಶಾಲನಿಗೆ ಅಲಂಕರಿಸಿ, ಮೊದಲ ಗಾಡಿಯ ನೊಗಕ್ಕೆ ಹೂಡಿದನು. ಅನಂತರ ತಾನು ನೊಗದ ಬಳಿ ಕುಳಿತುಕೊಂಡು, ನಂದಿವಿಶಾಲನ ಮೈ ಸವರುತ್ತಾ " ನಡೆ, ನಡೆ, ಜಾಣ! ಎಳೆ, ಎಳೆ, ಜಾಣ!" ಎಂದನು.

ಬೋಧಿಸತ್ತ್ವನು ಒಂದಾಗಿ ಕಟ್ಟಿದ್ದ ನೂರು ಗಾಡಿಗಳನ್ನೂ ಒಂದೇ ಏಟಿಗೆ ಎಳೆದು, ಮೊದಲಿನ ಗಾಡಿ ನಿಂತಿದ್ದ ಸ್ಥಾನದಲ್ಲಿ ಕಡೆಯ ಗಾಡಿಯನ್ನು ತಂದು ನಿಲ್ಲಿಸಿದನು.

ಆ ಗೋಧನವಿದ್ದ ಶ್ರೇಷ್ಠಿ ಸೋತು, ಬ್ರಾಹ್ಮಣನಿಗೆ ಎರಡುಸಾವಿರ ಕೊಟ್ಟನು. ಇತರ ಜನರೂ ಬೋಧಿಸತ್ತ್ವನಿಗೆ ಬಹುಧನ ಕೊಟ್ಟರು. ಎಲ್ಲವೂ ಬ್ರಾಹ್ಮಣನಿಗೇ ಆಯಿತು. ಹೀಗೆ ಅವನಿಗೆ ಬೋಧಿಸತ್ತ್ವನಿಂದಾಗಿ ಬಹು ಧನ ಲಭಿಸಿತು.

# ಕೃಷ್ಣ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರುವಾಗ, ಬೋಧಿಸತ್ತ್ವನು ಹಸುವಿನ ಹೊಟ್ಟೆಯಲ್ಲಿ ಜನ್ಮ ತಾಳಿದನು. ಅವನು ಇನ್ನೂ ಕರುವಾಗಿರುವಾಗಲೇ ಅವನ ಒಡೆಯರು, ಒಬ್ಬ ಮುದುಕಿಯ ಮನೆಯಲ್ಲಿ ತಾವು ವಾಸಮಾಡಿದುದಕ್ಕೆ ಕೊಡಬೇಕಾದ ಹಣವನ್ನು ತೀರಿಸಲು ಅವನನ್ನು ಅವಳಿಗೆ ಕೊಟ್ಟರು. ಅವಳು ಅದಕ್ಕೆ ಗಂಜಿ ಅನ್ನ ಮೊದಲಾದುವನ್ನು ತಿನ್ನಿಸುತ್ತಾ ಮಗುವಿನಂತೆ ಆರೈಕೆ ಮಾಡಿ ಬೆಳೆಸಿದಳು. ಅದು "ಅಜ್ಜಿಯ ಕರಿಯು" ಎಂದು ಪ್ರಸಿದ್ಧವಾಯಿತು. ಬೆಳೆದು, ಅಂಜನದ ಬಣ್ಣವಾಗಿ ಗ್ರಾಮದ ಗೋವುಗಳೊಡನೆ ಅದು ತಿರುಗಾಡುತ್ತಿತ್ತು. ಅದರ ನಡತೆ, ಗುಣ ಚೆನ್ನಾಗಿತ್ತು. ಗ್ರಾಮದ ಮಕ್ಕಳು ಅದರ ಕೊಂಬುಗಳನ್ನೋ ಕಿವಿಗಳನ್ನೋ ಗಂಗೆದೊವಲನ್ನೋ ಹಿಡಿದು ತೂಗಾಡುವರು, ಬಾಲ ಹಿಡಿದು ಆಡುವರು, ಬೆನ್ನ ಮೇಲೆ ಕುಳಿತುಕೊಳ್ಳುವರು.

ಅದು ಒಂದು ದಿನ "ನನ್ನ ತಾಯಿ ಬಡವೆ. ನನ್ನನ್ನು ಕಷ್ಟಪಟ್ಟು ಮಗನಂತೆ ಪೋಷಿಸಿರುವಳು. ನಾನು ಇವಳಿಗೆ ನನ್ನ ಕೂಲಿ ಕೊಟ್ಟು, ಇವಳನ್ನು ದಾರಿದ್ರ್ಯದಿಂದ ಬಿಡಿಸುತ್ತೇನೆ" ಎಂದು ಚಿಂತಿಸಿತು. ಅದೇ ದಿನದಿಂದ ಅದು ಕೂಲಿಗಾಗಿ ಓಡಿಯಾಡಿತು.

ಆಗ ಒಂದು ದಿನ ಒಬ್ಬ ಸಾರ್ಥವಾಹಪುತ್ರನು ಐನೂರು ಗಾಡಿಗಳೊಡನೆ ಹಾಯುವುದಕ್ಕೆ ಕಠಿನವಾದ ಹಾಯಿಗಡುವಿಗೆ ಬಂದನು. ಅವನ ಎತ್ತುಗಳಿಗೆ ಗಾಡಿಯನ್ನು ಮೇಲೆಳೆಯಲು ಆಗಲಿಲ್ಲ; ಐನೂರು ಗಾಡಿಗಳ ಎತ್ತುಗಳನ್ನೂ ಸಾಲಾಗಿ ಹೂಡಿದರೂ ಒಂದು ಗಾಡಿಯನ್ನೂ ಮೇಲೆಳೆಯಲು ಆಗಲಿಲ್ಲ.

ಆಗ ಬೋಧಿಸತ್ತ್ವನು ಗ್ರಾಮದ ಗೋವುಗಳೊಡನೆ ಆ ಹಾಯಿಗಡುವಿನ ಸಮೀಪದಲ್ಲಿ ತಿರುಗುತ್ತಿದ್ದನು. ಸಾರ್ಥವಾಹಪುತ್ರನಿಗೆ ಗೋವುಗಳ ಲಕ್ಷಣ ತಿಳಿಯುತ್ತಿತ್ತು. ಅವನು "ಈ ಗೋವುಗಳ ನಡುವೆ ಈ ಗಾಡಿಗಳನ್ನು ಮೇಲೆಳೆಯಲು ಸಮರ್ಥವಾದ ಗೂಳಿ ಯಾವುದಾದರೂ ಇದೆಯೆ?" ಎಂದು ಗಮನಿಸುತ್ತಾ ಬೋಧಿಸತ್ತ್ವನನ್ನು ಕಂಡು, "ಇದು

ಒಳ್ಳೆಯ ಜಾತಿಯಲ್ಲಿ ಹುಟ್ಟಿದುದು, ನನ್ನ ಗಾಡಿಗಳನ್ನು ಮೇಲೆಳೆಯ ಬಲ್ಲುದು. ಇದರ ಒಡೆಯರು ಯಾರು?" ಎಂದು ಗೊಲ್ಲರನ್ನು ಕೇಳಿದನು.

"ಇದರ ಒಡೆಯರಾರು? ನಾನು ಇದನ್ನು ಈ ಗಾಡಿಗಳಿಗೆ ಹೂಡಿ, ಗಾಡಿಯನ್ನು ಮೇಲೆಳೆಸಿ, ವೇತನ ಕೊಡುತ್ತೇನೆ" ಎಂದನು.

ಅವರು "ಹಿಡಿದು ಹೂಡಿಕೊ. ಇಲ್ಲಿ ಇದಕ್ಕೆ ಯಾರೂ ಒಡೆಯರಿಲ್ಲ" ಎಂದರು.

ಅವನು ಅದರ ಮೂಗನ್ನು ಹಗ್ಗದಿಂದ ಕಟ್ಟಿ ಎಳೆದರೂ ಅದನ್ನು ಅಲ್ಲಾಡಿಸಲಾಗಲಿಲ್ಲ.,ಬೋಧಿಸತ್ತ್ವನಾದರೋ "ವೇತನ ಹೇಳಿದ ಮೇಲೆ ಹೋಗೋಣ"ವೆಂದು ಹೋಗಲಿಲ್ಲ.

ಸಾರ್ಥವಾಹಪುತ್ರನು ಅದರ ಉದ್ದೇಶವನ್ನು ತಿಳಿದು, "ಸ್ವಾಮಿ, ನೀನು ಐನೂರು ಗಾಡಿಗಳನ್ನು ಮೇಲೆಳೆದರೆ, ಒಂದೊಂದು ಗಾಡಿಗೆ ಎರಡೆರಡು ನಾಣ್ಯ ಕೂಲಿಯಂತೆ ಸಾವಿರ ಕೊಡುವೆನು" ಎಂದನು.

ಆಗ ಬೋಧಿಸತ್ತ್ವನು ತಾನಾಗಿಯೇ ಬಂದನು. ಆಗ ಆ ಜನರು ಅವನನ್ನು ಗಾಡಿಗಳಿಗೆ ಹೂಡಿದರು. ಆಗ ಅವನು ಒಂದೇ ಏಟಿಗೆ ಅವುಗಳನ್ನು ಮೇಲೆಳೆದು ದಡದಲ್ಲಿ ನಿಲ್ಲಿಸಿದನು. ಹೀಗೆ ಎಲ್ಲಾ ಗಾಡಿಗಳನ್ನೂ ಮೇಲೆಳೆದನು.

ಸಾರ್ಥವಾಹಪುತ್ರನು ಒಂದೊಂದು ಗಾಡಿಗೆ ಒಂದೊಂದರಂತೆ ಐದುನೂರನ್ನು ಗಂಟುಮಾಡಿ ಅದರ ಕತ್ತಿಗೆ ಕಟ್ಟಿದನು. ಅದು "ಇವನು ನನ್ನೊಡನೆ ನಿಷ್ಕರ್ಷೆಮಾಡಿದ್ದಂತೆ ಕೂಲಿ ಕೊಟ್ಟಿಲ್ಲ. ಆದ್ದರಿಂದ ಇವನನ್ನು ಹೋಗಗೊಡುವುದಿಲ್ಲ" ಎಂದು ಹೋಗಿ, ಎಲ್ಲಕ್ಕೂ ಮೊದಲಿನ ಗಾಡಿಯ ಮುಂದೆ ದಾರಿಗೆ ಅಡ್ಡಲಾಗಿ ನಿಂತಿತು. ಓಡಿಸಲು ಯತ್ನಿಸಿದರೂ ಅದನ್ನು ಓಡಿಸಲಾಗಲಿಲ್ಲ.

ಸಾರ್ಥವಾಹಪುತ್ರನು "ತನಗೆ ಕೊಟ್ಟ ಕೂಲಿ ಕಡಮೆಯೆಂದು ತಿಳಿದ ಹಾಗಿದೆ" ಎಂದು ಒಂದು ಬಟ್ಟೆಯಲ್ಲಿ ಸಾವಿರ ಕೂಲಿಯನ್ನು ಕಟ್ಟಿ, "ಇದು ನೀನು ಗಾಡಿ ಎಳೆದುದಕ್ಕೆ" ಎಂದು ಕೊರಳಲ್ಲಿ ಕಟ್ಟಿದನು. ಅದು ಆ ಸಾವಿರದ ಗಂಟನ್ನು ತೆಗೆದುಕೊಂಡು ತಾಯಿ ಬಳಿಗೆ ಹೋಯಿತು.

ಗ್ರಾಮದ ಮಕ್ಕಳು "ಅಜ್ಜಿಯ ಕರಿಯನ ಕತ್ತಿನಲ್ಲಿ ಇದು ಏನು?" ಎಂದು ಬೋಧಿಸತ್ತ್ವನ ಬಳಿಗೆ ಬಂದರು. ಅವನು ಅವರನ್ನು ಅಟ್ಟಿಸಿಕೊಂಡು ದೂರದಿಂದಲೇ ಓಡಿ ತಾಯಿ ಬಳಿ ಹೋದನು. ಐನೂರು ಗಾಡಿಗಳನ್ನು ಮೇಲೆಳೆದು ಕಷ್ಟಪಟ್ಟು ಅವನ ಕಣ್ಣು ಕೆಂಪಾಗಿತ್ತು.

ಅವಳು ಅವನ ಕತ್ತಿನಲ್ಲಿ ಸಾವಿರದ ಚೀಲವನ್ನು ಕಂಡು, "ಅಪ್ಪ, ಇದು ನಿನಗೆಲ್ಲಿ ಸಿಕ್ಕಿತು?" ಎಂದು ಗೊಲ್ಲರ ಮಕ್ಕಳನ್ನು ಕೇಳಿ, "ಅಪ್ಪ, ನೀನು ಸಂಪಾದಿಸಿದ ಕೂಲಿಯಿಂದ ನಾನು ಬದುಕಬೇಕೆ? ಇಂಥ ದುಃಖವನ್ನು ಏಕೆ ಅನುಭವಿಸಿದೆ?" ಎಂದು ಹೇಳಿ, ಬೋಧಿಸತ್ತ್ವನನ್ನು ಬಿಸಿನೀರಿನಿಂದ ಸ್ನಾನಮಾಡಿಸಿದಳು, ಮೈಗೆಲ್ಲಾ ತೈಲ ಹಚ್ಚಿದಳು, ಕುಡಿಯುವುದಕ್ಕೂ ತಿನ್ನುವುದಕ್ಕೂ ಕೊಟ್ಟಳು. ಆಯುಸ್ಸು ಮುಗಿದ ಮೇಲೆ, ಬೋಧಿಸತ್ತ್ವನೊಡನೆ ತನ್ನ ಕರ್ಮಗಳಿಗೆ ಅನುಸಾರವಾಗಿ ಹೋದಳು.

# ನಾಮಸಿದ್ಧಿ

ಹಿಂದೆ ಬೋಧಿಸತ್ತ್ವನು ತಕ್ಷಶಿಲೆಯಲ್ಲಿ ಒಬ್ಬ ಆಚಾರ್ಯನಾಗಿ ಇದ್ದನು. ಅವನ ಹೆಸರು ದಿಕ್ಕುದಿಕ್ಕಿಗೂ ಹಬ್ಬಿತ್ತು. ಅವನು ಐನೂರು ಶಿಷ್ಯರಿಗೆ ಮಂತ್ರ ಓದಿಸುತ್ತಿದ್ದನು.

ಅವರಲ್ಲಿ ಒಬ್ಬ ಶಿಷ್ಯನಿಗೆ ಪಾಪಕನೆಂದು ಹೆಸರು. ಅವನನ್ನು 'ಬಾ ಪಾಪಕ, ಹೋಗು ಪಾಪಕ' ಎಂದು ಕರೆಯುತ್ತಿರಲು, ಅವನು 'ನನ್ನ ಹೆಸರು ಅವಮಂಗಳವಾದ್ದು, ಬೇರೆ ಹೆಸರನ್ನು ತಂದುಕೊಳ್ಳುವೆನು' ಎಂದು ಆಚಾರ್ಯನ ಬಳಿ ಬಂದು, "ಆಚಾರ್ಯ, ನನ್ನ ಹೆಸರು ಅವಮಂಗಲ ವಾದ್ದು. ಬೇರೆ ಹೆಸರು ಇಡಿರಿ" ಎಂದನು.

ಆಗ ಆಚಾರ್ಯನು ಅವನನ್ನು ಕುರಿತು "ಹೋಗಪ್ಪ. ದೇಶ ಸಂಚಾರಮಾಡಿಕೊಂಡು ನಿನಗೆ ಅಭಿರುಚಿಯಾದ ಒಂದು ಮಂಗಲವಾದ ಹೆಸರನ್ನು ಹಿಡಿದುಕೊಂಡು ಬಾ. ಬಂದ ಬಳಿಕ ನಿನ್ನ ಹೆಸರನ್ನು ಬದಲು ಮಾಡಿ ಬೇರೆ ಹೆಸರಿಡುವೆನು" ಎಂದನು.

ಅವನು ಹಾಗೆಯೇ ಆಗಲೆಂದು ಬುತ್ತಿಯನ್ನು ತೆಗೆದುಕೊಂಡು ಹೊರಟು ಗ್ರಾಮದಿಂದ ಗ್ರಾಮಕ್ಕೆ ತಿರುಗುತ್ತಾ ಒಂದು ನಗರ ಸೇರಿದನು.

ಅಲ್ಲಿ ಜೀವಕನೆಂಬ ಹೆಸರಿನವನು ಕಾಲವಾಗಿದ್ದನು. ಅವನನ್ನು ಅವನ ಜ್ಞಾತಿಜನರು ಸುಡುಗಾಡಿಗೆ ಒಯ್ಯುವುದನ್ನು ಕಂಡು, "ಇವನಾವ ಹೆಸರಿನವನು?" ಎಂದು ಕೇಳಿದನು.

"ಜೀವಕನೆಂಬ ಹೆಸರಿನವನು" ಎಂದರು.

"ಜೀವಕನೂ ಸಾಯುವನೆ?"

"ಜೀವಕನೂ ಸಾಯುತ್ತಾನೆ, ಅಜೀವಕನೂ ಸಾಯುತ್ತಾನೆ. ಹೆಸರು ಬರಿಯ ಗುರುತಿಗೆ ಮಾತ್ರ. ನೀನು ಬುದ್ಧಿಯಿಲ್ಲದವನೆಂದು ಕಾಣುತ್ತದೆ".

ಅವನು ಆ ಮಾತು ಕೇಳಿ ಹೆಸರಿನ ಬಗ್ಗೆ ಮನಸ್ಸು ಮಧ್ಯಸ್ಥವಾಗಿ ನಗರದೊಳಕ್ಕೆ ಹೋದನು.

ಅಲ್ಲಿ ಒಬ್ಬ ದಾಸಿ ತನ್ನ ಕೂಲಿಯನ್ನು ತಂದುಕೊಡಲಿಲ್ಲವೆಂದು ಅವಳ ಒಡತಿ ಅವಳನ್ನು ಬಾಗಿಲಲ್ಲಿ ನಿಲ್ಲಿಸಿ ಹಗ್ಗದಿಂದ ಹೊಡೆಯುತ್ತಿದ್ದಳು. ಆ ದಾಸಿಯ ಹೆಸರು ಧನಪಾಲಿ. ಅವನು ದಾರಿಯಲ್ಲಿ ಬಂದು ಅವಳನ್ನು ಹೊಡೆಯುವುದನ್ನು ಕಂಡನು.

"ಇವಳನ್ನು ಏಕೆ ಹೊಡೆಯುವಿರಿ ?" ಎಂದನು.

"ಕೂಲಿ ತಂದುಕೊಡಲು ಇವಳಿಗೆ ಆಗಿಲ್ಲ".

"ಇವಳ ಹೆಸರೇನು ?"

"ಧನಪಾಲಿ".

"ಹೆಸರು ಧನಪಾಲಿಯಾದರೂ ಕೂಲಿ ತಂದು ಕೊಡಲು ಆಗಲಿಲ್ಲವೆ ?"

"ಹೆಸರು ಧನಪಾಲಿಯಾಗಲಿ ಅಧನಪಾಲಿಯಾಗಲಿ ಹಣಕ್ಕೆ ಕೊರತೆ. ಹೆಸರು ಬರಿಯ ಗುರುತಿಗೆ ಮಾತ್ರ. ನೀನು ಬದ್ಧಿಯಿಲ್ಲದವನೆಂದು ಕಾಣುತ್ತದೆ".

ಅವನು ಹೆಸರಿನ ಬಗ್ಗೆ ಇನ್ನೂ ಮಧ್ಯಸ್ತನಾಗಿ ನಗರದಿಂದ ಹೊರಗೆ ಹೊರಟನು.

ಹೊರಟು ಮಾರ್ಗದಲ್ಲಿ ನಡೆಯುತ್ತಾ ದಾರಿಯ ನಡುವೆ ದಾರಿ ತಿಳಿಯದವನೊಬ್ಬನನ್ನು ಕಂಡು, "ಅಯ್ಯಾ, ಏನು ಮಾಡುತ್ತಾ ಸುತ್ತಾಡುತ್ತಿರುವೆ ?" ಎಂದನು.

"ದಾರಿ ತಿಳಿಯದೆ ಇದ್ದೇನೆ, ಸ್ವಾಮಿ".

"ಹಾಗಾದರೆ, ನಿನ್ನ ಹೆಸರೇನು ?"

"ಪಂಥಕನೆಂದು ಹೆಸರು".

"ಪಂಥಕನಾದರೂ ದಾರಿ ತಿಳಿಯದೆ ಹೋಗುವನೆ ?"

"ಪಂಥಕನಾಗಲಿ ಅಪಂಥಕನಾಗಲಿ ಮಾರ್ಗ ತಿಳಿಯದೆಹೋಗುವನು. ಹೆಸರು ಬರಿಯ ಗುರುತಿಗೆ ಮಾತ್ರ. ನೀನು ಬುದ್ಧಿಯಿಲ್ಲದವನೆಂದು ಕಾಣುತ್ತದೆ".

ಆಗ ಅವನು ಹೆಸರಿನ ಬಗ್ಗೆ ಅತಿಮಧ್ಯಸ್ತನಾಗಿ ಬೋಧಿಸತ್ತ್ವನ ಬಳಿ ಹೋದನು.

" ಏನಪ್ಪ ? ಇಷ್ಟವಾದ ಹೆಸರನ್ನು ಕೊಂಡು ಬಂದೆಯ ? " ಎಂದು ಆಚಾರ್ಯನು ಕೇಳಿದನು.

ಅದಕ್ಕೆ ಪಾಪಕನು " ಆಚಾರ್ಯ, ಹೆಸರು ಜೀವಕನಾಗಲಿ ಅಜೀವಕನಾಗಲಿ, ಅವನು ಸಾಯುವನು. ಹೆಸರು ಧನಪಾಲಿಯಾಗಲಿ ಅಧನಪಾಲಿಯಾಗಲಿ ಹಣಕ್ಕೆ ಕೊರತೆ. ಹೆಸರು ಪಂಥಕನೆಂದಿರಲಿ ಅಪಂಥಕನೆಂದಿರಲಿ ದಾರಿ ತಪ್ಪುವನು. ಹೆಸರು ಬರಿಯ ಗುರುತಿಗೆ ಮಾತ್ರ. ಹೆಸರಿನಿಂದ ಏನೂ ಸಿದ್ಧಿಯಿಲ್ಲ, ಕರ್ಮದಿಂದಲೇ ಸಿದ್ಧಿ. ನನಗೆ ಬೇರೆ ಹೆಸರು ಬೇಡ, ನನಗೆ ಇದೇ ಹೆಸರಿರಲಿ " ಎಂದನು.

ಆಗ ಬೋಧಿಸತ್ತ್ವನು ಅವನು ಕಂಡುದನ್ನೂ ಮಾಡಿದುದನ್ನೂ ಕೂಡಿಸಿ, " ಜೀವಕನ ಮರಣವನ್ನೂ ಧನಪಾಲಿಯ ದಾರಿದ್ರ್ಯವನ್ನೂ ಪಂಥಕನು ದಾರಿ ತಿಳಿಯದುದನ್ನೂ ಕಂಡು ಪಾಪಕನು ಹಿಂದಿರುಗಿ ಬಂದನು " ಎಂದು ಹೇಳಿದನು.

# ಉಭಯತೋಭ್ರಷ್ಟ

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರುವಾಗ ಬೋಧಿಸತ್ತ್ವನು ವೃಕ್ಷದೇವತೆಯಾಗಿ ಜನ್ಮತಾಳಿದನು.

ಆಗ ಒಂದಾನೊಂದು ಗ್ರಾಮದಲ್ಲಿ ಬೆಸ್ತರು ವಾಸಿಸುತ್ತಿದ್ದರು. ಅವರಲ್ಲಿ ಒಬ್ಬ ಬೆಸ್ತನು ತನ್ನ ಗಾಳವನ್ನು ಕೊಂಡು, ತನ್ನ ಚಿಕ್ಕ ಹುಡುಗ ನೊಡನೆ ಹೋಗಿ, ಬೆಸ್ತರಿಗೆ ಎಲ್ಲೆಲ್ಲಿ ಮೀನು ಚೆನ್ನಾಗಿ ಸಿಕ್ಕಬಹುದೋ ಅಲ್ಲಲ್ಲಿ ಗಾಳ ಹಾಕಿದನು. ಗಾಳ ನೀರಿನಿಂದ ಮುಚ್ಚಿಹೋಗಿದ್ದ ಒಂದಾ ನೊಂದು ಮೀನಿಗೆ ಸಿಕ್ಕಿಕೊಂಡಿತು.

ಬೆಸ್ತನು ಅದನ್ನು ಎಳೆಯಲು ಕೈಲಾಗದೆ, "ಈ ಗಾಳಕ್ಕೆ ಮಹಾ ಮತ್ಸ್ಯ ಸಿಕ್ಕಿಕೊಂಡಿರಬೇಕು. ಮಗನನ್ನು ಅವನ ತಾಯಿಯೆಡೆಗೆ ಕಳಿಸಿ ಅಕ್ಕಪಕ್ಕದವರೊಡನೆ ಜಗಳವಾಡಿಸುವೆನು. ಅದರಿಂದ ಯಾರೂ ಬಂದು ನನ್ನ ಬೇಟೆಯಲ್ಲಿ ಭಾಗ ಕೇಳುವುದಿಲ್ಲ" ಎಂದು ಚಿಂತಿಸಿ, "ಹೋಗಪ್ಪ, ನನಗೆ ಮಹಾಮತ್ಸ್ಯ ಸಿಕ್ಕಿರುವುದನ್ನು ನಿನ್ನ ತಾಯಿಗೆ ಹೇಳು. ಅಕ್ಕಪಕ್ಕದವರೊಡನೆ ಕಲಹವಾಡಲಿ" ಎಂದು ಮಗನನ್ನು ಕಳುಹಿ, ಗಾಳವನ್ನು ಎಳೆಯಲು ಕೈಲಾಗದೆ, ಹಗ್ಗ ಕಿತ್ತುಹೋಗುವು ದೆಂಬ ಭಯದಿಂದ ಮೇಲೆ ಹೊದ್ದಿದ್ದ ಬಟ್ಟೆಯನ್ನು ನೆಲದ ಮೇಲಿರಿಸಿ, ನೀರಿಗಿಳಿದು, ಮೀನಿನ ಆಸೆಯಿಂದ ಅದನ್ನು ಎತ್ತಿಕೊಳ್ಳುವಾಗ ಆ ಮೀನಿನ ಏಟುಬಿದ್ದು ಎರಡು ಕಣ್ಣೂ ಒಡೆಯಿತು.

ನೆಲದ ಮೇಲಿದ್ದ ಬಟ್ಟೆಯನ್ನು ಒಬ್ಬ ಕಳ್ಳ ಒಯ್ದನು. ಅವನು ವೇದನೆಯಿಂದ ಮತ್ತನಾಗಿ ಕೈಗಳಿಂದ ಕಣ್ಣುಗಳನ್ನು ಒತ್ತಿಹಿಡಿದು ಕೊಂಡು, ನೀರಿನಿಂದ ಮೇಲೆ ಬಂದು ಕಂಪಿಸುತ್ತಾ ಬಟ್ಟೆಗಳನ್ನು ಹುಡುಕಿದನು.

ಅತ್ತ ಅವನ ಹೆಂಡತಿಯೂ ಕಲಹಮಾಡಿಕೊಂಡು, "ಏನೂ ಕಾರಣ ವಿಲ್ಲದೆ ಜಗಳ ತೆಗೆಯುವೆನು" ಎಂದು, ಒಂದೇ ಕಿವಿಯಲ್ಲಿ ತಾಳೆಯ ಎಲೆಯನ್ನು ಅಲಂಕಾರವಾಗಿ ಸಿಕ್ಕಿಸಿಕೊಂಡು, ಒಂದೇ ಕಣ್ಣಿಗೆ

ಬಾಣಲಿಯ ಮಸಿಯನ್ನು ಹಚ್ಚಿಕೊಂಡು, ನಾಯನ್ನು ತೊಡೆಯ ಮೇಲೆತ್ತಿಕೊಂಡು, ನೆರೆಯವರ ಮನೆಗೆ ಬಂದಳು.

ಆಗ ಅವಳ ಸಂಗಾತಿಯೊಬ್ಬಳು "ಇದೇನು, ಒಂದೇ ಕಿವಿಗೆ ತಾಳೆಯೆಲೆ? ಒಂದೇ ಕಣ್ಣಿಗೆ ಕಾಡಿಗೆ? ಮುದ್ದುಕಂದನಂತೆ ನಾಯನ್ನು ತೊಡೆಯ ಮೇಲೆತ್ತಿಕೊಂಡು ಮನೆಯಿಂದ ಮನೆಗೆ ಹೋಗುವೆ? ಏನು ಹುಚ್ಚಿಯಾದೆಯಾ?" ಎಂದಳು.

"ನಾನೇನೂ ಹುಚ್ಚಿಯಲ್ಲ, ನೀನು ಅಕಾರಣವಾಗಿ ನನ್ನನ್ನು ಬೈದು, ನಿಂದಿಸುವೆ. ಈಗ ಅದಕ್ಕಾಗಿ ಗ್ರಾಮಭೋಜಕನ ಹತ್ತಿರ ಹೋಗಿ ನಿನಗೆ ಎಂಟು ಹಣ ದಂಡ ಹಾಕಿಸುವೆನು" ಎಂದು ಹೀಗೆ ಕಲಹ ಮಾಡಿಕೊಂಡು ಇಬ್ಬರೂ ಗ್ರಾಮಭೋಜಕನ ಬಳಿಗೆ ಹೋದರು.

ಕಲಹವನ್ನು ವಿಚಾರಿಸಲು, ಅವಳ ತಲೆಯ ಮೇಲೆಯೇ ದಂಡ ಬಿತ್ತು. ಆಗ ಅವಳನ್ನು ಬಂಧಿಸಿ, 'ದಂಡ ಕೊಡು' ಎಂದು ಬಡಿಯುಲಾರಂಭಿಸಿದರು.

ವೃಕ್ಷದೇವತೆಯು ಗ್ರಾಮದಲ್ಲಿ ಅವಳಿಗಾದುದನ್ನೂ ಕಾಡಿನಲ್ಲಿ ಅವಳ ಗಂಡನ ವ್ಯಸನವನ್ನೂ ಕಂಡು, ಮರದ ಸೀಳಿನಲ್ಲಿ ನಿಂತು, "ಅಯ್ಯಾ, ನೀನು ನೆಲದಲ್ಲೂ ಕೆಟ್ಟೆ, ನೀರಿನಲ್ಲೂ ಕೆಟ್ಟೆ. ಉಭಯತೋಭ್ರಷ್ಟನಾದೆ" ಎಂದು ಹೇಳುತ್ತಾ, "ಕಣ್ಣು ಒಡೆಯಿತು. ಬಟ್ಟೆ ಹೋಯಿತು. ಹೆಂಡತಿಗೆ ಬಂಧನವಾಗಿ ದಂಡ ಬಿತ್ತು. ಹೀಗೆ ನೀನು ನೀರಿನಲ್ಲೂ ಕೆಟ್ಟೆ, ನೆಲದಲ್ಲೂ ಕೆಟ್ಟೆ" ಎಂದಿತು.

# ಮಹಾಸಾರ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಎಲ್ಲಾ ವಿದ್ಯೆಗಳಲ್ಲೂ ಪ್ರವೀಣನಾಗಿ ಅವನಿಗೆ ಅಮಾತ್ಯನಾದನು.

ಆಗ ಒಂದು ದಿವಸ, ರಾಜನು ಮಹತ್ತಾದ ಪರಿವಾರದೊಡನೆ ಉದ್ಯಾನಕ್ಕೆ ಹೋಗಿ, ವನಾಂತರದಲ್ಲಿ ತಿರುಗುತ್ತಾ ಜಲಕ್ರೀಡೆಯಾಡಲು ಬಯಕೆಯಾಗಿ, ಮಂಗಲಪುಷ್ಕರಿಣಿಯಲ್ಲಿ ಇಳಿದು, ಅಂತಃಪುರಕ್ಕೆ ಹೇಳಿ ಕಳಿಸಿದನು. ಅವನ ಸ್ತ್ರೀಯರು ತಮ್ಮ ತಲೆ ಕೊರಳು ಮೊದಲಾದವುಗಳ ಆಭರಣಗಳನ್ನು ಕಳಚಿ, ಮೇಲುಹೊದಿಕೆಗಳಲ್ಲಿಟ್ಟು, ಪೆಟ್ಟಿಗೆಗಳಲ್ಲಿ ಹಾಕಿ, ದಾಸಿಯರನ್ನು ಕಾವಲಿರಿಸಿ ಪುಷ್ಕರಿಣಿಗೆ ಇಳಿದರು.

ಆಗ ಒಂದು ಉದ್ಯಾನಮರ್ಕಟವು ಕೊಂಬೆಯ ನಡುವೆ ಕುಳಿತು, ದೇವಿಯು ಆಭರಣಗಳನ್ನು ಕಳಚಿ ಬಟ್ಟೆಗಳೊಡನೆ ಪೆಟ್ಟಿಗೆಯಲ್ಲಿಡುವುದನ್ನು ಕಂಡು, ಅವಳ ಮುಕ್ತಾಹಾರವನ್ನು ಧರಿಸಲು ಬಯಸಿ, ದಾಸಿಯು ಪ್ರಮತ್ತಳಾಗುವುದನ್ನು ನೋಡುತ್ತಾ ಕುಳಿತಿತ್ತು.

ದಾಸಿಯೂ ಕಾಪಾಡಲು ಅಲ್ಲಿ ಇಲ್ಲಿ ನೋಡುತ್ತಾ, ಕುಳಿತಂತೆಯೇ ತೂಕಡಿಸತೊಡಗಿದಳು. ಆಗ ಹೆಣ್ಣುಕೋತಿ ಅವಳು ಎಚ್ಚರ ತಪ್ಪಿದುದನ್ನು ತಿಳಿದು, ಗಾಳಿಯ ವೇಗದಿಂದ ಇಳಿದು, ಮಹಾಮುಕ್ತಾಹಾರವನ್ನು ಕೊರಳಿಗೆ ಹಾಕಿಕೊಂಡು, ಗಾಳಿಯ ವೇಗದಿಂದ ಮೇಲೆ ಹಾರಿ, ಕೊಂಬೆಯ ನಡುವೆ ಕುಳಿತು, ಇತರ ಹೆಣ್ಣುಕೋತಿಗಳು ಕಂಡಾವೆಂಬ ಭಯದಿಂದ ಅದನ್ನು ಒಂದು ಪೊಟರೆಯಲ್ಲಿಟ್ಟು, ಏನೂ ಅರಿಯದಂತೆ ಅದನ್ನು ಕಾಯುತ್ತಾ ಕುಳಿತಿತು.

ಆ ದಾಸಿಯೂ ಎಚ್ಚತ್ತು, ಮುಕ್ತಾಹಾರವನ್ನು ಕಾಣದೆ ನಡುಗುತ್ತಾ, ಬೇರೆ ಉಪಾಯ ಕಾಣದೆ, " ದೇವಿಯ ಮುಕ್ತಾಹಾರವನ್ನು ಕೊಂಡು ಒಬ್ಬನು ಓಡುತ್ತಿದ್ದಾನೆ " ಎಂದು ದೊಡ್ಡ ಕೂಗು ಕೂಗಿದಳು.

ಕಾವಲಿನ ಜನರು ಅಲ್ಲಲ್ಲೇ ಸೇರಿ, ಅವಳ ಕೂಗು ಕೇಳಿ, ರಾಜನಿಗೆ ತಿಳಿಸಿದರು. ರಾಜನು " ಕಳ್ಳನನ್ನು ಹಿಡಿಯಿರಿ " ಎಂದನು. ಅವರು

ಉದ್ಯಾನದಿಂದ ಹೊರಗೆ ಹೊರಟು, "ಕಳ್ಳನನ್ನು ಹಿಡಿಯಿರಿ" ಎಂದು ಅತ್ತ ಇತ್ತ ನೋಡಿದರು.

ಆಗ ಯಾವನೋ ಒಬ್ಬನು, ದೇವತೆಗೆ ಬಲಿಕೊಡುವವನು, ಆ ಶಬ್ದವನ್ನು ಕೇಳಿ ನಡುಗುತ್ತಾ ಓಡಿದನು. ಕಾವಲಿನವರು ಅದನ್ನು ಕಂಡು, "ಇವನು ಕಳ್ಳನಿರಬೇಕು" ಎಂದು ಹಿಂದೆ ಓಡಿ, ಅವನನ್ನು ಹಿಡಿದು ಹೊಡೆದು, "ಎಲೋ, ಕೆಟ್ಟ ಕಳ್ಳ, ಮಹಾಸಾರವೆಂಬ ಹೆಸರಿನ ಈ ಆಭರಣವನ್ನು ಹೊತ್ತುಕೊಂಡು ಹೋಗುವೆಯಾ?" ಎಂದು ಪರಿಹಾಸ ಮಾಡಿದರು.

ಅವನು "ನಾನು ತೆಗೆದುಕೊಳ್ಳಲಿಲ್ಲವೆಂದರೆ ಈ ಹೊತ್ತು ನಾನು ಬದುಕುವಂತಿಲ್ಲ, ಹೊಡೆದೇ ನನ್ನನ್ನು ಸಾಯಿಸುವರು. ಒಪ್ಪಿಕೊಂಡು ಬಿಡುವೆನು" ಎಂದು ಚಿಂತಿಸಿ, "ಹೌದು, ಸ್ವಾಮಿ. ತೆಗೆದುಕೊಂಡೆ" ಎಂದನು.

ಅವನನ್ನು ಬಂಧಿಸಿ ರಾಜನ ಬಳಿಗೆ ಒಯ್ದರು. ರಾಜನೂ ಅವನನ್ನು "ಮಹಾಸಾರವೆಂಬ ಆಭರಣವನ್ನು ತೆಗೆದುಕೊಂಡೆಯ?" ಎಂದು ಕೇಳಿದನು.

"ಹೌದು, ದೇವ" ಎಂದನು.

"ಅದೆಲ್ಲಿ ಈಗ?"

"ದೇವ, ಬೆಲೆಯುಳ್ಳ ಮಂಚವನ್ನಾಗಲಿ ಮಣೆಯನ್ನಾಗಲಿ ನಾನು ಹಿಂದೆ ಕಂಡುದಿಲ್ಲ. ಈ ಮಹಾಬೆಲೆಯ ಆಭರಣವನ್ನು ತೆಗೆಯುವಂತೆ ಶ್ರೇಷ್ಠಿ ನನ್ನನ್ನು ಕಳಿಸಿದನು. ನಾನು ತೆಗೆದುಕೊಂಡು ಅವನಿಗೆ ಕೊಟ್ಟೆ. ಅದು ಅವನಿಗೆ ಗೊತ್ತು" ಎಂದನು.

ರಾಜನು ಶ್ರೇಷ್ಠಿಯನ್ನು ಕರೆಕಳುಹಿ, "ಇವನ ಕೈಯಿಂದ ನೀನು ಈ ಅಮೂಲ್ಯವಾದ ಆಭರಣವನ್ನು ತೆಗೆದುಕೊಂಡೆಯ?" ಎಂದು ಕೇಳಿದನು.

"ಹೌದು, ದೇವ."

"ಅದೆಲ್ಲಿ?"

" ಪುರೋಹಿತನಿಗೆ ಕೊಟ್ಟೆ."

ರಾಜನು ಪುರೋಹಿತನನ್ನು ಕರೆಕಳುಹಿ, ಹಾಗೆಯೇ ಕೇಳಿದನು. ಅವನೂ ಒಪ್ಪಿಕೊಂಡು, " ಗಂಧರ್ವನಿಗೆ ನಾನು ಕೊಟ್ಟೆ " ಎಂದನು.

ರಾಜನು ಅವನನ್ನೂ ಕರೆಕಳುಹಿ, " ಪುರೋಹಿತನಿಂದ ನೀನು ಆಭರಣ ಪಡೆದೆಯ ? " ಎಂದು ಕೇಳಿದನು.

" ಹೌದು, ದೇವ " ಎಂದನು.

" ಅದು ಎಲ್ಲಿ ? "

" ಕ್ಲೇಶವಶದಿಂದ ಅದನ್ನು ವರ್ಣದಾಸಿಗೆ ಕೊಟ್ಟೆ."

ರಾಜನು ಅವಳನ್ನೂ ಕರೆಕಳುಹಿ ಕೇಳಿದನು.

ಅವಳು " ನಾನು ತೆಗೆದುಕೊಳ್ಳಲಿಲ್ಲ " ಎಂದಳು.

ಅವರು ಐವರನ್ನು ಪ್ರಶ್ನಿಸುವದರಲ್ಲಿಯೇ ಸೂರ್ಯ ಮುಳುಗಿದನು. ರಾಜನು " ಈಗ ಹೊತ್ತಾಯಿತು. ನಾಳೆ ತಿಳಿಯೋಣ " ಎಂದು ಐವರನ್ನೂ ಅಮಾತ್ಯರ ವಶಕ್ಕೆ ಕೊಟ್ಟು ನಗರವನ್ನು ಪ್ರವೇಶಿಸಿದನು.

ಬೋಧಿಸತ್ತ್ವನು " ಈ ಆಭರಣ ಪ್ರಾಕಾರದೊಳಗೆ ಹಾಳಾಯಿತು. ಈ ಗೃಹಪತಿ ಪ್ರಾಕಾರದ ಹೊರಗಿದ್ದನು. ಬಾಗಿಲಿಗೆ ಬಲವಾದ ಕಾವಲಿದೆ. ಆದ್ದರಿಂದ ಪ್ರಾಕಾರದೊಳಗಿದ್ದವರು ಇದನ್ನು ಎತ್ತಿಕೊಂಡು ಓಡಲಾಗುವುದಿಲ್ಲ. ಅದರಂತೆಯೇ ಪ್ರಾಕಾರದ ಒಳಗಿದ್ದವರಾಗಲಿ ಉದ್ಯಾನದೊಳಗಿದ್ದವರಾಗಲಿ ಇದನ್ನು ತೆಗೆದುಕೊಳ್ಳುವ ಉಪಾಯ ಕಾಣಿಸದು. ಈ ದಟ್ಟದರಿದ್ರನು ತಾನು ತಪ್ಪಿಸಿಕೊಳ್ಳುವುದಕ್ಕಾಗಿ 'ಶ್ರೇಷ್ಠಿಗೆ ನಾನು ಕೊಟ್ಟೆ' ಎಂದು ಹೇಳಿರಬೇಕು. ಶ್ರೇಷ್ಠಿಯೂ ಕೂಡ ಪುರೋಹಿತನಿಗೆ ಕೊಟ್ಟೆನೆಂದು ಹೇಳಿದರೆ ಇಬ್ಬರೂ ಒಟ್ಟಾಗಿ ಪಾರಾಗಬಹುದೆಂದು ಹೇಳಿರಬೇಕು. ಪುರೋಹಿತನು ಕೂಡ ಸೆರೆಮನೆಯಲ್ಲಿ ಸಂಗೀತ ಕೇಳುತ್ತಾ ಸುಖವಾಗಿರಬಹುದೆಂದು ಗಂಧರ್ವನಿಗೆ ಕೊಟ್ಟೆನೆಂದು ಹೇಳಿರಬೇಕು. ಗಂಧರ್ವನು ಕೂಡ ಇವಳ ಸಹವಾಸ ತನಗೆ ಸುಲಭವಾಗಿ ಸಿಕ್ಕುವುದೆಂದು ವರ್ಣದಾಸಿಗೆ ಕೊಟ್ಟೆನೆಂದು

ಹೇಳಿರಬೇಕು. ಈ ಐವರೂ ಕದ್ದಿರಲಾರರು. ಉದ್ಯಾನದಲ್ಲಿ ಕೋತಿಗಳು ಬಹಳ. ಈ ಆಭರಣ ಒಂದು ಹೆಣ್ಣುಕೋತಿಯ ಕೈಸೇರಿರಬೇಕು" ಎಂದು ಚಿಂತಿಸಿ, ರಾಜನ ಬಳಿ ಸಾರಿ, "ಮಹಾರಾಜ, ಕಳ್ಳರನ್ನು ನನಗೆ ಒಪ್ಪಿಸಿರಿ, ಅವರು ಮಾಡಿದುದನ್ನು ನಾನು ಶೋಧಿಸುವೆನು" ಎಂದನು.

ರಾಜನು "ಒಳ್ಳೆಯದು, ಪಂಡಿತ, ಶೋಧಿಸು" ಎಂದು ಅವರನ್ನು ಅವನಿಗೆ ಒಪ್ಪಿಸಿದನು.

ಬೋಧಿಸತ್ತ್ವನು ತನ್ನ ಸೇವಕರನ್ನು ಕರೆಕಳುಹಿ, "ಅವರೈವರನ್ನೂ ಒಂದೇ ಕಡೆಯಲ್ಲಿ ಇರಿಸಿ, ಸುತ್ತಲೂ ಕಾವಲಿಟ್ಟು, ಅವರು ಒಬ್ಬರಿಗೊಬ್ಬರು ಆಡುವುದನ್ನು ನನಗೆ ತಿಳಿಸಿರಿ" ಎಂದು ಹೇಳಿಹೋದನು. ಅವರು ಹಾಗೆಯೇ ಮಾಡಿದರು.

ಆಗ ಅವರೆಲ್ಲರೂ ಒಟ್ಟು ಕೂಡಿದಾಗ, ಶ್ರೇಷ್ಠಿಯು ಆ ಗೃಹಪತಿಯನ್ನು ಕುರಿತು, "ಎಲೋ ದುಷ್ಟ ಗೃಹಪತಿ, ನೀನು ನನ್ನನ್ನಾಗಲಿ ನಾನು ನಿನ್ನನ್ನಾಗಲಿ ಹಿಂದೆ ಎಲ್ಲಿ ಕಂಡಿದ್ದೆವೊ? ನೀನು ಎಂದು ನನಗೆ ಆಭರಣ ಕೊಟ್ಟೆಯೊ?" ಎಂದನು.

"ಸ್ವಾಮಿ, ಮಹಾಶ್ರೇಷ್ಠಿ, ಸರಿಯಾದ ಕಾಲುಗಳಿರುವ ಮಂಚ ಮಣೆಗಳನ್ನಾದರೂ ನಾನು ಕಂಡವನಲ್ಲ. ನಿನ್ನಿಂದ ನನ್ನ ಬಿಡುಗಡೆಯಾಗುವುದೆಂದು ಹೀಗೆ ಹೇಳಿದೆ. ನನ್ನ ಮೇಲೆ ಕೋಪ ಬೇಡ, ಸ್ವಾಮಿ."

ಆಗ ಪುರೋಹಿತನು ಶ್ರೇಷ್ಠಿಯನ್ನು ಕುರಿತು "ಮಹಾಶ್ರೇಷ್ಠಿ, ಇವನು ನಿನಗೆ ಕೊಡದುದನ್ನು ನೀನು ನನಗೆ ಹೇಗೆ ಕೊಟ್ಟೆ?" ಎಂದನು.

"ನಾನು ಕೂಡ, ನಮ್ಮಂತಹ ಈಶ್ವರರಿಬ್ಬರು ಒಂದಾದರೆ ಈ ಕೆಲಸವನ್ನು ಬೇಗ ಸರಿಪಡಿಸಬಹುದೆಂದು ಹೇಳಿದೆ."

ಗಂಧರ್ವನು ಕೂಡ ಪುರೋಹಿತನನ್ನು ಕುರಿತು, "ಬ್ರಾಹ್ಮಣ, ನೀನಾವಾಗ ನನಗೆ ಆಭರಣ ಕೊಟ್ಟೆ?" ಎಂದನು.

" ನೀನು ಇಲ್ಲಿರುವಾಗ ನಾವು ಸುಖವಾಗಿರಬಹುದೆಂದು ನಾನು ಹೇಳಿದೆ."

ವರ್ಣದಾಸಿಯೂ ಗಂಧರ್ವನನ್ನು ಕುರಿತು, " ಎಲವೋ ದುಷ್ಟ ಗಂಧರ್ವ, ನಾನು ಹಿಂದೆ ಎಂದು ನಿನ್ನ ಬಳಿ ಬಂದಿದ್ದೆ ? ನೀನು ಎಂದು ನನ್ನ ಬಳಿ ಬಂದಿದ್ದೆ ? ನನಗೆ ಆಭರಣ ಯಾವಾಗ ಕೊಟ್ಟೆ ? " ಎಂದಳು.

" ತಂಗಿ, ಕೋಪವೇಕೆ? ನಾವು ಐವರೂ ಒಟ್ಟಿಗೆ ಇಲ್ಲಿ ವಾಸಿಸ ಬೇಕಾಗಿದೆ. ಕೊರಗದೆ ಸುಖವಾಗಿ ಇರೋಣವೆಂದು ಹೇಳಿದೆ."

ಬೋಧಿಸತ್ತ್ವನು ತಾನು ಕಳಿಸಿದ ಜನರಿಂದ ಅದನ್ನು ಕೇಳಿ, ಅವರು ನಿಜವಾಗಿಯೂ ಕಳ್ಳರಲ್ಲವೆಂಬುದನ್ನು ತಿಳಿದು, "ಹೆಣ್ಣುಕೋತಿ ಕೊಂಡೊಯ್ದ ಆಭರಣವನ್ನು ಉಪಾಯದಿಂದಲೇ ಬೀಳಿಸುವೆನು " ಎಂಧು ಮಣಿಗಳಿಂದ ಅನೇಕ ಆಭರಣಗಳನ್ನು ಮಾಡಿಸಿ, ಉದ್ಯಾನದಲ್ಲಿ ಹೆಣ್ಣುಕೋತಿಗಳನ್ನು ಹಿಡಿಸಿ, ಅವುಗಳ ಕೈಕಾಲು ಕೊರಳುಗಳಿಗೆ ಮಣಿಯ ಆಭರಣಗಳನ್ನು ತೊಡಿಸಿ ಬಿಡಿಸಿದನು.

ಆ ಇನ್ನೊಂದು ಹೆಣ್ಣುಕೋತಿ ತಾನು ಕದ್ದ ಆಭರಣವನ್ನು ಕಾಪಾಡುತ್ತಾ ಉದ್ಯಾನದಲ್ಲಿಯೇ ಕುಳಿತಿತ್ತು. ಆಗ ಬೋಧಿಸತ್ತ್ವನು " ನೀವು ಹೋಗಿ ಉದ್ಯಾನದಲ್ಲಿ ಎಲ್ಲಾ ಕೋತಿಗಳನ್ನೂ ಗಮನಿಸಿರಿ. ಯಾವುದರ ಬಳಿಯಾದರೂ ಆಭರಣ ಕಂಡರೆ ಅದನ್ನು ಬೆದರಿಸಿ ಆಭರಣವನ್ನು ಕೊಳ್ಳಿರಿ " ಎಂದು ಜನರಿಗೆ ಆಜ್ಞೆಮಾಡಿದನು. ಆ ಇತರ ಹೆಣ್ಣು ಕೋತಿಗಳು " ನಮಗೆ ಆಭರಣ ದೊರಕಿತು " ಎಂದು ತೃಪ್ತಿಪಡುತ್ತಾ ಹರ್ಷದಿಂದ ಉದ್ಯಾನದಲ್ಲಿ ಸಂಚರಿಸುತ್ತಾ ಆ ಹೆಣ್ಣು ಕೋತಿಯ ಬಳಿ ಹೋಗಿ, " ನಮ್ಮ ಆಭರಣಗಳನ್ನು ನೋಡು " ಎಂದವು. ಆಗ ಅದು ಹೊಟ್ಟೆಕಿಚ್ಚನ್ನು ಸಹಿಸಲಾರದೆ, "ಇವೇನು, ಮಣಿಗಳ ಆಭರಣ!" ಎಂದು ಮುಕ್ತಾಹಾರವನ್ನು ಅಲಂಕರಿಸಿಕೊಂಡು ಹೊರಟಿತು. ಅದನ್ನು ಆ ಜನ ಕಂಡು, ಅದು ಆಭರಣವನ್ನು ಬಿಸುಡುವಂತೆ ಮಾಡಿ, ಅದನ್ನು ಬೋಧಿಸತ್ತ್ವನಿಗೆ ತಂದುಕೊಟ್ಟರು.

ಅವನು ಅದನ್ನು ತಂದು ರಾಜನಿಗೆ ತೋರಿಸಿ, "ಇದೋ, ದೇವ, ನಿನ್ನ ಆಭರಣ. ಅವರ್ಯಾವರೂ ಕಳ್ಳರಲ್ಲ. ಇದನ್ನು ಉದ್ಯಾನದ ಹೆಣ್ಣು ಕೋತಿ ಒಯ್ದಿತ್ತು" ಎಂದನು.

"ಹೆಣ್ಣು ಕೋತಿಯ ಕೈಗೆ ಇದು ಹೋದುದನ್ನು ನೀನು ಹೇಗೆ ತಿಳಿದೆ, ಪಂಡಿತ? ನೀನು ಇದನ್ನು ಹೇಗೆ ಪಡೆದೆ?"

ಅವನು ಎಲ್ಲವನ್ನೂ ವಿವರಿಸಿದನು. ರಾಜನು ಸಂತುಷ್ಟನಾಗಿ "ಶೂರರಾದವರು ಸಂಗ್ರಾಮದಲ್ಲಿ ಬೇಕಾದ್ದನ್ನು ಮಾಡಬಲ್ಲರು" ಎಂದು ಬೋಧಿಸತ್ತ್ವನನ್ನು ಸ್ತುತಿಸಿ ಮರ್ಯಾದೆ ಮಾಡಿದನು.

# ಕುರುಧರ್ಮ

ಹಿಂದೆ, ಕುರುರಾಷ್ಟ್ರದ ಇಂದ್ರಪ್ರಸ್ಥ ನಗರದಲ್ಲಿ ಧನಂಜಯನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಅವನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಜನ್ಮತಾಳಿದನು. ಕ್ರಮವಾಗಿ ಬುದ್ಧಿಬಂದು, ತಕ್ಷಶಿಲೆಯಲ್ಲಿ ವಿದ್ಯೆಗಳನ್ನು ಕಲಿತನು. ಬಳಿಕ ಅವನನ್ನು ಉಪರಾಜನನ್ನಾಗಿ ಪ್ರತಿಷ್ಠೆ ಮಾಡಿದರು. ತಂದೆ ಕಾಲವಾದ ಮೇಲೆ ಅವನು ರಾಜ್ಯ ಪಡೆದನು, ದಶರಾಜಧರ್ಮಗಳನ್ನು ಕಾಪಾಡಿಕೊಂಡು ಕುರುಧರ್ಮದಲ್ಲಿ ವರ್ತಿಸುತ್ತಿದ್ದನು.

ಪಂಚಶೀಲಗಳಿಗೆ ಕುರುಧರ್ಮವೆಂದು ಹೆಸರು. ಅವುಗಳನ್ನು ಬೋಧಿಸತ್ತ್ವನು ಪರಿಶುದ್ಧವಾಗಿ ಮಾಡಿ ಕಾಪಾಡುತ್ತಿದ್ದನು. ಬೋಧಿಸತ್ತ್ವನ ತಾಯಿ, ಅವನ ಪಟ್ಟದ ರಾಣಿ, ಅವನ ತಮ್ಮನಾದ ಉಪರಾಜ, ಅವನ ಪುರೋಹಿತನಾದ ಬ್ರಾಹ್ಮಣ, ಅವನ ರಜ್ಜುಗ್ರಾಹಕನಾದ ಅಮಾತ್ಯ, ಅವನ ಸಾರಥಿ, ಅವನ ಶ್ರೇಷ್ಠಿ, ಅವನ ದ್ರೋಣಮಾಪಕನಾದ ಮಹಾಮಾತ್ರ, ಅವನ ದ್ವಾರಪಾಲಕ, ಅವನ ನಗರಶೋಭನೆಯಾದ ವರ್ಣದಾಸಿ ಇವರೂ ಅವನಂತೆಯೇ ಇದ್ದರು. ಇವರೆಲ್ಲರೂ ಪಂಚಶೀಲಗಳನ್ನು ಪರಿಶುದ್ಧವಾಗಿ ಮಾಡಿ ಕಾಪಾಡುತ್ತಿದ್ದರು.

ರಾಜನು ನಾಲ್ಕು ನಗರದ್ವಾರಗಳಲ್ಲಿ, ನಗರಮಧ್ಯದಲ್ಲಿ, ಮನೆಯ ಬಾಗಿಲಿನಲ್ಲಿ—ಹೀಗೆ ಆರು ದಾನಶಾಲೆಗಳನ್ನು ಮಾಡಿಸಿ, ದಿವಸಕ್ಕೆ ಆರು ನೂರುಸಾವಿರಗಳನ್ನು ಕೈಯಿಂದ ಬಿಡುತ್ತಾ ಸಕಲ ಜಂಬೂದ್ವೀಪಕ್ಕೆ ಹಬ್ಬಮಾಡುತ್ತಾ ದಾನಕೊಡುತ್ತಿದ್ದನು. ದಾನಕೊಡುವುದರಲ್ಲಿ ಅವನಿಗಿದ್ದ ತೀವ್ರವಾದ ಆಸೆಯೂ ಪ್ರೀತಿಯೂ ಸಕಲಜಂಬೂದ್ವೀಪದಲ್ಲೆಲ್ಲಾ ಹಬ್ಬಿತು.

ಆ ಕಾಲದಲ್ಲಿ ಕಾಳಿಂಗ ರಾಷ್ಟ್ರದ ದಂತಪುರನಗರದಲ್ಲಿ ಕಾಳಿಂಗ ರಾಜನು ರಾಜ್ಯವಾಳುತ್ತಿದ್ದನು. ಅವನ ರಾಷ್ಟ್ರದಲ್ಲಿ ಮಳೆ ಬೀಳಲಿಲ್ಲ, ಮಳೆ ಬೀಳದುದರಿಂದ ರಾಷ್ಟ್ರದಲ್ಲೆಲ್ಲಾ ಕ್ಷಾಮ ಹುಟ್ಟಿತು. ಆಹಾರ ದೊರಕದೆ ಜನರಿಗೆ ರೋಗ ಬಂತು. ಹೀಗೆ ದುರ್ವೃಷ್ಟಿಭಯ, ಕ್ಷಾಮ

ಭಯ, ರೋಗಭಯಗಳೆಂಬ ಮೂರುಭಯಗಳು ತಲೆಯೆತ್ತಿಕೊಂಡವು. ಜನರು ನಿಲ್ಲಲು ಮನೆಗಳಿಲ್ಲದೆ, ಮಕ್ಕಳ ಕೈಹಿಡಿದುಕೊಂಡು ಅಲ್ಲಿಂದಿಲ್ಲಿಗೆ ತಿರುಗಾಡುತ್ತಿದ್ದರು.

ಆಗ ರಾಷ್ಟ್ರದಲ್ಲಿದ್ದವರೆಲ್ಲಾ ಒಂದಾಗಿ ದಂತಪುರಕ್ಕೆ ಹೋಗಿ ರಾಜದ್ವಾರದಲ್ಲಿ ಕೂಗಾಡಿದರು.

ರಾಜನು ಕಿಟಿಕಿಯ ಬಳಿ ನಿಂತು ಆ ಶಬ್ದವನ್ನು ಕೇಳಿ, "ಇವರು ಏಕೆ ಕೂಗಿಕೊಳ್ಳುವರು?" ಎಂದು ಕೇಳಿದನು.

"ಮಹಾರಾಜ, ರಾಷ್ಟ್ರದಲ್ಲೆಲ್ಲಾ ಮೂರು ಭಯಗಳು ಹುಟ್ಟಿವೆ. ಮಳೆ ಬೀಳುವುದಿಲ್ಲ, ಸಸ್ಯಗಳು ನಾಶವಾಗಿವೆ, ಕ್ಷಾಮ ಹುಟ್ಟಿದೆ, ಜನರು ಊಟಕ್ಕಿಲ್ಲದೆ ರೋಗಕ್ಕೆ ವಶರಾಗಿ, ಮನೆಗಳಿಲ್ಲದೆ ಮಕ್ಕಳನ್ನು ಕೈಯಲ್ಲಿ ಕೊಂಡು ತಿರುಗಾಡುವರು. ಮಳೆಯನ್ನು ಕರೆಸು, ಮಹಾರಾಜ."

"ಹಿಂದಿನ ರಾಜರುಗಳು, ಮಳೆ ಬೀಳದಿದ್ದರೆ ಏನು ಮಾಡುತ್ತಿದ್ದರು?"

"ದೇವ, ಮಳೆ ಬೀಳದಿದ್ದರೆ, ಹಿಂದಿನ ರಾಜರುಗಳು ದಾನಕೊಟ್ಟು, ಉಪವಾಸಮಾಡಿ, ಶೀಲಗಳನ್ನು ಕೈಕೊಂಡು, ತಮ್ಮ ಮಲಗುವ ಮನೆಯಲ್ಲಿ ದರ್ಭೆಯ ಹಾಸಿಗೆಯ ಮೇಲೆ ಏಳು ಹಗಲು ಮಲಗುವರು. ಆಗ ಮಳೆ ಬರುವುದು."

ರಾಜನು ಒಳ್ಳೆಯದೆಂದು ಒಪ್ಪಿ ಹಾಗೆಯೇ ಮಾಡಿದನು. ಹಾಗಾದರೂ ಮಳೆ ಬೀಳಲಿಲ್ಲ.

ರಾಜನು ಅಮಾತ್ಯರನ್ನು ಕುರಿತು "ನಾನು ಕರ್ತವ್ಯಕಾರ್ಯವನ್ನು ಮಾಡಿದೆ. ಮಳೆ ಬರಲಿಲ್ಲ. ಏನು ಮಾಡೋಣ?" ಎಂದು ಕೇಳಿದನು.

"ಮಹಾರಾಜ, ಇಂದ್ರಪ್ರಸ್ಥನಗರದಲ್ಲಿ ಧನಂಜಯನೆಂಬ ಕೌರವ್ಯ ರಾಜನ ಬಳಿ ಅಂಜನವೃಷಭವೆಂಬ ಮಂಗಲಹಸ್ತಿಯಿದೆ. ಅದನ್ನು ತರಿಸೋಣ. ಹಾಗಾದರೆ ಮಳೆ ಬರುವುದು."

"ಆ ರಾಜನಿಗೆ ಬೇಕಾದ ಹಾಗೆ ಸೈನ್ಯವಿದೆ. ಅವನನ್ನು ಸೋಲಿಸುವುದು ಕಷ್ಟ. ಅವನ ಆನೆಯನ್ನು ಹೇಗೆ ತರಿಸೋಣ?"

"ಮಹಾರಾಜ, ಅವನ ಬಳಿ ಯುದ್ಧವೆಂಬ ಕಾರ್ಯವೇ ಇಲ್ಲ. ಆ ರಾಜನಿಗೆ ದಾನಕೊಡುವುದರಲ್ಲಿ ತೀವ್ರವಾದ ಆಸೆ, ತೀವ್ರವಾದ ಪ್ರೀತಿ. ಬೇಡಿದರೆ, ಅಲಂಕರಿಸಿದ ತಲೆಯನ್ನು ಕತ್ತರಿಸಿಯಾಗಲಿ, ಪ್ರಸನ್ನತೆಯಿಂದ ಕೂಡಿದ ಕಣ್ಣುಗಳನ್ನು ಕಿತ್ತಾಗಲಿ, ರಾಜ್ಯವೆಲ್ಲವನ್ನೂ ತಂದಾಗಲಿ ದಾನಕೊಡುವನು. ಆನೆಗಾಗಿ ಹೇಳಬೇಕಾದುದೂ ಏನೂ ಇಲ್ಲ, ಬೇಡಿದರೆ ಅವಶ್ಯವಾಗಿ ಕೊಡುವನು."

"ಅವನನ್ನು ಬೇಡಲು ಸಮರ್ಥರಾರು?"

"ಬ್ರಾಹ್ಮಣರು, ಮಹಾರಾಜ".

"ರಾಜನು ಬ್ರಾಹ್ಮಣಗ್ರಾಮದಿಂದ ಎಂಟು ಜನ ಬ್ರಾಹ್ಮಣರನ್ನು ಕರೆಕಳುಹಿ, ಅವರಿಗೆ ಸತ್ಕಾರ ಸನ್ಮಾನಗಳನ್ನು ಮಾಡಿ, ಆನೆಯನ್ನು ಬೇಡುವುದಕ್ಕಾಗಿ ಅವರನ್ನು ಕಳಿಸಿದನು. ಅವರು ದಾರಿಯ ವೆಚ್ಚಕ್ಕೆ ತೆಗೆದುಕೊಂಡು, ದಾರಿಗರ ವೇಷ ತಾಳಿ, ಎಲ್ಲ ಕಡೆಯೂ ಒಂದೊಂದೇ ರಾತ್ರಿ ನಿಂತು, ತ್ವರಿತಗಮನದಿಂದ ಹೋಗಿ, ಕೆಲವು ಹಗಲು ನಗರ ದ್ವಾರದ ದಾನಶಾಲೆಯಲ್ಲಿ ಊಟಮಾಡಿ, ಶರೀರವನ್ನು ಸಂತೃಪ್ತಿಗೊಳಿಸಿ, "ರಾಜನು ದಾನಶಾಲೆಗೆ ಆವಾಗ ಬರುವನು?" ಎಂದು ಕೇಳಿದರು.

ಜನರು "ಪಕ್ಷದ ಮೂರು ದಿನಗಳಲ್ಲಿ, ಹದಿನಾಲ್ಕನೆಯ ಹದಿನೈದನೆಯ ಮತ್ತು ಎಂಟನೆಯ ದಿನಗಳಲ್ಲಿ ಬರುವನು. ನಾಳೆ ಹುಣ್ಣಿಮೆ. ಆದುದರಿಂದ ನಾಳೆಯೂ ಬರುವನು." ಎಂದು ಹೇಳಿದರು.

ಬ್ರಾಹ್ಮಣರು ಮಾರನೆಯ ದಿವಸ ಬೆಳಗ್ಗೆಯೇ ಹೋಗಿ ಪೂರ್ವದ ದ್ವಾರದಲ್ಲಿ ನಿಂತರು.

ಬೋಧಿಸತ್ತ್ವನೂ ಬೆಳಗ್ಗೆಯೇ ಸ್ನಾನಮಾಡಿ, ಲೇಪಿಸಿಕೊಂಡು, ಸರ್ವ ಅಲಂಕಾರಗಳನ್ನೂ ಧರಿಸಿ, ಅಲಂಕರಿಸಿದ ಸೊಗಸಾದ ಆನೆಯ ಕತ್ತಿನ ಮೇಲೆ ಕುಳಿತು, ಮಹತ್ತಾದ ಪರಿವಾರದೊಡನೆ ಪೂರ್ವದ

ದ್ವಾರದಿಂದ ದಾನಶಾಲೆಗೆ ಹೋಗಿ, ಇಳಿದು, ಏಳೆಂಟು ಜನಕ್ಕೆ ತನ್ನ ಕೈಯಿಂದಲೇ ಅನ್ನ ಕೊಟ್ಟು, "ಈ ರೀತಿಯಿಂದ ಕೊಡಿ" ಎಂದು ಹೇಳಿ, ಆನೆಯನ್ನು ಏರಿ, ದಕ್ಷಿಣದ ದ್ವಾರಕ್ಕೆ ಹೋದನು.

ಬ್ರಾಹ್ಮಣರು ಪೂರ್ವದ ದ್ವಾರದಲ್ಲಿ ಕಾವಲಿನವರ ಬಲವಂತದಿಂದ ಅವಕಾಶ ದೊರಕದೆ ದಕ್ಷಿಣ ದ್ವಾರಕ್ಕೇ ಹೋಗಿ, ರಾಜನು ಬರುವುದನ್ನು ಗಮನಿಸುತ್ತಾ ದ್ವಾರದಿಂದ ಅನತಿದೂರದಲ್ಲಿದ್ದ ಎತ್ತರವಾದ ಸ್ಥಳದಲ್ಲಿ ನಿಂತು, ಕೈಗಳನ್ನು ಮೇಲೆತ್ತಿ 'ರಾಜನಿಗೆ ಜಯವಾಗಲಿ' ಎಂದರು.

ರಾಜನು ವಜ್ರದ ಅಂಕುಶದಿಂದ ಆನೆಯನ್ನು ತಿರುಗಿಸುತ್ತಾ ಅವರ ಬಳಿಗೆ ಬಂದು, "ಓ ಬ್ರಾಹ್ಮಣರೆ, ಏನು ಬಯಸುವಿರಿ ?" ಎಂದನು.

ಬ್ರಾಹ್ಮಣರು ಬೋಧಿಸತ್ತ್ವನ ಗುಣವನ್ನು ವರ್ಣಿಸುತ್ತಾ "ಜನಾಧಿಪ, ನಿನ್ನ ಶ್ರದ್ಧೆಯನ್ನೂ ನಿನ್ನ ಶೀಲವನ್ನೂ ಕೇಳಿ, ಬಂದಿರುವೆವು. ಅಂಜನವರ್ಣದ ನಿನ್ನ ಆನೆಗಾಗಿ ಕಾಳಿಂಗದಿಂದ ವೆಚ್ಚಮಾಡಿಕೊಂಡು ಬಂದಿರುವೆವು" ಎಂದರು.

ಅದಕ್ಕೆ ಬೋಧಿಸತ್ತ್ವನು "ಓ ಬ್ರಾಹ್ಮಣರೆ, ಈ ಆನೆಗಾಗಿ ನೀವು ಹಣ ವೆಚ್ಚಮಾಡಿದ್ದರೆ ಚಿಂತಿಸಬೇಡಿ. ಈ ಆನೆಗೆ ಹೇಗೆ ಅಲಂಕಾರ ಮಾಡಿದೆಯೋ ಹಾಗೆಯೇ ಇದನ್ನು ನಿಮಗೆ ಕೊಡುತ್ತೇನೆ" ಎಂದು ಸಂತೈಸಿ, "ಊಟಕ್ಕಿರಲಿ, ಇಲ್ಲದಿರಲಿ, ಯಾರು ಬಂದರೂ ಅವರನ್ನು ಬರಮಾಡಿಕೊಳ್ಳೆಂದು ಪೂರ್ವಾಚಾರ್ಯರು ನನಗೆ ಕಲಿಸಿರುವರು. ಈ ಆನೆಯನ್ನು ನಿಮಗೆ ಕೊಡುವೆನು, ಬ್ರಾಹ್ಮಣರೆ. ಇದು ರಾಜನಿಗೆ ಅರ್ಹವಾದುದು, ರಾಜನು ಅನುಭವಿಸಲು ತಕ್ಕದ್ದು, ಯಶಸ್ವಿಯಾದುದು, ಚಿನ್ನದ ಬಲೆಯ ಹೊದಿಕೆಯಿಂದ ಅಲಂಕೃತವಾದುದು. ಇದನ್ನು ಸಾರಥಿಯೊಡನೆ ನಿಮಗೆ ಕೊಡುವೆನು. ತೆಗೆದುಕೊಂಡು, ಬೇಕಾದಂತೆ ಹೋಗಿರಿ" ಎಂದನು.

ಹೀಗೆ ಆನೆಯ ಕತ್ತಿನ ಮೇಲೆ ಕುಳಿತೇ ಮಹಾಸತ್ತ್ವನು ಮಾತಿನಿಂದ ಅದನ್ನು ಕೊಟ್ಟು, ಅನಂತರ ಆನೆಯ ಕತ್ತಿನಿಂದ ಇಳಿದು,

"ಅಲಂಕರಿಸದೆ ಇರುವ ಸ್ಥಾನವಿದ್ದರೆ ಅದನ್ನು ಅಲಂಕರಿಸಿ ಕೊಡುವೆನು" ಎಂದು ಮೂರು ಸಲ ಪ್ರದಕ್ಷಿಣಮಾಡಿ ಪರೀಕ್ಷೆ ಮಾಡಿದನು. ಅಲಂಕಾರ ಮಾಡದ ಯಾವ ಸ್ಥಾನವನ್ನೂ ಕಾಣದೆ, ಅದರ ಸೊಂಡಿಲನ್ನು ಬ್ರಾಹ್ಮಣರ ಕೈಯಲ್ಲಿರಿಸಿ, ಸುವರ್ಣಭೃಂಗಾರದಿಂದ ಹೂವಿನ ಸುವಾಸನೆಯುಳ್ಳ ನೀರನ್ನು ಸುರಿದು, ಕೊಟ್ಟನು.

ಬ್ರಾಹ್ಮಣರು ಆನೆಯನ್ನು ಅದರ ಪರಿವಾರದೊಡನೆ ಒಪ್ಪಿಸಿಕೊಂಡು, ಅದರ ಬೆನ್ನಮೇಲೆ ಕುಳಿತು, ದಂತಪುರ ನಗರಕ್ಕೆ ಹೋಗಿ, ಆನೆಯನ್ನು ರಾಜನಿಗೆ ಕೊಟ್ಟರು.

ಆನೆ ಬಂದರೂ ಮಳೆ ಬೀಳಲೇ ಇಲ್ಲ.

ರಾಜನು " ಇದಕ್ಕೇನು ಕಾರಣ ? " ಎಂದು ಅನಂತರ ಕೇಳಿದನು.

"ಧನಂಜಯ ಕೌರವ್ಯರಾಜನು ಕುರುಧರ್ಮವನ್ನು ರಕ್ಷಿಸುವನು. ಅದರಿಂದ ಅವನ ರಾಷ್ಟ್ರದಲ್ಲಿ ಹತ್ತೋ ಹದಿನೈದೋ ದಿವಸ ಮಳೆ ಬೀಳುತ್ತದೆ. ರಾಜನ ಗುಣದ ಪ್ರಭಾವ ಹೀಗೆ. ಈ ಮೃಗದಲ್ಲಿ ಗುಣವಿದ್ದರೂ, ಎಷ್ಟರದು ?" ಎಂದು ಅವರು ಹೇಳಿದರು.

ಅದಕ್ಕೆ ರಾಜನು "ಹಾಗಾದರೆ, ಹೀಗೆಯೇ ಅಲಂಕಾರ ಮಾಡಿರುವಂತೆಯೇ ಸಪರಿವಾರವಾಗಿ ಈ ಆನೆಯನ್ನು ಹಿಂದಕ್ಕೆ ಒಯ್ದು ರಾಜನಿಗೆ ಕೊಟ್ಟು, ಅವನು ಪಾಲಿಸುವ ಕುರುಧರ್ಮವನ್ನು ಚಿನ್ನದ ಪಟ್ಟಿಗಳಲ್ಲಿ ಬರೆದು ತನ್ನಿರಿ" ಎಂದು ಬ್ರಾಹ್ಮಣರನ್ನೂ ಅಮಾತ್ಯರನ್ನೂ ಕಳಿಸಿದನು.

ಅವರು ಹೋಗಿ, ರಾಜನಿಗೆ ಆನೆಯನ್ನು ಹಿಂದಿರುಗಿಸಿ, "ದೇವ, ಈ ಆನೆ ಹೋದರೂ ನಮ್ಮ ರಾಷ್ಟ್ರದಲ್ಲಿ ಮಳೆ ಬೀಳಲಿಲ್ಲ. ನೀನು ಕುರುಧರ್ಮವೆಂಬುದನ್ನು ಪಾಲಿಸುವೆ. ನಮ್ಮ ರಾಜನು ಅದನ್ನು ಪಾಲಿಸಲು ಬಯಸಿ, 'ಅದನ್ನು ಚಿನ್ನದ ಎಲೆಯಲ್ಲಿ ಬರೆದು ತನ್ನಿರಿ' ಎಂದು ಕಳಿಸಿರುವನು. ನಮಗೆ ಕುರುಧರ್ಮವನ್ನು ಕೊಡು" ಎಂದರು.

"ಅಯ್ಯಾ, ನಿಜ, ನಾನು ಈ ಕುರುಧರ್ಮವನ್ನು ಪಾಲಿಸುವೆನು. ಆದರೆ ಇದರಲ್ಲಿ ನನಗೆ ಕೊಂಚ ಶಂಕೆಯಿದೆ. ಈ ಕುರುಧರ್ಮದಿಂದ ನನಗೆ ಸಮಾಧಾನವಿಲ್ಲ. ಆದ್ದರಿಂದ ನಿಮಗೆ ಕೊಡಲಾರೆ" ಎಂದನು.

ಯಾವ ಶೀಲದಿಂದ ರಾಜನಿಗೆ ಸಮಾಧಾನವಾಗಿರಲಿಲ್ಲ? ಆಗ ರಾಜರುಗಳು ಮೂರು ಮೂರು ವರ್ಷಗಳಿಗೊಮ್ಮೆ ಕಾರ್ತಿಕ ಮಾಸದಲ್ಲಿ, ಕಾರ್ತಿಕವೆಂಬ ಕ್ಷಣದಲ್ಲಿ ಕ್ರೀಡಿಸುತ್ತಿದ್ದರು. ಆಗ ರಾಜರುಗಳು ಸರ್ವ ಅಲಂಕಾರಗಳನ್ನೂ ಧರಿಸಿ, ದೇವವೇಷವನ್ನು ತಾಳಿ, ಚಿತ್ರರಾಜನೆಂಬ ಯಕ್ಷನ ಬಳಿ ನಿಂತು, ಹೂಗಳಿಂದ ಅಲಂಕರಿಸಿದ ತರತರದ ಬಣ್ಣದ ಬಾಣಗಳನ್ನು ನಾಲ್ಕು ದಿಕ್ಕುಗಳಿಗೂ ಬಿಡುತ್ತಿದ್ದರು. ಆ ರಾಜನೂ ಆ ಕಾರ್ತಿಕಕ್ಷಣವನ್ನು ಕ್ರೀಡಿಸುತ್ತಾ ಒಂದು ತಟಾಕವನ್ನು ಪಾಲಿಸುತ್ತಿದ್ದ ಚಿತ್ರರಾಜನ ಬಳಿಯಲ್ಲಿ ನಿಂತು, ನಾಲ್ಕು ದಿಕ್ಕುಗಳಿಗೂ ಬಣ್ಣದ ಬಾಣ ಬಿಟ್ಟನು. ಅವುಗಳಲ್ಲಿ ಉಳಿದ ದಿಕ್ಕುಗಳಿಗೆ ಹೋದ ಮೂರು ಬಾಣಗಳನ್ನು ಕಂಡನು, ನೀರಿನ ಬಳಿ ಬಿದ್ದ ಬಾಣವನ್ನು ಮಾತ್ರ ಕಾಣಲಿಲ್ಲ. ರಾಜನಿಗೆ 'ನಾನು ಬಿಟ್ಟ ಬಾಣ ಯಾವುದಾದರೂ ಮೀನಿನ ಮೈಯಲ್ಲಿ ಬಿತ್ತೋ?' ಎಂದು ಶಂಕೆಯಾಯಿತು. ಜೀವಹಿಂಸೆಯಿಂದ ತನ್ನ ಶೀಲ ಭಂಗವಾಗಿರಬೇಕೆಂದು ಅವನಿಗೆ ಅಸಮಾಧಾನವಾಗಿತ್ತು.

ಅದಕ್ಕೇ ಅವನು "ಅಪ್ಪಾ, ನನ್ನ ಕುರುಧರ್ಮದಲ್ಲಿ ನನಗೆ ಶಂಕೆಯಿದೆ. ನನ್ನ ತಾಯಿ ಅದನ್ನು ಚೆನ್ನಾಗಿ ಪಾಲಿಸುತ್ತಾಳೆ. ಅವಳಿಂದ ಪಡೆಯಿರಿ" ಎಂದನು.

"ಮಹಾರಾಜ, ಪ್ರಾಣವನ್ನು ಕೊಲ್ಲುವೆನೆಂಬ ಚಿತ್ತ ನಿನಗಿರಲಿಲ್ಲ. ಚಿತ್ತವಿದ್ದ ಹೊರತು ಕೊಲೆಯೆಂಬುದು ಇಲ್ಲ. ನೀನು ಪಾಲಿಸುತ್ತಿರುವ ಕುರುಧರ್ಮವನ್ನು ಕೊಡು."

"ಹಾಗಾದರೆ ಬರೆಯಿರಿ" ಎಂದು, "ಜೀವವನ್ನು ಕೊಲ್ಲತಕ್ಕುದಲ್ಲ. ಕೊಡದೆ ಇದ್ದುದನ್ನು ಕೊಳ್ಳತಕ್ಕುದಲ್ಲ. ಮನಸ್ಸಿಗೆ ಬೇಕೆನ್ನಿಸಿದುದನ್ನೆಲ್ಲಾ ಮಾಡತಕ್ಕುದಲ್ಲ. ಸುಳ್ಳು ಹೇಳತಕ್ಕುದಲ್ಲ. ಮದ್ಯವನ್ನು ಕುಡಿಯತಕ್ಕುದಲ್ಲ" ಎಂದು ಬರೆಯಿಸಿ, ಪುನಃ "ಆದರೂ ನನಗೆ ಶಾಂತಿಯಿಲ್ಲ. ನನ್ನ ತಾಯಿಯ ಬಳಿ ಕೊಳ್ಳಿರಿ" ಎಂದನು.

ದೂತರು ರಾಜನಿಗೆ ವಂದಿಸಿ, ಅವನ ತಾಯಿಯ ಬಳಿಗೆ ಹೋಗಿ, "ದೇವಿ, ನೀನು ಕುರುಧರ್ಮವನ್ನು ಪಾಲಿಸುವೆ. ಅದನ್ನು ನಮಗೆ ಕೊಡು" ಎಂದರು.

"ಅಪ್ಪಾ, ನಾನು ಕುರುಧರ್ಮವನ್ನು ಪಾಲಿಸುವೆನೆಂಬುದು ನಿಜ. ಆದರೆ ಅದರಲ್ಲಿ ನನಗೆ ಶಂಕೆಯುಂಟಾಗಿದೆ. ಆ ಧರ್ಮದಿಂದ ನನಗೆ ಶಾಂತಿಯಿಲ್ಲ. ಆದ್ದರಿಂದ ನಿಮಗೆ ನಾನು ಕೊಡಲಾರೆ."

ಅವಳಿಗೆ ಇಬ್ಬರು ಮಕ್ಕಳು. ಹಿರಿಯವನು ರಾಜ, ಕಿರಿಯವನು ಉಪರಾಜ. ಆಗ ಒಬ್ಬ ರಾಜನು ನೂರು ಸಾವಿರ ಬೆಲೆ ಬಾಳುವ ಚಂದನ ಸಾರವನ್ನೂ ಸಾವಿರ ಬೆಲೆ ಬಾಳುವ ಕಾಂಚನಮಾಲೆಯನ್ನೂ ಬೋಧಿ ಸತ್ತ್ವನಿಗೆ ಕಳಿಸಿದನು. ಅವನು 'ತಾಯಿಯನ್ನು ಪೂಜಿಸುವೆನು' ಎಂದು ಅದೆಲ್ಲವನ್ನೂ ತಾಯಿಗೆ ಕಳಿಸಿದನು. ಅವಳು "ನಾನು ಚಂದನ ಲೇಪಿಸಿ ಕೊಳ್ಳುವುದಿಲ್ಲ, ಮಾಲೆ ಧರಿಸುವುದಿಲ್ಲ. ಸೊಸೆಯರಿಗೆ ಕೊಡುವೆನು" ಎಂದು ಚಿಂತಿಸಿದಳು. ಆಗ ಅವಳು "ಹಿರಿಯ ಸೊಸೆ ಪಟ್ಟದ ರಾಣಿಯಾಗಿ ನನಗೆ ಒಡತಿಯ ಸ್ಥಾನದಲ್ಲಿದ್ದಾಳೆ. ಅವಳಿಗೆ ಚಂದನಸಾರ ಕೊಡುವೆನು" ಎಂದು ಕೊಂಡು, ರಾಜನ ದೇವಿಗೆ ಸುವರ್ಣಮಾಲೆಯನ್ನುಕೊಟ್ಟು, ಉಪರಾಜನ ಹೆಂಡತಿಗೆ ಚಂದನಸಾರವನ್ನು ಕೊಟ್ಟಳು. ಕೊಟ್ಟಬಳಿಕ ಅವಳಿಗೆ "ನಾನು ಕುರುಧರ್ಮವನ್ನು ಪಾಲಿಸುವೆನು. ಇವರು ಧನವಂತರು, ಇವರು ಧನ ಹೀನರು ಎಂಬುದು ನನಗೇಕೆ? ಹಿರಿಯವಳಿಗೆ ಗೌರವಮಾಡಬೇಕೆಂಬುದು ಮಾತ್ರ ತಕ್ಕುದು. ಹೀಗೆ ಮಾಡದಿದ್ದುದರಿಂದ ನನ್ನ ಶೀಲ ಭಂಗ ವಾಯಿತು" ಎಂದು ಶಂಕೆಯುಂಟಾಯಿತು. ಅದರಿಂದ ಹಾಗೆಂದಳು.

ಆಗ ಆ ದೂತರು "ತನ್ನದನ್ನು ಬೇಕಾದಂತೆ ಕೊಡಬಹುದು. ಇಷ್ಟಕ್ಕೇ ನಿನಗೆ ಶಂಕೆಯುಂಟಾದರೆ, ನೀನು ಬೇರೇನು ಪಾಪ ಮಾಡ ಬಲ್ಲೆ? ಇಂತಹ ಶೀಲದಲ್ಲಿ ದೋಷ ತಲೆದೋರದು. ನಮಗೆ ಕುರು ಧರ್ಮ ಕೊಡು" ಎಂದು ಹೇಳಿ, ಅವಳ ಬಳಿಯೂ ತೆಗೆದುಕೊಂಡು, ಚಿನ್ನದ ಪಟ್ಟಿಯಲ್ಲಿ ಬರೆದರು.

"ಅಪ್ಪಾ, ಹೀಗಿದ್ದರೂ ನನಗೆ ಶಾಂತಿಯಿಲ್ಲ. ನನ್ನ ಸೊಸೆ ಅದನ್ನು ಚೆನ್ನಾಗಿ ಪಾಲಿಸುತ್ತಾಳೆ. ಅವಳ ಬಳಿ ತೆಗೆದುಕೊಳ್ಳಿ."

ಅವರು ಅನಂತರ ಪಟ್ಟದ ರಾಣಿಯ ಬಳಿಸಾರಿ, ಮೊದಲಿನಂತೆಯೆ ಕುರುಧರ್ಮವನ್ನು ಯಾಚಿಸಿದರು. ಅವಳೂ ಮೊದಲಿನವರಂತೆಯೇ ಹೇಳಿ, "ನನಗೂ ಈ ಶೀಲದಿಂದ ಶಾಂತಿಯಿಲ್ಲ. ಆದ್ದರಿಂದ ಕೊಡಲಾರೆ" ಎಂದಳು.

ಅವಳು ಒಂದು ದಿನ ಸಿಂಹಪಂಜರದಂತಿರುವ ಕಿಟಿಕಿಯ ಬಳಿ ನಿಂತು, ರಾಜನು ನಗರವನ್ನು ಪ್ರದಕ್ಷಿಣ ಮಾಡುತ್ತಿರುವಾಗ ಹಿಂದುಗಡೆ ಆನೆಯ ಬೆನ್ನ ಮೇಲೆ ಕುಳಿತಿದ್ದ ಉಪರಾಜನನ್ನು ಕಂಡು ಆಸೆಪಟ್ಟು, 'ನಾನು ಇವನೊಡನೆ ಸ್ನೇಹ ಮಾಡಿಕೊಂಡರೆ, ಅಣ್ಣ ಸತ್ತು ಇವನು ರಾಜ್ಯಕ್ಕೆ ಬಂದಾಗ ನನ್ನನ್ನು ಸ್ವೀಕರಿಸುವನು' ಎಂದು ಚಿಂತಿಸಿದಳು. ಆಗ ಅವಳಿಗೆ 'ನಾನು ಕುರುಧರ್ಮವನ್ನು ಪಾಲಿಸುವವಳು, ಸ್ವಂತ ಸ್ವಾಮಿಯುಳ್ಳವಳಾಗಿ ಅನ್ಯಪುರುಷನನ್ನು ಆಸೆಪಟ್ಟು ನೋಡಿದೆ. ನನ್ನ ಶೀಲಭಂಗವಾಗಿರಬೇಕು' ಎಂದು ಶಂಕೆಯುಂಟಾಯಿತು. ಆದರಿಂದ ಹಾಗೆಂದಳು.

ಆಗ ಆ ದೂತರು "ಆರ್ಯೆ, ಮನಸ್ಸಿನಲ್ಲಿ ಬಂದ ಮಾತ್ರಕ್ಕೇ ಅತ್ಯಾಚಾರವಾಗುವುದಿಲ್ಲ. ನಿನಗೆ ಇಷ್ಟಕ್ಕೇ ಶಂಕೆಯುಂಟಾಗುವುದಾದರೆ ನೀನು ಏನು ಕೆಟ್ಟಕೆಲಸ ಮಾಡಬಲ್ಲೆ? ಇಷ್ಟರಿಂದ ಶೀಲಭಂಗವಾಗದು. ನಮಗೆ ಕುರುಧರ್ಮವನ್ನು ಕೊಡು" ಎಂದು ಹೇಳಿ, ಅವಳಿಂದಲೂ ತೆಗೆದುಕೊಂಡು ಚಿನ್ನದ ಪಟ್ಟಿಯಲ್ಲಿ ಬರೆದರು.

"ಅಪ್ಪಾ, ಹೀಗಾದರೂ ನನಗೆ ಶಾಂತಿಯಿಲ್ಲ. ಉಪರಾಜನು ಅದನ್ನು ಚೆನ್ನಾಗಿ ಪಾಲಿಸುವನು. ಅವನ ಬಳಿ ತೆಗೆದುಕೊಳ್ಳಿರಿ."

ಅವರು ಅನಂತರ ಉಪರಾಜನ ಬಳಿಗೆ ಹೋಗಿ ಮೊದಲಿನಂತೆಯೇ ಕುರುಧರ್ಮವನ್ನು ಯಾಚಿಸಿದರು.

ಅವನು ಸಾಯಂಕಾಲ ರಾಜನ ಸೇವೆಗೆ ಹೋಗುತ್ತಾ ರಥದಲ್ಲಿಯೇ ರಾಜಾಂಗಣಕ್ಕೆ ಬಂದು, ರಾಜನೊಡನೆ ಊಟಮಾಡಿ, ಅಲ್ಲಿಯೇ ಮಲಗಬಯಸಿದರೆ ಹಗ್ಗವನ್ನೂ ಬಾರುಕೋಲನ್ನೂ ನೊಗದ ಮೇಲೆಯೇ ಎಸೆಯುತ್ತಿದ್ದನು. ಆ ಗುರುತಿನಿಂದ ಜನರು ಹೊರಟುಹೋಗಿ, ಮಾರನೆಯ

ದಿವಸ ಬೆಳಗ್ಗೆಯೇ ಬಂದು ಅವನು ಹೊರಡುವುದನ್ನು ನೋಡುತ್ತಾ ನಿಂತುಕೊಳ್ಳುವರು. ಸಾರಥಿಯೂ ರಥವನ್ನು ಮುಚ್ಚಿಟ್ಟು, ಮಾರನೆಯ ದಿನ ಬೆಳಗ್ಗೆ ರಥವನ್ನು ತೆಗೆದುಕೊಂಡು ಬಂದು ರಾಜದ್ವಾರದಲ್ಲಿ ನಿಲ್ಲುವನು. ಆದರೆ ಅದೇ ಕ್ಷಣದಲ್ಲಿಯೇ ಹೊರಟುಹೋಗಬಯಸಿದರೆ, ಹಗ್ಗವನ್ನೂ ಬಾರುಕೋಲನ್ನೂ ರಥದಲ್ಲಿಯೇ ಹಾಕಿ, ರಾಜನ ಸೇವೆಗೆ ಹೋಗುವನು. ಜನರು ಆ ಗುರುತಿನಿಂದ 'ಈಗಲೇ ಹೊರಡುವನು' ಎಂದು ರಾಜದ್ವಾರದಲ್ಲೇ ನಿಲ್ಲುವರು. ಅವನು ಒಂದು ದಿವಸ ಹೀಗೇ ಮಾಡಿ ರಾಜನ ಮನೆಯನ್ನು ಹೊಕ್ಕನು. ಹೊಕ್ಕೊಡನೆಯೆ ಮಳೆ ಬಂದಿತು. ರಾಜನು ಮಳೆ ಬರುತ್ತಿದೆಯೆಂದು ಅವನನ್ನು ಹೋಗಗೊಡ ಲಿಲ್ಲ. ಅವನು ಅಲ್ಲಿಯೇ ಊಟಮಾಡಿ ಮಲಗಿದನು. ಮಹಾಜನರು ಈಗಲೇ ಬಂದು ಹೊರಡುವನೆಂದು ರಾತ್ರಿಯೆಲ್ಲಾ ನೆನೆಯುತ್ತಾ ನಿಂತಿ ದ್ದರು. ಉಪರಾಜನು ಎರಡನೆಯ ದಿವಸ ಹೊರಗೆ ಬಂದು, ನೆನೆಯುತ್ತಾ ನಿಂತಿದ್ದ ಮಹಾಜನರನ್ನು ನೋಡಿ, "ನಾನು ಕುರುಧರ್ಮವನ್ನು ಪಾಲಿಸುವವನು ಇಷ್ಟು ಜನರನ್ನು ಕ್ಲೇಶಪಡಿಸಿದೆ. ನನ್ನ ಶೀಲ ಭಂಗ ವಾಗಿರಬೇಕು" ಎಂದು ಶಂಕೆಗೊಂಡನು.

ಅದರಿಂದ ಆ ದೂತರನ್ನು ಕುರಿತು "ನಾನು ಕುರುಧರ್ಮವನ್ನು ಪಾಲಿಸುವೆನು, ನಿಜ. ಇದರಲ್ಲಿ ನನಗೆ ಇದೇ ಶಂಕೆಯಿದೆ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದು ಹೇಳಿ ಆ ವಿಚಾರವನ್ನು ತಿಳಿಸಿದನು.

ಆಗ ಆ ದೂತರು "ದೇವ, 'ಇವರು ತೊಂದರೆಪಡಲಿ' ಎಂದು ನಿನಗೆ ಇಷ್ಟವಿರಲಿಲ್ಲ. ಮನಸ್ಸು ಮಾಡಿದ ಹೊರತು ಕರ್ಮವಾಗದು. ಇಷ್ಟಕ್ಕೇ ಶಂಕೆ ಪಡುವ ನಿನ್ನಿಂದ ಏನು ತಾನೆ ತಪ್ಪು ಆದೀತು?" ಎಂದು ಹೇಳಿ, ಅವನ ಬಳಿಯೂ ಶೀಲಗಳನ್ನು ಕೊಂಡು ಚಿನ್ನದ ಪಟ್ಟಿಯಲ್ಲಿ ಬರೆದರು.

"ಆದರೂ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಪುರೋಹಿತನು ಚೆನ್ನಾಗಿ ಪಾಲಿಸುವನು, ಅವನ ಬಳಿ ತೆಗೆದುಕೊಳ್ಳಿರಿ."

ಅದರಂತೆಯೇ ಅವರು ಪುರೋಹಿತನ ಬಳಿಸಾರಿ ಬೇಡಿದರು.

ಅವನೂ ಒಂದು ದಿವಸ ರಾಜನ ಸೇವೆಗೆ ಹೋಗುತ್ತಾ, ಒಬ್ಬಾನೊಬ್ಬ ರಾಜನು ಆ ರಾಜನಿಗೆ ಕಳಿಸಿದ ಎಳೆಯ ಸೂರ್ಯನ ಬಣ್ಣದ ರಥವನ್ನು ನಡುದಾರಿಯಲ್ಲಿ ಕಂಡು, 'ಇದು ಯಾರ ರಥ?' ಎಂದು ಕೇಳಿ, 'ರಾಜನಿಗಾಗಿ ತಂದುದು' ಎಂದು ಹೇಳಲು, 'ನಾನು ವಯಸ್ಸಾದವನು. ರಾಜನು ನನಗೆ ಈ ರಥ ಕೊಟ್ಟರೆ ಸುಖವಾಗಿ ಇದನ್ನು ಏರಿ ತಿರುಗುವೆನು' ಎಂದು ಚಿಂತಿಸಿ, ರಾಜನ ಸೇವೆಗೆ ಹೋಗಿ, ಅಲ್ಲಿ ಅವನಿಗೆ ಜಯವಾಗಲೆಂದು ಹರಸಿ ಕುಳಿತಿರುವಾಗ ರಥವನ್ನು ತಂದು ಕಾಣಿಸಿದರು. ರಾಜನು ಅದನ್ನು ಕಂಡು, "ಈ ರಥ ಅತಿ ಸುಂದರವಾಗಿದೆ. ಇದನ್ನು ಆಚಾರ್ಯನಿಗೆ ಕೊಡಿರಿ" ಎಂದನು. ಪುರೋಹಿತನು ಅದಕ್ಕೆ ಇಷ್ಟಪಡಲಿಲ್ಲ. ಪುನಃ ಪುನಃ ಹೇಳಿದರೂ ಇಷ್ಟಪಡಲಿಲ್ಲ. "ನಾನು ಕುರುಧರ್ಮವನ್ನು ಪಾಲಿಸುತ್ತಿದ್ದರೂ ಇನ್ನೊಬ್ಬರದಕ್ಕೆ ಆಸೆಪಟ್ಟೆ. ನನಗೆ ಶೀಲಭಂಗವಾಗಿರಬೇಕು" ಎಂದು ಅವನಿಗೆನ್ನಿಸಿತು.

ಅವನು ಅದನ್ನು ತಿಳಿಸಿ, "ಅಪ್ಪಾ, ನನ್ನ ಕುರುಧರ್ಮದಲ್ಲಿ ನನಗೆ ಶಂಕೆಯಿದೆ. ಆ ಧರ್ಮದಿಂದ ನನಗೆ ಸಮಾಧಾನವಿಲ್ಲ. ಆದ್ದರಿಂದ ನಾನು ಕೊಡಲಾರೆ" ಎಂದನು.

ಆಗ ಆ ದೂತರು "ಆರ್ಯನಿಗೆ ಆಸೆ ಹುಟ್ಟಿದ ಮಾತ್ರಕ್ಕೇ ಅವನ ಶೀಲಭಂಗವಾಗದು. ನೀವು ಇಷ್ಟಕ್ಕೇ ಶಂಕೆಪಡುವವರು ಏನು ತಪ್ಪು ಮಾಡೀರಿ?" ಎಂದು ಹೇಳಿ ಅವನಿಂದಲೂ ಶೀಲವನ್ನು ತೆಗೆದುಕೊಂಡು ಚಿನ್ನದ ಪಟ್ಟಿಯಲ್ಲಿ ಬರೆದರು.

"ಆದರೂ ನನಗೆ ಸಮಾಧಾನವಿಲ್ಲ. ರಜ್ಜುಗ್ರಾಹಕಾಮಾತ್ಯನು ಚೆನ್ನಾಗಿ ಪಾಲಿಸುವನು. ಅವನ ಬಳಿ ತೆಗೆದುಕೊಳ್ಳಿರಿ."

ಅವರು ಅವನ ಬಳಿಗೂ ಹೋಗಿ ಬೇಡಿದರು.

ಅವನು ಕೂಡ ಒಂದು ದಿವಸ ಒಂದು ಹೊಲವನ್ನು ಅಳೆಯುತ್ತಾ ಹಗ್ಗವನ್ನು ದೊಣ್ಣೆಗೆ ಕಟ್ಟಿ, ಒಂದು ಕೊನೆಯನ್ನು ಹೊಲದ ಒಡೆಯನಿಂದ ಹಿಡಿಸಿ, ಒಂದನ್ನು ತಾನು ಹಿಡಿದನು. ಅವನು ಹಿಡಿದ ಹಗ್ಗದ ಕೊನೆಗೆ ಬಿಗಿದ ದೊಣ್ಣೆ ಒಂದು ಏಡಿಯ ಬಿಲದ ಮಧ್ಯಕ್ಕೆ ಬಂದಿತು.

ಅವನು " ದೊಣ್ಣೆಯನ್ನು ಬಿಲದಲ್ಲಿ ಇಳಿಸಿದರೆ, ಬಿಲದೊಳಗೆ ಏಡಿ ನಾಶವಾಗುತ್ತದೆ. ಬಿಲದಿಂದ ಮುಂದೆ ಇಟ್ಟರೆ, ರಾಜನ ಸ್ವತ್ತು ನಾಶವಾಗುತ್ತದೆ. ಬಿಲದ ಆಚೆ ಇಟ್ಟರೆ, ಮನೆಯವನ ಸ್ವತ್ತು ನಾಶವಾಗುತ್ತದೆ. ಏನು ಮಾಡತಕ್ಕದು ? " ಎಂದು ಚಿಂತಿಸಿದನು. ಆಗ ಅವನಿಗೆ " ಬಿಲದಲ್ಲಿ ಏಡಿ ಇರಬಹುದು. ಇದ್ದರೆ ತಿಳಿಯುವುದು. ಇಲ್ಲಿಯೇ ದೊಣ್ಣೆಯನ್ನು ಇಳಿಸುವೆನು " ಎನ್ನಿಸಿತು. ಬಿಲದಲ್ಲಿ ದೊಣ್ಣೆಯನ್ನು ಇಳಿಸಿದನು. ಏಡಿ ಕಿರ್ರೆಂದು ಶಬ್ದಮಾಡಿತು. ಆಗ " ದೊಣ್ಣೆ ಏಡಿಯ ಬೆನ್ನ ಮೇಲೆ ಇಳಿದಿರಬೇಕು. ಏಡಿ ಸತ್ತಿರಬೇಕು. ನಾನು ಕುರುಧರ್ಮವನ್ನು ಪಾಲಿಸುವವನು. ಇದರಿಂದ ನನ್ನ ಶೀಲಭಂಗವಾಯಿತು " ಎಂದು ಅವನಿಗೆನ್ನಿಸಿತು.

ಅವನು ಅದನ್ನು ಅವರಿಗೆ ತಿಳಿಸಿ, " ಈ ಕಾರಣದಿಂದ ನನ್ನ ಕುರುಧರ್ಮದಲ್ಲಿ ನನಗೆ ಶಂಕೆಯಿದೆ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದನು.

ಆಗ ಆ ದೂತರು " ಏಡಿ ಸಾಯಲೆಂದು ನಿನಗೆ ಮನಸ್ಸಿರಲಿಲ್ಲ. ಚೇತನೆಯಿಲ್ಲದೆ ಕರ್ಮವಾಗದು. ಇಷ್ಟಕ್ಕೇ ಶಂಕೆಪಡುವ ನೀನು ಏನು ತಪ್ಪುಮಾಡೀಯೆ ? " ಎಂದು ಹೇಳಿ, ಅವನ ಬಳಿಯೂ ಶೀಲಗಳನ್ನು ತೆಗೆದುಕೊಂಡು ಚಿನ್ನದ ಪಟ್ಟೆಯಲ್ಲಿ ಬರೆದುಕೊಂಡರು.

" ಆದರೂ ಇದರಿಂದ ನನಗೆ ಸಮಾಧಾನವಿಲ್ಲ. ಸಾರಥಿ ಚೆನ್ನಾಗಿ ಪಾಲಿಸುವನು. ಅವನ ಬಳಿ ಕೊಳ್ಳಿರಿ".

ಅವರು ಅವನನ್ನೂ ಸಾರಿ ಯಾಚಿಸಿದರು.

ಅವನು ಒಂದು ದಿನ ರಾಜನನ್ನು ರಥದಲ್ಲಿ ಉದ್ಯಾನಕ್ಕೆ ಒಯ್ದನು. ರಾಜನು ಆ ಹಗಲು ಕ್ರೀಡೆಯಾಡಿ ಸಾಯಂಕಾಲಕ್ಕೆ ಹೊರಟು ರಥವನ್ನು ಏರಿದನು. ಅವನು ನಗರವನ್ನು ಸೇರುವಷ್ಟರಲ್ಲಿ ಸೂರ್ಯ ಮುಳುಗುವ ಹೊತ್ತಿಗೆ ಮೇಘವೆದ್ದಿತು. ರಾಜನು ನೆನೆಯುವನೆಂಬ ಭಯದಿಂದ ಸಾರಥಿಯು ಆ ಸಿಂಧೂದೇಶದ ಕುದುರೆಗಳಿಗೆ ಬಾರುಕೋಲಿನಿಂದ ಸನ್ನೆ ಮಾಡಿದನು. ಅವು ವೇಗವಾಗಿ ಓಡಿದುವು.

ಅಂದಿನಿಂದ ಪುನಃ ಉದ್ಯಾನಕ್ಕೆ ಹೋಗುವಾಗಲೂ ಬರುವಾಗಲೂ ಆ ಸ್ಥಾನಕ್ಕೆ ಬಂದೊಡನೆ 'ಈ ಸ್ಥಾನದಲ್ಲಿ ತೊಂದರೆಯಾದೀತು. ಅದಕ್ಕಾಗಿ ಸಾರಥಿ ಬಾರುಕೋಲಿನಿಂದ ಸನ್ನೆ ಮಾಡಿದನು' ಎಂದು ವೇಗದಿಂದ ಹೋಗುತ್ತಿದ್ದುವು. ಸಾರಥಿಗೂ "ರಾಜನು ನೆನೆಯಲಿ, ನೆನೆಯದಿರಲಿ, ನನ್ನದೇನೂ ದೋಷವಿಲ್ಲ. ಆದರೂ ನಾನು ಸುಶಿಕ್ಷಿತವಾದ ಈ ಸೈಂಧವಗಳಿಗೆ ಬಾರುಕೋಲಿನ ಸನ್ನೆಯನ್ನು ಅನ್ಯಾಯವಾಗಿ ಕೊಟ್ಟೆ. ಅದರಿಂದ ಇವು ಅಂದಿನಿಂದ ವೇಗವಾಗಿ ಹೋಗಿ ಶ್ರಮಪಡುವುವು. ನಾನು ಕುರುಧರ್ಮವನ್ನು ಪಾಲಿಸುವವನು. ಇದರಿಂದ ನನ್ನ ಶೀಲ ಭಂಗವಾಗಿರಬೇಕು" ಎಂದೆನ್ನಿಸಿತು.

ಅವನು ಅದನ್ನು ಅವರಿಗೆ ತಿಳಿಸಿ "ಈ ಕಾರಣದಿಂದ ನನಗೆ ನನ್ನ ಕುರುಧರ್ಮದಲ್ಲಿ ಶಂಕೆಯಿದೆ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದನು.

ಆಗ ಆ ದೂತರು "ಸೈಂಧವಗಳಿಗೆ ಕ್ಲೇಶವಾಗಲೆಂದು ನಿನಗೆ ಮನಸ್ಸಿರಲಿಲ್ಲ. ಮನಸ್ಸಿಲ್ಲದೆ ಕರ್ಮವಾಗದು. ಇಷ್ಟಕ್ಕೇ ಶಂಕೆಪಡುವ ನೀನು ಏನು ಪಾಪ ಮಾಡೀಯೆ?" ಎಂದು ಹೇಳಿ, ಅವನ ಬಳಿಯೂ ಶೀಲವನ್ನು ಕೊಂಡು ಚಿನ್ನದ ಪಟ್ಟೆಯಲ್ಲಿ ಬರೆದುಕೊಂಡರು.

"ಆದರೂ ನನಗೆ ಸಮಾಧಾನವಿಲ್ಲ. ಶ್ರೇಷ್ಠಿ ಚೆನ್ನಾಗಿ ಪಾಲಿಸು ವನು. ಅವನ ಬಳಿ ಕೊಳ್ಳಿರಿ."

ಅವರು ಅವನ ಬಳಿಗೂ ಹೋಗಿ ಬೇಡಿದರು.

ಅವನು ಕೂಡ ಒಂದು ದಿವಸ ತನ್ನ ಬತ್ತದ ಗದ್ದೆಗೆ ಹೋಗಿ, ಗರ್ಭದಿಂದ ಹೊರಗೆ ಬರುವ ಬತ್ತದ ತೆನೆಗಳನ್ನು ನೋಡಿ, 'ಬತ್ತದ ಗೊಂಚಲನ್ನು ಕಟ್ಟಿಸುವೆನು' ಎಂದು ಒಂದು ಹಿಡಿ ತೆನೆಯನ್ನು ಹಿಡಿಸಿ ಗೂಟಕ್ಕೆ ಕಟ್ಟಿಸಿದನು. ಆಗ "ಗದ್ದೆಯಿಂದ ನಾನು ರಾಜನಿಗೆ ಭಾಗ ಕೊಡಬೇಕು. ಇನ್ನೂ ಭಾಗವನ್ನು ಕೊಡದ ಗದ್ದೆಯಿಂದ ಒಂದು ಹಿಡಿ ತೆನೆಯನ್ನು ಹಿಡಿಸಿದೆ. ನಾನು ಕುರುಧರ್ಮವನ್ನು ಪಾಲಿಸುವವನು. ಇದರಿಂದ ನನ್ನ ಶೀಲಭಂಗವಾಗಿರಬೇಕು" ಎಂದು ಅವನಿಗೆನ್ನಿಸಿತು.

ಅವನು ಅದನ್ನು ಅವರಿಗೆ ತಿಳಿಸಿ, "ಈ ಕಾರಣದಿಂದ ನನಗೆ ನನ್ನ ಕುರುಧರ್ಮದಲ್ಲಿ ಶಂಕೆಯಿದೆ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದನು.

ಆದಕ್ಕೆ ಆ ದೂತರು "ನಿನಗೆ ಕದಿಯಬೇಕೆಂದು ಮನಸ್ಸಿರಲಿಲ್ಲ. ಅದಿಲ್ಲದಿದ್ದರೆ ಕೊಡದುದನ್ನು ಕೊಂಡರೆಂದು ತಿಳಿಯಲಾಗದು. ಇಷ್ಟಕ್ಕೇ ನಿನಗೆ ಶಂಕೆಯುಂಟಾದರೆ ನೀನು ಇನ್ನೇನು ಅನ್ಯರದು ಕೊಂಡೀಯೆ?" ಎಂದು ಹೇಳಿ, ಅವನಿಂದಲೂ ತೆಗೆದುಕೊಂಡು, ಚಿನ್ನದ ಪಟ್ಟಿಯಲ್ಲಿ ಬರೆದುಕೊಂಡರು.

"ಆದರೂ ನನಗೆ ಸಮಾಧಾನವಿಲ್ಲ. ಮಹಾಮಾತ್ರನಾದ ದ್ರೋಣಮಾಪಕನು ಚೆನ್ನಾಗಿ ಪಾಲಿಸುತ್ತಾನೆ. ಅವನ ಬಳಿ ಕೊಳ್ಳಿರಿ."

ಅವರು ಅವನ ಬಳಿಯೂ ಹೋಗಿ ಬೇಡಿದರು.

ಅವನು ಒಂದು ದಿನ ಕಣಜದ ಬಾಗಿಲಲ್ಲಿ ಕುಳಿತು ರಾಜನ ಭಾಗದ ಬತ್ತವನ್ನು ಅಳೆಸುತ್ತಾ ಅಮಿತವಾದ ಬತ್ತದ ರಾಶಿಯಿಂದ ಒಂದು ಬತ್ತ ತೆಗೆದು ಗುರುತಿಗೆ ಇಟ್ಟನು. ಅದೇ ಗಳಿಗೆ ಮಳೆ ಬಿತ್ತು. ಮಹಾಮಾತ್ರನು ಗುರುತುಗಳನ್ನು ಎಣಿಸಿ, 'ಅಳೆದ ರಾಶಿ ಇಷ್ಟಾಯಿತು' ಎಂದು ಹೇಳುತ್ತಾ ಗುರುತಿನ ಬತ್ತಗಳನ್ನು ಗುಡಿಸಿ, ಅಳೆದ ರಾಶಿಯಲ್ಲಿ ಹಾಕಿ, ಬೇಗ ಹೋಗಿ ಬಾಗಿಲ ಬಳಿಯ ಕೋಣೆಯಲ್ಲಿ ನಿಂತು, "ಗುರುತಿಗಾಗಿ ಇಟ್ಟ ಬತ್ತಗಳನ್ನು ಅಳೆದ ರಾಶಿಯಲ್ಲಿ ಹಾಕಿದೆನೋ ? ಅಳೆಯದ ರಾಶಿಯಲ್ಲೋ ?" ಎಂದು ಚಿಂತಿಸಿದನು. ಆಗ ಅವನಿಗೆ "ನಾನು ಅಳೆದ ರಾಶಿಯಲ್ಲಿ ಎಸೆದಿದ್ದರೆ ಅಕಾರಣವಾಗಿ ರಾಜನ ಸ್ವತ್ತು ಹೆಚ್ಚಾಯಿತು, ಮನೆಯವನ ಸ್ವತ್ತು ಹಾಳಾಯಿತು. ನಾನು ಕುರುಧರ್ಮವನ್ನು ಪಾಲಿಸುವವನು. ಇದರಿಂದ ನನ್ನ ಶೀಲಭಂಗವಾಗಿರಬೇಕು" ಎಂದೆನ್ನಿಸಿತು.

ಅವನು ಅದನ್ನು ಅವರಿಗೆ ತಿಳಿಸಿ, "ಈ ಕಾರಣದಿಂದ ನನಗೆ ನನ್ನ ಕುರುಧರ್ಮದಲ್ಲಿ ಶಂಕೆಯಿದೆ. ನಾನು ನಿಮಗೆ ಕೊಡಲಾರೆ" ಎಂದನು.

ಆಗ ಆ ದೂತರು "ನಿನಗೆ ಕದಿಯುವ ಮನಸ್ಸಿರಲಿಲ್ಲ. ಅದು ಇದ್ದ ಹೊರತು, ಕೊಡುದುದನ್ನು ಕೊಂಡನೆಂದು ತಿಳಿಯಲಾಗದು. ಇಷ್ಟಕ್ಕೇ ಶಂಕೆಪಡುವ ನೀನು ಇನ್ನೇನು ಅನ್ಯರದನ್ನು ಕೊಂಡೀಯೆ ?" ಎಂದು ಹೇಳಿ, ಅವನ ಬಳಿಯೂ ಶೀಲಗಳನ್ನು ತೆಗೆದುಕೊಂಡು ಚಿನ್ನದ ಪಟ್ಟಿಯಲ್ಲಿ ಬರೆದುಕೊಂಡರು.

"ಆದರೂ ನನಗೆ ಸಮಾಧಾನವಿಲ್ಲ. ದ್ವಾರಪಾಲಕನು ಚೆನ್ನಾಗಿ ಪಾಲಿಸುತ್ತಾನೆ. ಅವನ ಬಳಿ ಕೊಳ್ಳಿರಿ."

ಅವರು ಅವನ ಬಳಿಯೂ ಹೋಗಿ ಬೇಡಿದರು.

ಅವನು ಕೂಡ ಒಂದು ದಿವಸ ನಗರದ ಬಾಗಿಲನ್ನು ಹಾಕುವ ವೇಳೆಯಲ್ಲಿ ಮೂರು ಸಲ ಕೇಳಿಬರುವಂತೆ ಕೂಗಿದನು. ಆಗ ಒಬ್ಬ ದರಿದ್ರ ಮನುಷ್ಯನು ತನ್ನ ಚಿಕ್ಕ ತಂಗಿಯೊಡನೆ ಕಟ್ಟಿಗೆ ಎಲೆಗಳಿಗಾಗಿ ಕಾಡಿಗೆ ಹೋಗಿದ್ದು ಹಿಂದಿರುಗುವಾಗ ಆ ಶಬ್ದವನ್ನು ಕೇಳಿ ತಂಗಿಯನ್ನು ಕರೆದುಕೊಂಡು ವೇಗದಿಂದ ಬಂದನು. ಆಗ ದೌವಾರಿಕನು ಅವನನ್ನು ಕುರಿತು "ರಾಜನು ನಗರದಲ್ಲಿಲ್ಲವೆಂಬುದು ನಿನಗೆ ತಿಳಿಯದೆ? ಈ ನಗರದ ಬಾಗಿಲನ್ನು ಸಕಾಲದಲ್ಲಿಯೇ ಮುಚ್ಚುವರೆಂಬುದು ತಿಳಿಯದೆ? ನಿನ್ನ ಸ್ತ್ರೀಯನ್ನು ಕರೆದುಕೊಂಡು ಕಾಡಿನಲ್ಲಿ ರತಿಕ್ರೀಡೆಯಾಡುತ್ತಾ ತಿರುಗುವೆಯೊ?" ಎಂದನು. ಅದಕ್ಕೆ ಅವನು "ಸ್ವಾಮಿ, ಇವಳು ನನ್ನ ಹೆಂಡತಿಯಲ್ಲ, ನನ್ನ ತಂಗಿ" ಎಂದನು. ಆಗ ದೌವಾರಿಕನು "ಅಕಾರಣವಾಗಿ ನಾನು ತಂಗಿಯನ್ನು ಹೆಂಡತಿಯೆಂದು ಹೇಳಿದೆನು. ನಾನು ಕುರುಧರ್ಮವನ್ನು ಪಾಲಿಸುವವನು. ಇದರಿಂದ ನನ್ನ ಶೀಲಭಂಗವಾಗಿರಬೇಕು" ಎಂದುಕೊಂಡನು.

ಅವನು ಅದನ್ನು ಅವರಿಗೆ ತಿಳಿಸಿ, "ಈ ಕಾರಣದಿಂದ ನನ್ನ ಕುರುಧರ್ಮದಲ್ಲಿ ನನಗೆ ಶಂಕೆಯಿದೆ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದನು.

ಆಗ ಆ ದೂತರು "ನೀನು ಹಾಗೆಂದುಕೊಂಡು ಹೇಳಿದೆ. ಇದರಲ್ಲಿ ಶೀಲಭಂಗವೇನಿಲ್ಲ. ಇಷ್ಟಕ್ಕೇ ಶಂಕೆಪಡುವ ನೀನು ಕುರುಧರ್ಮದಲ್ಲಿ

ಸುಳ್ಳೆಂಬುದನ್ನು ಹೇಗೆ ತಾನೆ ಆಡೀಯೆ ?" ಎಂದು ಅವನ ಬಳಿಯೂ ಶೀಲಗಳನ್ನು ಕೊಂಡು, ಚಿನ್ನದ ಪಟ್ಟಿಯಲ್ಲಿ ಬರೆದುಕೊಂಡರು.

"ಆದರೂ ನನಗೆ ಸಮಾಧಾನವಿಲ್ಲ. ವರ್ಣದಾಸಿ ಚೆನ್ನಾಗಿ ಪಾಲಿಸುತ್ತಾಳೆ. ಅವಳ ಬಳಿ ಕೊಳ್ಳಿರಿ."

ಅವರು ಅವಳ ಬಳಿಯೂ ಹೋಗಿ ಯಾಚಿಸಿದರು. ಅವಳೂ ಹಿಂದಿನವರಂತೆಯೇ ಹಿಂದೆಗೆದಳು.

ದೇವೇಂದ್ರನಾದ ಶಕ್ರನು ಅವಳ ಶೀಲವನ್ನು ವಿಮರ್ಶೆಮಾಡ ಬೇಕೆಂದು ಯುವಕನ ರೂಪಿನಿಂದ ಬಂದು, ತಾನು ಬರುವೆನೆಂದು ಸಾವಿರವನ್ನು ಕೊಟ್ಟು, ದೇವಲೋಕಕ್ಕೇ ಹೋಗಿ, ಮೂರು ವರ್ಷ ಗಳಾದರೂ ಬರಲಿಲ್ಲ. ಅವಳು ತನ್ನ ಶೀಲಭಂಗವಾಗುವುದೆಂಬ ಭಯ ದಿಂದ ಮೂರುವರ್ಷ ಅನ್ಯಪುರುಷನ ಕೈಯಿಂದ ತಾಂಬೂಲವನ್ನು ಕೂಡ ಕೊಳ್ಳಲಿಲ್ಲ. ಅವಳು ಅನುಕ್ರಮವಾಗಿ ದುರ್ಗತಿಗೆ ಬಂದು, "ನನಗೆ ಸಾವಿರ ಕೊಟ್ಟುಹೋದ ಪುರುಷನು ಮೂರು ವರ್ಷವಾದರೂ ಬಾರದೆ ಇರುವುದರಿಂದ ನಾನು ದುರ್ಗತಿಗೆ ಬಂದೆ. ಬದುಕುವುದಕ್ಕೂ ಆಗದಂತೆ ಇದೆ. ಆದ್ದರಿಂದ ತೀರ್ಪುಕೊಡುವ ಮಹಾಮಾತ್ರನಿಗೆ ನಾನು ಇದನ್ನು ತಿಳಿಸಿ, ವೆಚ್ಚಕ್ಕೆ ಪಡೆಯುವುದು ಆಗಬಹುದು" ಎಂದು ತೀರ್ಮಾನದ ಎಡೆಗೆ ಹೋಗಿ, "ಸ್ವಾಮಿ, ನನಗೆ ವೆಚ್ಚಕ್ಕೆ ಕೊಟ್ಟ ಪುರುಷನು ಹೋಗಿ ಮೂರು ವರ್ಷವಾಯಿತು. ಸತ್ತನೋ, ಅದೂ ತಿಳಿಯೆ. ಬದುಕುವು ದಕ್ಕೂ ನನಗೆ ಆಗುತ್ತಿಲ್ಲ. ಏನು ಮಾಡಲಿ, ಸ್ವಾಮಿ ?" ಎಂದಳು. "ಮೂರು ವರ್ಷಗಳಾದರೂ ಬಾರದಿದ್ದರೆ ಏನು ಮಾಡುವೆ ? ಇಂದಿ ನಿಂದ ವೆಚ್ಚಕ್ಕೆ ತೆಗೆದುಕೊ" ಎಂದು ಅವನು ಹೇಳಿದನು. ಅವಳು ಹೀಗೆ ತೀರ್ಪನ್ನು ಪಡೆದು ಅಲ್ಲಿಂದ ಹೊರಡುವಾಗಲೇ ಒಬ್ಬನು ಸಾವಿರದ ಮೊತ್ತವನ್ನು ತಂದನು. ಅದನ್ನು ತೆಗೆದುಕೊಳ್ಳುವುದಕ್ಕಾಗಿ ಅವಳು ಕೈಗಳನ್ನು ನೀಡಿದಾಗ ಶಕ್ರನು ತನ್ನನ್ನು ಕಾಣಿಸಿಕೊಂಡನು. ಅವಳು ಅವನನ್ನು ಕಂಡೊಡನೆಯೆ "ಮೂರು ವರ್ಷದ ಮೊದಲು ನನಗೆ ಸಾವಿರ ಕೊಟ್ಟವನು ಬಂದನು. ನಿನ್ನ ಹಣ ನನಗೆ ಬೇಕಾಗಿಲ್ಲ" ಎಂದು

ಕೈಗಳನ್ನು ಹಿಂದೆಳೆದುಕೊಂಡಳು. ಶಕ್ರನು ತನ್ನ ಸ್ವಂತ ಶರೀರವನ್ನೇ ನಿರ್ಮಿಸಿಕೊಂಡು ತರುಣಸೂರ್ಯನಂತೆ ಪ್ರಜ್ವಲಿಸುತ್ತಾ ಆಕಾಶದಲ್ಲಿ ನಿಂತನು. ನಗರವೆಲ್ಲಾ ಬಂದು ಸೇರಿತು. ಶಕ್ರನು ಮಹಾಜನರ ಮಧ್ಯೆ ನಿಂತು, "ನಾನು ಇವಳನ್ನು ವಿಮರ್ಶೆಮಾಡುವುದಕ್ಕಾಗಿ ಮೂರುವರ್ಷದ ಮೊದಲು ಸಾವಿರ ಕೊಟ್ಟಿದ್ದೆ. ಶೀಲಗಳನ್ನು ಪಾಲಿಸುವುದಾದರೆ ಇವಳಂತೆ ಆಗಿ ಪಾಲಿಸಿರಿ" ಎಂದು ಬುದ್ಧಿವಾದ ಕೊಟ್ಟು, ಅವಳ ಮನೆಯನ್ನು ಸಪ್ತರತ್ನಗಳಿಂದ ತುಂಬಿ, "ಇಂದಿನಿಂದ ಮೊದಲುಗೊಂಡು ಅಪ್ರಮತ್ತಳಾಗಿರು" ಎಂದು ಅವಳಿಗೆ ಅನುಶಾಸನೆಮಾಡಿ ದೇವಲೋಕಕ್ಕೇ ಹೋದನು.

ಈ ಕಾರಣದಿಂದ ಅವಳು "ನಾನು ತೆಗೆದುಕೊಂಡ ವೆಚ್ಚವನ್ನು ಜೀರ್ಣಿಸಿಕೊಳ್ಳದೆಯೇ ಇನ್ನೊಬ್ಬನು ಕೊಡಬಂದುದಕ್ಕೆ ಕೈ ನೀಡಿದೆ. ಇದರಿಂದ ನನ್ನ ಶೀಲದಲ್ಲಿ ನನಗೆ ಸಮಾಧಾನವಿಲ್ಲ. ಆದ್ದರಿಂದ ನಾನು ನಿಮಗೆ ಕೊಡಲಾರೆ" ಎಂದು ಹಿಂದೆಗೆದಳು.

ಆಗ ಆ ದೂತರು "ಕೈ ನೀಡಿದ ಮಾತ್ರದಿಂದಲೇ ಶೀಲಭಂಗವಿಲ್ಲ. ಇಂತಹ ಶೀಲ ಪರಮ ಪರಿಶುದ್ಧವಾದುದು" ಎಂದು ಹೇಳಿ, ಅವಳ ಬಳಿಯೂ ಶೀಲಗಳನ್ನು ಗ್ರಹಿಸಿ ಚಿನ್ನದ ಪಟ್ಟಿಗಳಲ್ಲಿ ಬರೆದುಕೊಂಡರು.

ಹೀಗೆ ಆ ಹನ್ನೊಂದು ಜನರು ಪಾಲಿಸುತ್ತಿದ್ದ ಶೀಲಗಳನ್ನು ಅವರು ಚಿನ್ನದ ಪಟ್ಟಿಯಲ್ಲಿ ಬರೆದುಕೊಂಡು ದಂತಪುರಕ್ಕೆ ಹೋಗಿ ಕಾಳಿಂಗ ರಾಜನಿಗೆ ಚಿನ್ನದ ಪಟ್ಟಿಯನ್ನು ಕೊಟ್ಟು ಆ ನಡೆದುದನ್ನು ತಿಳಿಸಿದರು. ರಾಜನು ಆ ಕುರುಧರ್ಮದಲ್ಲಿ ನಡೆಯುತ್ತಾ ಪಂಚಶೀಲಗಳನ್ನು ಪೂರೈಸಿದನು. ಆಗ ಕಾಳಿಂಗ ರಾಷ್ಟ್ರದಲ್ಲೆಲ್ಲಾ ಮಳೆಯಾಯಿತು, ಮೂರು ಭಯಗಳೂ ಶಾಂತವಾದವು, ರಾಷ್ಟ್ರ ಕ್ಷೇಮವಾಯಿತು, ಸುಭಿಕ್ಷವಾಯಿತು.

ಬೋಧಿಸತ್ತ್ವನು ಜೀವವಿರುವವರೆಗೂ ದಾನಾದಿ ಪುಣ್ಯಗಳನ್ನು ಮಾಡಿ ಪರಿವಾರ ಸಮೇತನಾಗಿ ಸ್ವರ್ಗಪದವನ್ನು ಪೂರೈಸಿದನು.

# ಗ್ರಾಮಣಿ ಚಂಡ

ಹಿಂದೆ ವಾರಾಣಸಿಯಲ್ಲಿ ಜನಸಂಧನೆಂಬವನು ರಾಜ್ಯವಾಳು ತ್ತಿದ್ದನು. ಬೋಧಿಸತ್ತ್ವನು ಅವನ ಹಿರಿಯ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದನು. ಚೆನ್ನಾಗಿ ತೊಳೆದ ಚಿನ್ನದ ಕನ್ನಡಿಯಂತೆ ಅವನ ಮುಖ ಪರಿಶುದ್ಧವಾಗಿತ್ತು, ಬಹಳ ಸೌಭಾಗ್ಯದಿಂದ ತುಂಬಿತ್ತು. ಹೆಸರಿಡುವ ದಿವಸ ಅವನಿಗೆ ಆದರ್ಶಕುಮಾರನೆಂದು ನಾಮಕರಣ ಮಾಡಿದರು.

ಏಳು ವರ್ಷವಾಗುವುದರೊಳಗೆ ಅವನ ತಂದೆ ಅವನಿಗೆ ಮೂರು ವೇದಗಳನ್ನೂ ಲೋಕದ ಎಲ್ಲಾ ಕರ್ತವ್ಯಗಳನ್ನೂ ಕಲಿಸಿ, ಅವನಿಗೆ ಏಳು ವರ್ಷವಾದಾಗ ಕಾಲವಾದನು. ಮಂತ್ರಿಗಳು ರಾಜನ ಶರೀರಕ್ಕೆ ಮಾಡಬೇಕಾದ ಕೃತ್ಯಗಳನ್ನು ಮಹಾ ಸತ್ಕಾರಗಳಿಂದ ಮಾಡಿ, ಕೊಡಬೇಕಾದ ದಾನಗಳನ್ನು ಕೊಟ್ಟು, ಏಳನೆಯ ದಿವಸ ರಾಜಾಂಗಣ ದಲ್ಲಿ ಸೇರಿದರು.

ಸೇರಿ, "ಕುಮಾರನು ಬಹಳ ಚಿಕ್ಕವನು. ಅವನಿಗೆ ಸುಮ್ಮನೆ ರಾಜ್ಯದ ಅಭಿಷೇಕಮಾಡುವುದು ಶಕ್ಯವಿಲ್ಲ. ವಿಮರ್ಶೆಮಾಡಿ ಅಭಿಷೇಕ ಮಾಡೋಣ" ಎಂದು, ಒಂದು ದಿನ ನಗರವನ್ನು ಅಲಂಕರಿಸಿ, ವಿಮರ್ಶೆಯ ಸ್ಥಳವನ್ನು ಸಜ್ಜುಗೊಳಿಸಿ, ಪರ್ಯಂಕವನ್ನು ಸಿದ್ಧಮಾಡಿ, ಕುಮಾರನ ಬಳಿ ಸಾರಿ, "ದೇವ! ವಿಮರ್ಶೆಯ ಸ್ಥಳಕ್ಕೆ ಹೊರಡು" ಎಂದರು.

ಕುಮಾರನು 'ಒಳ್ಳೆಯದೆ'ಂದು ಮಹಾಪರಿವಾರದೊಡನೆ ಹೋಗಿ ಪರ್ಯಂಕದ ಮೇಲೆ ಕುಳಿತನು. ಅವನು ಕುಳಿತಿರುವಾಗ, ಅಮಾತ್ಯರು, ಎರಡು ಕಾಲಿನಿಂದ ನಡೆಯುವ ಒಂದು ಕೋತಿಗೆ ವಸ್ತುವಿದ್ಯಾಚಾರ್ಯನ ವೇಷವನ್ನು ಹಾಕಿಸಿ, ವಿಮರ್ಶೆಯ ಸ್ಥಳಕ್ಕೆ ಒಯ್ದು, "ದೇವ! ಈ ಪುರುಷನು ನಿನ್ನ ತಂದೆಯಾದ ಮಹಾರಾಜನ ಕಾಲದಲ್ಲಿ ವಸ್ತುವಿದ್ಯೆಯ ಆಚಾರ್ಯನಾಗಿದ್ದನು. ಇವನು ನಿಪುಣನು. ಭೂಮಿಯಲ್ಲಿ ಏಳು ಪ್ರಮಾಣಗಳವರೆಗೂ ದೋಷವನ್ನು ಕಾಣಬಲ್ಲನು. ಇವನ ಸಹಾಯದಿಂದ ರಾಜನ ಮನೆಗೆ ಯೋಗ್ಯವಾದ ಸ್ಥಳ ಸಿಕ್ಕಿತು. ದೇವರು ಇವನನ್ನು ಸ್ವೀಕರಿಸಿ, ಇವನಿಗೆ ಯಾವುದಾದರೂ ಸ್ಥಾನ ಕೊಡಬೇಕು" ಎಂದರು.

ಕುಮಾರನು ಅದನ್ನು ಕೆಳಗೂ ಮೇಲೂ ನೋಡಿ, "ಇವನು ಮನುಷ್ಯನಲ್ಲ, ಇದು ಕೋತಿ" ಎಂದು ತಿಳಿದು, "ಕೋತಿಗಳು ಮಾಡಿದುದನ್ನು ಮುರಿಯಬಲ್ಲವು, ಇಲ್ಲದುದನ್ನು ವಿಚಾರಿಸಿ ಮಾಡಲರಿಯವು" ಎಂದು ಚಿಂತಿಸಿ, "ಇದು ಮನೆ ಕಟ್ಟುವುದರಲ್ಲಿ ಕುಶಲಿಯಲ್ಲ. ಇದು ಸುಕ್ಕುಮುಖದ ಕೋತಿ. ಮಾಡಿದುದನ್ನು ಇವು ಕೆಡಿಸಬಲ್ಲವು. ಇದು ಇವುಗಳ ಕುಲಧರ್ಮ" ಎಂದು ಹೇಳಿದನು.

ಅಮಾತ್ಯರು "ಇರಬೇಕು, ದೇವ" ಎಂದು ಅದನ್ನು ಒಯ್ದು, ಒಂದೆರಡು ದಿನಗಳನಂತರ ಪುನಃ ಅದಕ್ಕೆ ಅಲಂಕಾರಮಾಡಿ ಪರೀಕ್ಷಾಸ್ಥಾನಕ್ಕೆ ಕರೆತಂದು, "ದೇವ! ಇವನು ನಿನ್ನ ತಂದೆಯ ಕಾಲದಲ್ಲಿ ವಿಮರ್ಶೆಮಾಡುವ ಮಂತ್ರಿಯಾಗಿದ್ದನು. ಇವನನ್ನು ಸ್ವೀಕರಿಸಿ ಪರೀಕ್ಷೆಯನ್ನು ಇವನಿಂದ ನಡಸಬೇಕು" ಎಂದರು.

ಕುಮಾರನು ಅದನ್ನು ಚೆನ್ನಾಗಿ ನೋಡಿ, "ಮನಸ್ಸೂ ಚಿತ್ತವೂ ಚೆನ್ನಾಗಿರುವವನಿಗೆ ಕೂದಲು ಈರೀತಿಯಿರುವುದಿಲ್ಲ. ಚಿತ್ತವಿಲ್ಲದ ಈ ವಾನರವು ಪರೀಕ್ಷೆ ಮಾಡಲಾರದು" ಎಂದು ತಿಳಿದು, "ಚಿತ್ತವಂತನಿಗೆ ಹೀಗೆ ಕೂದಲಿಲ್ಲ. ಈ ಮೃಗದಿಂದ ಸಮಾಧಾನವಾಗದು. ಜನಸಂಧನು ನನಗೆ ಕಲಿಸಿರುವಂತೆ, ಇದಕ್ಕೇನೂ ಗೊತ್ತಿಲ್ಲ" ಎಂದು ಹೇಳಿದನು.

ಅಮಾತ್ಯರು ಆ ಮಾತನ್ನು ಕೇಳಿ, "ಹಾಗೇ ಇರಬೇಕು, ದೇವ" ಎಂದು ಅದನ್ನು ಕರೆದೊಯ್ದು, ಪುನಃ ಅದಕ್ಕೇ ಅಲಂಕಾರಮಾಡಿ ಪರೀಕ್ಷಾಸ್ಥಾನಕ್ಕೆ ಕರೆತಂದು, "ದೇವ! ನಿನ್ನ ತಂದೆಯ ಕಾಲದಲ್ಲಿ ಈ ಪುರುಷನು ತಾಯಿತಂದೆಗಳಿಗೆ ಮಾಡಬೇಕಾದ ಸೇವೆಗಳನ್ನು ಸಂಪೂರ್ಣವಾಗಿ ಮಾಡಿ, ಕುಲಗಳಿಗೆ ಹಿರಿಯರಾದವರನ್ನು ಗೌರವಿಸುತ್ತಿದ್ದನು. ಇವನನ್ನು ಸ್ವೀಕರಿಸಿ ಕಾಪಾಡಬೇಕು" ಎಂದರು.

ಕುಮಾರನು ಅದನ್ನು ಪುನಃ ದೃಷ್ಟಿಸಿ, "ಕೋತಿಗಳ ಚಿತ್ತ ಚಂಚಲ. ಇಂತಹ ಸೇವೆಮಾಡುವ ಸಾಮರ್ಥ್ಯ ಇದಕ್ಕೆ ಇಲ್ಲ" ಎಂದು ಚಿಂತಿಸಿ, "ತಾಯನ್ನಾಗಲಿ, ತಂದೆಯನ್ನಾಗಲಿ, ಅಣ್ಣ ಅಕ್ಕ ಸ್ನೇಹಿತರನ್ನಾಗಲಿ ಇಂತಹ ಪುರುಷನು ಪೋಷಿಸಲಾರನು. ನನ್ನ ತಂದೆಯಾದ ದಶರಥನು ನನಗೆ ಇದನ್ನು ಕಲಿಸಿದ್ದಾನೆ" ಎಂದು ಹೇಳಿದನು.

ಅಮಾತ್ಯರು "ಹಾಗೆಯೆ ಇರಬೇಕು, ದೇವ" ಎಂದು ಆ ಕೋತಿಯನ್ನು ಕರೆದೊಯ್ದರು.

ಅನಂತರ "ಕುಮಾರನು ಪಂಡಿತನು, ರಾಜ್ಯವಾಳಲು ಶಕ್ತನು" ಎಂದು ಬೋಧಿಸತ್ತ್ವನಿಗೆ ರಾಜ್ಯದಲ್ಲಿ ಅಭಿಷೇಕಮಾಡಿ, "ಇದು ಆದರ್ಶ ಕುಮಾರನ ಆಜ್ಞೆ" ಎಂದು ನಗರದಲ್ಲಿ ಭೇರಿಯನ್ನು ಹೊಡೆಸಿದರು.

ಆ ಮೊದಲುಗೊಂಡು ಬೋಧಿಸತ್ತ್ವನು ಧರ್ಮದಿಂದ ರಾಜ್ಯವಾಳಿದನು. ಅವನು ಪಂಡಿತನೆಂಬುದು ಸಕಲ ಜಂಬೂದ್ವೀಪದಲ್ಲಿ ಹಬ್ಬಿತು. ಅವನ ಪಂಡಿತಭಾವವನ್ನು ಪ್ರಕಾಶಪಡಿಸುವುದಕ್ಕಾಗಿ ಗೋವು, ಮಗ, ಕುದುರೆ, ಮೇದರವನು, ಗ್ರಾಮಭೋಜಕ, ಗಣಿಕೆ, ತರುಣಿ, ಹಾವು, ಜಿಂಕೆ, ತಿತ್ತಿರ, ದೇವತೆ, ನಾಗರಾಜ, ತಪಸ್ವಿ, ಬ್ರಾಹ್ಮಣ ಬಾಲಕರು—ಎಂಬ ಹದಿನಾಲ್ಕು ವಿಷಯಗಳನ್ನು ಅವನ ಬಳಿ ತಂದರು.

ಅವುಗಳ ಕ್ರಮವಾದ ಕತೆ ಹೀಗೆ:

ಬೋಧಿಸತ್ತ್ವನಿಗೆ ರಾಜ್ಯದಲ್ಲಿ ಅಭಿಷೇಕವಾದಮೇಲೆ, ಜನಸಂಧ ರಾಜನ ಪಾದಸೇವಕನಾಗಿದ್ದ ಗ್ರಾಮಣಿ ಚಂಡನೆಂಬವನು "ಈ ರಾಜ್ಯವು ರಾಜನಿಗೆ ಸಮಾನವಯಸ್ಕರಿಂದಲೇ ಶೋಭಿಸುವುದು. ನನಗೆ ಮಹಾ ವಯಸ್ಸಾಗಿದೆ. ನಾನು ಹರೆಯದ ಕುಮಾರನ ಊಳಿಗ ಮಾಡಲಾರೆ. ಗ್ರಾಮದಲ್ಲಿ ಕೃಷಿಕೆಲಸಮಾಡಿ ಜೀವಿಸುವೆನು" ಎಂದು ನಗರದಿಂದ ಮೂರು ಯೋಜನ ದೂರ ಹೋಗಿ, ಒಂದು ಗ್ರಾಮದಲ್ಲಿ ವಾಸ ಮಾಡಿಕೊಂಡನು.

ಕೃಷಿಮಾಡಲು ಅವನ ಬಳಿ ಗೋವುಗಳಿರಲಿಲ್ಲ. ಮಳೆಯಾದ ಮೇಲೆ, ಅವನು ಜೊತೆಗಾರನೊಬ್ಬನಿಂದ ಎರಡು ಗೋವುಗಳನ್ನು ಬೇಡಿ ಹಗಲೆಲ್ಲಾ ಕೃಷಿಮಾಡಿದನು. ಗೋವುಗಳಿಗೆ ಹುಲ್ಲು ತಿನ್ನಿಸಿ, ಅವುಗಳನ್ನು ಒಡೆಯನಿಗೆ ಹಿಂದಿರುಗಿ ಕೊಡಲು ಅವನ ಮನೆಗೆ ಹೋದನು. ಅವನು ಆ ಕ್ಷಣದಲ್ಲಿ ಹೆಂಡತಿಯೊಡನೆ ಮನೆಯೊಳಗೆ ಕುಳಿತು ಊಟ ಮಾಡುತ್ತಿದ್ದನು. ಗೋವುಗಳು ಪರಿಚಯದಿಂದ ಮನೆಯೊಳಕ್ಕೆ

ಹೋದುವು. ಅವು ಪ್ರವೇಶಿಸುವಾಗ ಮನೆಯಾತನು ತನ್ನ ತಟ್ಟೆಯನ್ನು ಮೇಲೆ ಎತ್ತುತ್ತಿದ್ದನು, ಅವನ ಹೆಂಡತಿಯು ತನ್ನ ತಟ್ಟೆಯನ್ನು ಕೆಳಗಿಡು ತ್ತಿದ್ದಳು. ಗ್ರಾಮಣಿ ಚಂಡನು, ಅವರು ತನ್ನನ್ನು ಊಟಕ್ಕೆ ಕರೆಯು ವುದಿಲ್ಲವೆಂಬುದನ್ನು ನೋಡಿ, ಗೋವುಗಳನ್ನು ಹಿಂದಿರುಗಿಸಿ ಕೊಡದೆಯೆ ಹೋದನು.

ಕಳ್ಳರು ರಾತ್ರಿ ಕೊಟ್ಟಿಗೆಯನ್ನು ಒಡೆದು ಆ ಗೋವುಗಳನ್ನು ಕದ್ದರು.

ಗೋವುಗಳ ಒಡೆಯನು ಬೆಳಗ್ಗೆ ಕೊಟ್ಟಿಗೆಗೆ ಹೋಗಿ, ಅಲ್ಲಿ ಗೋವುಗಳನ್ನು ಕಾಣದೆ, ಕಳ್ಳರು ಒಯ್ದರೆಂದು ತಿಳಿದರು ಕೂಡ "ಇದನ್ನು ಗ್ರಾಮಣಿಯ ಕತ್ತಿಗೆ ತರುತ್ತೇನೆ" ಎಂದು ಅವನ ಬಳಿ ಬಂದು, "ನನ್ನ ಗೋವುಗಳನ್ನು ಕೊಡು" ಎಂದನು.

"ಗೋವುಗಳು ನಿನ್ನ ಮನೆಯೊಳಕ್ಕೆ ಬರಲಿಲ್ಲವೆ ?"

"ನೀನು ಅವುಗಳನ್ನು ನನಗೆ ಹಿಂದಕ್ಕೆ ಕೊಟ್ಟೆಯೊ ?"

"ಇಲ್ಲ."

"ಹಾಗಾದರೆ, ಇದೋ ಇದು ರಾಜದೂತ. ಬಾ."

ಆ ಕಾಲದಲ್ಲಿ ಜನರು ಒಂದು ಸಣ್ಣ ಕಲ್ಲನ್ನೋ ಮಡಕೆಯ ಚೂರನ್ನೋ ಎತ್ತಿಕೊಂಡು "ಇದು ರಾಜದೂತ, ಬಾ" ಎನ್ನುವರು. ಅದನ್ನು ಕೇಳಿಯೂ ಬಾರದವನಿಗೆ ಶಿಕ್ಷೆಯಾಗುವುದು. ಅದರಿಂದ, ಅವನು 'ದೂತ' ಎಂದುದನ್ನು ಕೇಳಿ ಗ್ರಾಮಣಿಯು ಅವನೊಡನೆ ಹೊರಟನು.

ಅವನೊಡನೆ ರಾಜನ ಮನೆಗೆ ಹೋಗುವಾಗ ಗ್ರಾಮಣಿಯ ಜೊತೆಗಾರನೊಬ್ಬನು ವಾಸಿಸುತ್ತಿದ್ದ ಗ್ರಾಮ ಸಿಕ್ಕಿತು. ಗ್ರಾಮಣಿ "ನನಗೆ ಬಹಳ ಹಸಿವು. ಈ ಗ್ರಾಮದಲ್ಲಿ ಊಟಮಾಡಿಕೊಂಡು ಬರುವ ವರೆಗೆ ಇಲ್ಲೇ ಇರು" ಎಂದು ಹೇಳಿ, ತನ್ನ ಸ್ನೇಹಿತನ ಮನೆಗೆ ಹೋದನು. ಸ್ನೇಹಿತನು ಮನೆಯಲ್ಲಿರಲಿಲ್ಲ. ಅವನ ಹೆಂಡತಿ "ಸ್ವಾಮಿ, ಪಕ್ವವಾದ ಆಹಾರವಿಲ್ಲ. ಒಂದು ಮುಹೂರ್ತ ತಡೆದರೆ, ಈಗಲೇ ಬೇಯಿಸಿ ಕೊಡುತ್ತೇನೆ" ಎಂದು ಏಣಿ ತಂದು, ಬೇಗನೆ ಅಕ್ಕಿಯ

ಉಗ್ರಾಣಕ್ಕೆ ಹತ್ತುತ್ತಾ ನೆಲಕ್ಕೆ ಬಿದ್ದಳು. ಅದೇ ಕ್ಷಣದಲ್ಲಿ ಅವಳ ಏಳು ತಿಂಗಳ ಗರ್ಭ ಬಿದ್ದುಹೋಯಿತು. ಆ ಗಳಿಗೆಯೇ ಅವಳ ಗಂಡನು ಬಂದು ಅದನ್ನು ನೋಡಿ, "ನೀನು ನನ್ನ ಹೆಂಡತಿಯನ್ನು ಹೊಡೆದು ಗರ್ಭಪಾತಮಾಡಿಸಿದೆ. ಇದು ನಿನ್ನ ರಾಜದೂತ. ಬಾ" ಎಂದು ಅವನನ್ನು ಹಿಡಿದುಕೊಂಡು ಹೊರಟನು.

ಅಲ್ಲಿಂದ ಅವರಿಬ್ಬರೂ ಗ್ರಾಮಣಿಯನ್ನು ನಡುವೆ ಇಟ್ಟುಕೊಂಡು ಹೊರಟರು. ಆಗ ಒಂದು ಗ್ರಾಮದ ಬಾಗಿಲಲ್ಲಿ ಒಬ್ಬ ಕುದುರೆ ಕಾಯುವವನು ತನ್ನ ಕುದುರೆಯನ್ನು ಹಿಂದಿರುಗಿಸಲಾರದೆ ಗ್ರಾಮಣಿಯನ್ನು ಕಂಡು, "ಮಾವ, ಚಂಡಗ್ರಾಮಣಿ! ಆ ಕುದುರೆಯನ್ನುಯಾವುದರಿಂದಲಾದರೂ ಹೊಡೆದು ಹಿಂದಿರುಗಿಸು" ಎಂದನು. ಚಂಡನು ಒಂದು ಕಲ್ಲು ಹಿಡಿದು ಎಸೆದನು. ಕಲ್ಲು ಕುದುರೆಯ ಕಾಲಿಗೆ ತಾಗಿ, ಅದು ಏರಂಡದ ಕಡ್ಡಿಯಂತೆ ಮುರಿದುಹೋಯಿತು. ಆಗ ಕುದುರೆಯವನು "ನೀನು ನನ್ನ ಕುದುರೆಯ ಕಾಲು ಮುರಿದೆ. ಇದು ನಿನ್ನ ರಾಜದೂತ" ಎಂದು ಹೇಳಿ ಅವನನ್ನು ಹಿಡಿದುಕೊಂಡನು.

ಹೀಗೆ ಮೂವರೂ ಅವನನ್ನು ಒಯ್ಯುತ್ತಿರಲು, ಚಂಡನು "ಇವರು ನನ್ನನ್ನು ರಾಜನಿಗೆ ಕಾಣಿಸುವರು. ನಾನು ಗೋವುಗಳ ಬೆಲೆಯನ್ನು ಕೊಡಲಾರೆ. ಗರ್ಭಪಾತದ ದಂಡವನ್ನಂತೂ ಮೊದಲೇ ಇಲ್ಲ. ಕುದುರೆಯ ಬೆಲೆಯನ್ನು ಎಲ್ಲಿಂದ ತರಲಿ? ನಾನು ಸಾಯುವುದೇ ಮೇಲು" ಎಂದು ಚಿಂತಿಸುತ್ತಾ, ದಾರಿಯ ನಡುವೆ ಸಮೀಪದ ಕಾಡಿನಲ್ಲಿ ಒಂದು ದೊಡ್ಡ ಪರ್ವತದ ಕಮರಿಯನ್ನು ಕಂಡನು.

ಅದೇ ಪರ್ವತದ ನೆರಳಿನಲ್ಲಿ ಇಬ್ಬರು ಮೇದರವರು, ತಂದೆ ಮಕ್ಕಳು, ಚಾಪೆ ಹೆಣೆಯುತ್ತಿದ್ದರು.

ಗ್ರಾಮಣಿ ಚಂಡನು "ನಾನು ದೇಹಬಾಧೆಗಳನ್ನು ತೀರಿಸಬೇಕು. ಸ್ವಲ್ಪ ಇಲ್ಲೇ ಇರಿ. ಈಗಲೆ ಬಂದೆ" ಎಂದು ಹೇಳಿ ಆ ಪರ್ವತವನ್ನು ಹತ್ತಿ, ಪ್ರಪಾತದ ಪಕ್ಕದಿಂದ ಬೀಳುತ್ತಾ ತಂದೆಯಾದ ಮೇದರವನ ಬೆನ್ನ ಮೇಲೆ ಬಿದ್ದನು. ಆ ಮೇದರವನು ಒಂದೇ ಏಟಿಗೆ ಪ್ರಾಣಬಿಟ್ಟನು.

ಗ್ರಾಮಣಿಯು ಎದ್ದು ನಿಂತನು. ಮಗನಾದ ಮೇದರವನು "ನೀನು ನನ್ನ ತಂದೆಯನ್ನು ಕೊಂದ ಕಳ್ಳ. ಇದು ನಿನ್ನ ರಾಜದೂತ" ಎಂದು ಹೇಳಿ ಗ್ರಾಮಣಿಯ ಕೈ ಹಿಡಿದುಕೊಂಡು ಪೊದರಿನಿಂದ ಹೊರಟನು.

ಉಳಿದವರು "ಇದೇಕೆ?" ಎನ್ನಲು, "ಇವನು ನನ್ನ ತಂದೆಯನ್ನು ಕೊಂದ ಕಳ್ಳ" ಎಂದನು.

ಅಲ್ಲಿಂದ ಗ್ರಾಮಣಿಯನ್ನು ನಡುವೆ ಮಾಡಿಕೊಂಡು ನಾಲ್ಕು ಜನರೂ ಅವನನ್ನು ಬಳಸಿ ಕರೆದುಕೊಂಡು ಹೋದರು.

ದಾರಿಯಲ್ಲಿ, ಇನ್ನೊಂದು ಗ್ರಾಮದ ಬಾಗಿಲಲ್ಲಿ, ಒಬ್ಬ ಗ್ರಾಮ ಭೋಜಕನು ಗ್ರಾಮಣಿ ಚಂಡನನ್ನು ಕಂಡು, "ಮಾವ, ಚಂಡ! ಎಲ್ಲಿ ಹೋಗುವೆ?" ಎಂದನು.

"ರಾಜನನ್ನು ಕಾಣಲು ಹೋಗುವೆನು."

"ಓ! ರಾಜನನ್ನು ಕಾಣಲು ಹೋಗುವೆಯ! ನಾನು ರಾಜನಿಗೆ ಒಂದು ಸುದ್ದಿ ಕೊಡುವೆನು. ತೆಗೆದುಕೊಂಡು ಹೋಗುವೆಯ?"

"ಆಗಲಿ. ಒಯ್ಯುತ್ತೇನೆ."

"ನನಗೆ ಸಹಜವಾಗಿ ರೂಪ ಚೆನ್ನಾಗಿದೆ, ಹಣ ಹೆಚ್ಚಾಗಿದೆ, ಯಶಸ್ಸು ತುಂಬಿದೆ, ರೋಗವೇನೂ ಇಲ್ಲ. ಆದರೆ ಈಗ ನನಗೆ ದುರ್ಗತಿ ಬಂದು ಪಾಂಡುರೋಗವುಂಟಾಗಿದೆ. ಇದಕ್ಕೆ ಕಾರಣವೇನೆಂದು ರಾಜನನ್ನು ಕೇಳು. ಅವನು ಹೇಳಿದುದನ್ನು ನನಗೆ ಬಂದು ತಿಳಿಸು."

ಚಂಡನು ಆಗಲೆಂದು ಒಪ್ಪಿದನು.

ಮುಂದೆ, ಇನ್ನೊಂದು ಗ್ರಾಮದ ಬಾಗಿಲಲ್ಲಿ ಒಬ್ಬ ಗಣಿಕೆ ಅವನನ್ನು ಕಂಡು, "ಮಾವ, ಚಂಡ! ಎಲ್ಲಿಗೆ ಹೋಗುವೆ?" ಎಂದಳು.

"ರಾಜನ ಬಳಿಗೆ."

"ರಾಜನು ಪಂಡಿತನು. ನನ್ನ ಸುದ್ದಿಯೊಂದನ್ನು ಕೊಂಡು ಹೋಗು. ಹಿಂದೆ ನನಗೆ ಬಹಳ ಹಣ ಸಿಕ್ಕುತ್ತಿತ್ತು. ಈಗ ಬರಿಯ ತಾಂಬೂಲವೂ ಸಿಕ್ಕುವುದಿಲ್ಲ, ನನ್ನ ಬಳಿ ಯಾರೂ ಬರುವುದಿಲ್ಲ. ಇದಕ್ಕೆ ಕಾರಣವೇನೆಂದು ರಾಜನನ್ನು ಕೇಳಿ ನನಗೆ ತಿಳಿಸು."

ಮುಂದೆ, ಇನ್ನೊಂದು ಗ್ರಾಮದ ಬಾಗಿಲಲ್ಲಿ ಒಬ್ಬ ತರುಣಸ್ತ್ರೀ ಅವನನ್ನು ಕಂಡು, "ಮಾವ, ಚಂಡ! ಎಲ್ಲಿಗೆ ಹೋಗುವೆ ? " ಎಂದಳು.

" ರಾಜನ ಬಳಿಗೆ ."

"ರಾಜನು ಪಂಡಿತನು. ನನ್ನದೊಂದು ಸುದ್ದಿ ತೆಗೆದುಕೊಂಡು ಹೋಗು. ನಾನು ನನ್ನ ಗಂಡನ ಮನೆಯಲ್ಲಾಗಲಿ ನನ್ನ ತವರು ಮನೆಯಲ್ಲಾಗಲಿ ವಾಸಮಾಡಲಾರೆ. ಇದಕ್ಕೇನು ಕಾರಣವೆಂದು ರಾಜನನ್ನು ಕೇಳಿ ನನಗೆ ತಿಳಿಸು."

ಅಲ್ಲಿಂದ ಆಮೇಲೆ, ದೊಡ್ಡದಾರಿಯ ಬಳಿಯ ಹುತ್ತದಲ್ಲಿ ವಾಸಿಸುತ್ತಿದ್ದ ಒಂದು ಹಾವು "ಎಲ್ಲಿಗೆ ಹೋಗುವೆ, ಚಂಡ? " ಎಂದು ಕೇಳಿತು.

"ರಾಜನ ಬಳಿಗೆ."

"ರಾಜನು ಪಂಡಿತನು. ನನ್ನ ಸುದ್ದಿಯನ್ನು ಕೊಂಡುಹೋಗು. ನಾನು ಆಹಾರಕ್ಕಾಗಿ ಹೊರಗೆ ಹೋಗುವಾಗ ಶಕ್ತಿಯಿಲ್ಲದೆ ಬಡವಾಗಿ ಹುತ್ತದಿಂದ ಹೊರಡುವೆನು; ಬಿಲದ ತುಂಬ ಮೈತುಂಬಿ, ಶರೀರವನ್ನು ಕಷ್ಟದಿಂದ ಎಳೆದುಕೊಂಡು ಹೋಗುವೆನು. ಸಂಚಾರ ಮುಗಿಸಿ ಬಂದಾಗ ತೃಪ್ತನಾಗಿರುವೆನು; ಮೈ ದಪ್ಪನಾದರೂ ಪ್ರವೇಶಿಸುವಾಗ ಬಿಲದ ಪಕ್ಕಗಳನ್ನು ಮುಟ್ಟದೆ ಸುಲಭವಾಗಿ ಪ್ರವೇಶಿಸುವೆನು. ಇದಕ್ಕೆ ಕಾರಣವೇನೆಂದು ರಾಜನನ್ನು ಕೇಳಿ ನನಗೆ ತಿಳಿಸು."

ಆಮೇಲೆ, ಒಂದು ಜಿಂಕೆ ಅವನನ್ನು ಕಂಡು, " ಎಲ್ಲಿಗೆ ಹೋಗುವೆ, ಚಂಡ? " ಎಂದಿತು.

" ರಾಜನ ಬಳಿಗೆ. "

" ರಾಜನು ಪಂಡಿತನು. ಅವನ ಬಳಿಗೆ ನನ್ನದೊಂದು ಸುದ್ದಿ ಕೊಂಡುಹೋಗು. ನಾನು ಬೇರೆ ಕಡೆ ಹುಲ್ಲು ತಿನ್ನಲಾರೆ; ಒಂದೇ ಮರದ ಬುಡದಲ್ಲಿ ತಿನ್ನಬಲ್ಲೆ. ಇದಕ್ಕೇನು ಕಾರಣವೆಂದು ರಾಜನನ್ನು ಕೇಳು" ಎಂದಿತು.

ಅನಂತರ, ಒಂದು ತಿತ್ತಿರಪಕ್ಷಿ ಅವನನ್ನು ಕಂಡು, "ಎಲ್ಲಿಗೆ ಹೋಗುವೆ, ಚಂಡ?" ಎಂದಿತು.

"ರಾಜನ ಬಳಿಗೆ."

"ರಾಜನು ಪಂಡಿತನು. ಅವನ ಬಳಿಗೆ ನನ್ನದೊಂದು ಸುದ್ದಿ ಕೊಂಡುಹೋಗು. 'ನಾನು ಒಂದೇ ಒಂದು ಹುತ್ತದ ಬುಡದಲ್ಲಿ ಕುಳಿತು ಮನೋಹರವಾಗಿ ಧ್ವನಿಮಾಡಿ ವಾಸಿಸಬಲ್ಲೆ; ಮಿಕ್ಕ ಕಡೆಗಳಲ್ಲಿ ಕೂಡ ಲಾರೆ. ಇದಕ್ಕೆ ಕಾರಣವೇನೆಂದು ರಾಜನನ್ನು ಕೇಳು."

ಮುಂದೆ, ಒಂದು ವೃಕ್ಷದೇವತೆ ಅವನನ್ನು ಕಂಡು, "ಎಲ್ಲಿಗೆ ಹೋಗುವೆ, ಚಂಡ?" ಎಂದು ಕೇಳಿತು.

"ರಾಜನ ಬಳಿಗೆ."

"ರಾಜನು ಪಂಡಿತನು. ಹಿಂದೆ ನನಗೆ ಬಹು ಸತ್ಕಾರ ಸಿಕ್ಕುತ್ತಿತ್ತು. ಈಗ ಒಂದು ಹಿಡಿ ಚಿಗುರು ಕೂಡ ಸಿಕ್ಕುವುದಿಲ್ಲ. ಇದಕ್ಕೇನು ಕಾರಣ ವೆಂದು ರಾಜನನ್ನು ಕೇಳು."

ಅಲ್ಲಿಂದ ಆಮೇಲೆ ಒಬ್ಬ ನಾಗರಾಜನು ಚಂಡನನ್ನು ಕಂಡು, "ಎಲ್ಲಿಗೆ ಹೋಗುವೆ, ಚಂಡ?" ಎಂದನು.

"ರಾಜನ ಬಳಿಗೆ."

"ರಾಜನು ಪಂಡಿತನು. ಅವನ ಬಳಿಗೆ ನನ್ನದೊಂದು ಸುದ್ದಿ ಕೊಂಡುಹೋಗು. ಈ ಸರೋವರದ ನೀರು ಹಿಂದೆ ತಿಳಿಯಾಗಿ ಸ್ಫಟಿಕ ಮಣಿಯ ಬಣ್ಣವಾಗಿತ್ತು. ಈಗ ಇದು ಕದಡಿಕೊಂಡು ಮೇಲೆಲ್ಲಾ ಕಸ ಕಡ್ಡಿ ತುಂಬಿಹೋಗಿದೆ. ಇದಕ್ಕೆ ಕಾರಣವೇನೆಂದು ರಾಜನನ್ನು ಕೇಳು."

ಆಮೇಲೆ, ನಗರದ ಬಳಿಯ ಒಂದಾನೊಂದು ಆರಾಮದಲ್ಲಿ ವಾಸಿ ಸುತ್ತಿದ್ದ ತಪಸ್ವಿಯೊಬ್ಬನು ಚಂಡನನ್ನು ಕಂಡು, "ಎಲ್ಲಿಗೆ ಹೋಗುವೆ, ಚಂಡ?" ಎಂದನು.

"ರಾಜನ ಬಳಿಗೆ."

"ರಾಜನು ಪಂಡಿತನು. ಅವನ ಬಳಿಗೆ ನನ್ನದೊಂದು ಸುದ್ದಿ ಕೊಂಡುಹೋಗು. ಹಿಂದೆ ಈ ಆರಾಮದಲ್ಲಿ ಮಧುರವಾದ ಹಣ್ಣು

ಹಂಪಲು ಆಗುತ್ತಿತ್ತು; ಈಗ ಒಣಗಿ ಸಪ್ಪೆಯಾಗಿವೆ. ಇದಕ್ಕೆ ಕಾರಣ ವೇನೆಂದು ರಾಜನನ್ನು ಕೇಳು.''

ಅಲ್ಲಿಂದ ಮುಂದೆ, ನಗರದ ಬಾಗಿಲ ಬಳಿಯ ಒಂದು ಶಾಲೆ ಯಲ್ಲಿದ್ದ ಬ್ರಾಹ್ಮಣ ಬಾಲಕರು ಚಂಡನನ್ನು ಕಂಡು, ''ಎಲ್ಲಿಗೆ ಹೋಗುವೆ, ಚಂಡ?'' ಎಂದರು.

''ರಾಜನ ಬಳಿಗೆ.''

''ಹಾಗಾದರೆ, ನಮ್ಮ ಸುದ್ದಿಯನ್ನು ಕೊಂಡುಹೋಗು. ಹಿಂದೆ ಯಾವ ಯಾವ ವಿಷಯ ಹಿಡಿದರೂ ನಮಗೆ ಚೆನ್ನಾಗಿ ತಿಳಿಯುತ್ತಿತ್ತು. ಈಗ, ಒಡೆದ ಮಡಕೆಯಲ್ಲಿನ ನೀರಿನಂತೆ ನಿಲ್ಲುವುದಿಲ್ಲ, ತಿಳಿಯುವುದಿಲ್ಲ, ಕತ್ತಲೆಯಾಗುತ್ತದೆ. ಇದಕ್ಕೆ ಏನು ಕಾರಣವೆಂದು ರಾಜನನ್ನು ಕೇಳು.''

ಗ್ರಾಮಣಿ ಚಂಡನು ಆ ಹದಿನಾಲ್ಕು ಸುದ್ದಿಗಳನ್ನು ರಾಜನ ಬಳಿಗೆ ತೆಗೆದುಕೊಂಡು ಬಂದನು. ರಾಜನು ನ್ಯಾಯಸ್ಥಾನದಲ್ಲಿ ಕುಳಿತಿದ್ದನು. ಗೋವುಗಳ ಒಡೆಯನು ಗ್ರಾಮಣಿ ಚಂಡನನ್ನು ಹಿಡಿದು ರಾಜನ ಬಳಿ ಸಾರಿದನು.

ರಾಜನು ಚಂಡನನ್ನು ನೋಡಿ, ತಿಳಿದು, "ಇವನು ನನ್ನ ತಂದೆಯ ಬಳಿ ಇದ್ದು ನನ್ನನ್ನು ಎತ್ತಿ ಆಡಿಸಿದವನು. ಇಷ್ಟು ಕಾಲ ಎಲ್ಲಿ ವಾಸ ಮಾಡುತ್ತಿದ್ದ?" ಎಂದು ಚಿಂತಿಸಿ, "ಓ ಚಂಡ! ಇಷ್ಟು ಕಾಲ ಎಲ್ಲಿದ್ದೆ? ಬಹುಕಾಲದಿಂದ ನಿನ್ನನ್ನು ಕಾಣಲಿಲ್ಲ. ಈಗ ಏನು ಕಾರಣ ಬಂದೆ?" ಎಂದನು.

"ದೇವ! ನಮ್ಮ ದೇವನು ಸ್ವರ್ಗಕ್ಕೆ ಹೋದಾಗಿನಿಂದ ಹಳ್ಳಿಗೆ ಹೋಗಿ ಕೃಷಿಕೆಲಸ ಮಾಡಿಕೊಂಡು ಜೀವಿಸುತ್ತಿದ್ದೇನೆ. ಈಗ ಈ ಪುರುಷನು ಗೋವುಗಳ ಕಾರಣದಿಂದ ರಾಜದೂತನನ್ನು ತೋರಿಸಿ ನನ್ನನ್ನು ನಿಮ್ಮ ಬಳಿ ಎಳೆತಂದನು."

"ಅವನು ಎಳೆತರದಿದ್ದರೆ ನೀನು ಬರುತ್ತಿರಲಿಲ್ಲ. ಎಳೆದು ತಂದುದು ಒಳ್ಳೆಯದಾಯಿತು. ನನಗೆ ನಿನ್ನನ್ನು ನೋಡುವ ಲಾಭವಾಯಿತು. ನಿನ್ನನ್ನು ಕರೆತಂದ ಪುರುಷನು ಯಾರು?"

" ಇವನು, ದೇವ! "

" ನಮ್ಮ ಚಂಡನಿಗೆ ದೂತನನ್ನು ತೋರಿಸಿದುದು ನಿಜವೆ? "

" ನಿಜ, ದೇವ."

" ಕಾರಣವೇನು? "

" ಇವನು ನನ್ನ ಎರಡು ಗೋವುಗಳನ್ನು ಕೊಡವೊಲ್ಲ."

" ನಿಜವೇ, ಚಂಡ? "

" ಹಾಗಾದರೆ, ದೇವ, ನನ್ನ ಮಾತನ್ನೂ ಕೇಳಿರಿ " ಎಂದು ಚಂಡನು ನಡೆದುದನ್ನೆಲ್ಲಾ ತಿಳಿಸಿದನು.

ಅದನ್ನು ಕೇಳಿ, ರಾಜನು ಆ ಗೋಸ್ವಾಮಿಯನ್ನು ಕುರಿತು, " ನಿನ್ನ ಗೋವುಗಳು ಮನೆ ಹೊಕ್ಕುದನ್ನು ಕಂಡೆಯು? " ಎಂದು ಕೇಳಿದನು.

" ಕಾಣಲಿಲ್ಲ, ದೇವ."

" ಏನು? ಆದರ್ಶಮುಖರಾಜನೆಂಬ ನಮ್ಮ ಹೆಸರನ್ನು ನೀನು ಹಿಂದೆ ಕೇಳಿಲ್ಲವೊ? ಸತ್ಯ ಹೇಳು."

" ಕಂಡೆ, ದೇವ! "

" ಓ, ಚಂಡ! ಗೋವುಗಳನ್ನು ನೀನು ಹಿಂದಕ್ಕೆ ಕೊಡದುದರಿಂದ ಗೋವುಗಳು ನಿನ್ನ ಕೊರಳಿಗೆ. ಇವನು ಕಂಡೂ 'ಕಾಣಲಿಲ್ಲ' ಎಂದು ತಿಳಿದೂ ಸುಳ್ಳಾಡಿದುದರಿಂದ ನೀನೇ ಇವನ ಕಣ್ಣುಗಳನ್ನು ಕಿತ್ತು, ಇವನ ಗೋವುಗಳ ಬೆಲೆಯಾದ ಇಪ್ಪತ್ತುನಾಲ್ಕು ಹಣಗಳನ್ನು ಇವನಿಗೆ ಕೊಟ್ಟು ಬಿಡು " ಎಂದು ಹೇಳಿ, ರಾಜನು ಆ ಗೋಸ್ವಾಮಿಯನ್ನು ಹೊರಗೆ ಕಳುಹಿದನು.

ಅವನು " ಕಣ್ಣುಗಳನ್ನು ಕಿತ್ತಮೇಲೆ ಹಣದಿಂದ ಏನುಮಾಡಿ ಕೊಳ್ಳಲಿ? " ಎಂದು ಚಂಡನ ಕಾಲಿಗೆ ಬಿದ್ದು, " ಸ್ವಾಮಿ, ಚಂಡ, ಗೋವುಗಳ ಬೆಲೆಯ ಹಣವನ್ನೂ ನೀನೇ ಇಟ್ಟುಕೊ. ಇದನ್ನೂ ಹಿಡಿ " ಎಂದು ಬೇರೆ ಕೆಲವು ಹಣಗಳನ್ನು ಕೊಟ್ಟು ಓಡಿಹೋದನು.

ಆಗ ಎರಡನೆಯವನು " ದೇವ! ಇವನು ನನ್ನ ಹೆಂಡತಿಯನ್ನು ಹೊಡೆದು ಗರ್ಭಪಾತಮಾಡಿಸಿದನು " ಎಂದನು.

“ ನಿಜವೆ, ಚಂಡ ? ”

“ ಕೇಳು, ಮಹಾರಾಜ ” ಎಂದು ಚಂಡನು ಎಲ್ಲವನ್ನೂ ವಿಸ್ತರಿಸಿ ಹೇಳಿದನು.

ಆಗ ರಾಜನು “ ಇವನ ಹೆಂಡತಿಯನ್ನು ಹೊಡೆದು ಗರ್ಭಪಾತ ಮಾಡಿಸಿದೆಯ ? ” ಎಂದನು.

“ ಇಲ್ಲ, ದೇವ.”

“ ಅಯ್ಯೊ ! ಇವನಿಂದ ಆದ ಗರ್ಭಪಾತವನ್ನು ಸರಿಪಡಿಸಬಲ್ಲೆಯ?”

“ ಮಾಡಲಾರೆ, ದೇವ.”

“ ಇದಕ್ಕೇನು ಮಾಡಬೇಕೆನ್ನುವೆ ? ”

“ ನನಗೆ ಮಗ ಬೇಕು.”

“ ಹಾಗಾದರೆ, ಚಂಡ, ನೀನು ಇವನ ಹೆಂಡತಿಯನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು. ಮಗು ಆದಾಗ ಆ ಮಗುವನ್ನು ತಂದು ಇವನಿಗೆ ಕೊಡು.”

ಅವನು ಕೂಡ ಗ್ರಾಮಣಿ ಚಂಡನ ಪಾದಕ್ಕೆ ಬಿದ್ದು, “ಸ್ವಾಮಿ, ನನ್ನ ಮನೆ ಮಾತ್ರ ಮುರಿಯಬೇಡ” ಎಂದು ತಾನೂ ಹಣ ಕೊಟ್ಟು ಓಡಿಹೋದನು.

ಆಗ ಮೂರನೆಯವನು ಬಂದು, “ದೇವ ! ಇವನು ಕಲ್ಲಿನಿಂದ ಹೊಡೆದು ನನ್ನ ಕುದುರೆಯ ಕಾಲು ಮುರಿದ” ಎಂದನು.

“ನಿಜವೆ, ಚಂಡ ? ”

“ಕೇಳು ಮಹಾರಾಜ” ಎಂದು ಚಂಡನು ನಡೆದುದನ್ನು ವಿಸ್ತರಿಸಿ ಹೇಳಿದನು.

ಅದನ್ನು ಕೇಳಿ, ರಾಜನು “ಕುದುರೆಯನ್ನು ಹೊಡೆದು ಹಿಂದಿರುಗಿಸೆಂದು ನೀನು ಹೇಳಿದುದು ನಿಜವೆ ? ” ಎಂದು ಆ ಕುದುರೆ ಕಾಯುವವನನ್ನು ಕೇಳಿದನು.

“ಹೇಳಲಿಲ್ಲ, ದೇವ ! ”

ಮೇಲಿಂದ ಮೇಲೆ ಕೇಳಲು, “ಹೌದು, ಹೇಳಿದೆ” ಎಂದನು.

ರಾಜನು ಚಂಡನನ್ನು ಕರೆದು, "ಓ, ಚಂಡ! ಇವನು ಹೇಳಿಯೂ 'ಹೇಳಲಿಲ್ಲ' ಎಂದು ಸುಳ್ಳಾಡಿದನು. ನೀನು ಇವನ ನಾಲಿಗೆಯನ್ನು ಕತ್ತರಿಸಿ, ಕುದುರೆಯ ಬೆಲೆಯಾದ ಸಾವಿರವನ್ನು ನಮ್ಮಿಂದ ಪಡೆದು ಕೊಡು" ಎಂದನು.

ಕುದುರೆ ಕಾಯುವವನೂ ಬೇರೆ ಹಣಗಳನ್ನು ಅವನಿಗೆ ಕೊಟ್ಟು ಓಡಿಹೋದನು.

ಆಗ, ಮೇದರವನ ಮಗನು "ದೇವ! ಇವನು ನನ್ನ ತಂದೆಯನ್ನು ಕೊಂದ ಕಳ್ಳ!" ಎಂದನು.

"ಸತ್ಯವೆ, ಚಂಡ?"

"ಕೇಳು, ದೇವ" ಎಂದು ಚಂಡನು ಅದರ ಕಾರಣವನ್ನು ವಿಸ್ತರಿಸಿ ಹೇಳಿದನು.

ರಾಜನು ಮೇದರವನನ್ನು ಕರೆದು, "ಇದಕ್ಕೆ ಏನು ಮಾಡಬೇಕೆನ್ನುವೆ?" ಎಂದನು.

"ನನ್ನ ತಂದೆ ನನಗೆ ಸಿಕ್ಕಿದರಾಯಿತು, ದೇವ".

"ಓ, ಚಂಡ! ಇವನ ತಂದೆ ಇವನಿಗೆ ಸಿಕ್ಕಿದರಾಯಿತು. ಸತ್ತವನನ್ನು ತರುವುದು ಸಾಧ್ಯವಿಲ್ಲ. ನೀನು ಇವನ ತಾಯನ್ನು ನಿನ್ನ ಮನೆಗೆ ಕರೆದುಕೊಂಡು, ಇವನಿಗೆ ತಂದೆಯಾಗು."

ಮೇದರವನ ಮಗನು "ಸ್ವಾಮಿ! ಸತ್ತ ನನ್ನ ತಂದೆಯ ಮನೆ ಮುರಿಯಬೇಡ" ಎಂದು ಗ್ರಾಮಣಿ ಚಂಡನಿಗೆ ತಾನೂ ಹಣಗಳನ್ನು ಕೊಟ್ಟು ಓಡಿಹೋದನು.

ಹೀಗೆ ಗ್ರಾಮಣಿ ಚಂಡನು ಜಯಹೊಂದಿ, ಸಂತೋಷಚಿತ್ತನಾಗಿ, "ದೇವ! ಕೆಲಕೆಲವರ ಸುದ್ದಿಗಳನ್ನು ನಿನ್ನಲ್ಲಿ ಒಪ್ಪಿಸಬೇಕು. ಹೇಳಬಹುದೆ?" ಎಂದು ರಾಜನಿಗೆಂದನು.

"ಹೇಳು, ಚಂಡ."

ಚಂಡನು ಬ್ರಾಹ್ಮಣ ಬಾಲಕರ ಸುದ್ದಿಯನ್ನು ಮೊದಲು ಮಾಡಿಕೊಂಡು ಪ್ರತಿಲೋಮಕ್ರಮದಿಂದ ಒಂದೊಂದನ್ನೂ ಹೇಳಿದನು. ರಾಜನು ಕ್ರಮವಾಗಿ ಅವುಗಳನ್ನು ಬಿಡಿಸಿದನು.

ಮೊದಲನೆಯ ಸುದ್ದಿಯನ್ನು ಕೇಳಿ, "ಅವರು ವಾಸಮಾಡುವ ಸ್ಥಳದಲ್ಲಿ, ಹಿಂದೆ, ವೇಳೆಯನ್ನು ತಿಳಿದು ಕೂಗುವ ಒಂದು ಕೋಳಿಯಿತ್ತು. ಅವರು ಆ ಶಬ್ದದಿಂದ ಎಚ್ಚರಹೊಂದಿ ಮಂತ್ರಗಳನ್ನು ಗ್ರಹಿಸಿ ಕಲಿಯುವ ವೇಳೆಗೆ ಅರುಣನು ಏಳುತ್ತಿದ್ದನು. ಅದರಿಂದ ಅವರು ಹಿಡಿದುದು ಹಾಳಾಗುತ್ತಿರಲಿಲ್ಲ. ಈಗ ಅವರ ವಾಸಸ್ಥಾನದಲ್ಲಿ ಅವೇಳೆಯಲ್ಲಿ ಕೂಗುವ ಒಂದು ಕೋಳಿಯಿದೆ. ಅದು ಅತಿರಾತ್ರಿಯಲ್ಲೋ ಅಥವಾ ಅತಿಬೆಳಗಿನಲ್ಲೋ ಕೂಗುತ್ತದೆ. ಅತಿರಾತ್ರಿಯಲ್ಲಿ ಕೂಗಿದ ಶಬ್ದಕ್ಕೆ ಎದ್ದು ಮಂತ್ರ ಗ್ರಹಿಸಿದಾಗ, ನಿದ್ದೆಗೆ ವಶರಾಗಿ ಕಲಿಯದೆ ಪುನಃ ಮಲಗುತ್ತಾರೆ. ಅತಿಬೆಳಗಿನಲ್ಲಿ ಕೂಗಿದ ಶಬ್ದಕ್ಕೆ ಎದ್ದರೆ ಕಲಿತುದು ದಕ್ಕುವುದಿಲ್ಲ. ಅದರಿಂದ ಅವರು ಗ್ರಹಿಸಿದುದು ಅವರಿಗೆ ತಿಳಿಯುವುದಿಲ್ಲ" ಎಂದನು.

ಎರಡನೆಯದನ್ನು ಕೇಳಿ, "ಹಿಂದೆ, ಅವರು ಶ್ರಮಣರಿಗೆ ತಕ್ಕ ಧರ್ಮಗಳನ್ನು ಮಾಡುತ್ತಾ ಧ್ಯಾನ ಮೊದಲಾದವುಗಳಲ್ಲಿ ತೊಡಗುತ್ತಿದ್ದರು. ಈಗ ಶ್ರಮಣಧರ್ಮವನ್ನು ಬಿಟ್ಟು, ಮಾಡಬಾರದುದರಲ್ಲಿ ತೊಡಗಿರುವರು. ಆರಾಮದಲ್ಲಿ ಬೆಳೆದ ಹಣ್ಣುಹಂಪಲುಗಳನ್ನು ಬಳಿಯಿದ್ದವರಿಗೆ ಕೊಡುವರು. ಈಗ, ಒಬ್ಬನ ಪಾತ್ರೆಗೆ ಬಿದ್ದ ಭಿಕ್ಷೆಯನ್ನು ಎಲ್ಲರೂ ತಿನ್ನುವರು. ಅವರು ಜೀವಿಸುವ ರೀತಿ ಸರಿಯಾದುದಲ್ಲ. ಅದರಿಂದ ಅವರ ಹಣ್ಣುಹಂಪಲುಗಳು ಮಧುರವಾಗಿ ಹುಟ್ಟುವುದಿಲ್ಲ. ಅವರು ಎಲ್ಲರೂ ಪುನಃ ಮೊದಲಿನಂತೆ ಶ್ರಮಣಧರ್ಮದಲ್ಲಿ ತೊಡಗಿದರೆ, ಅವರ ಹಣ್ಣುಹಂಪಲುಗಳು ಪುನಃ ಸಿಹಿಯಾಗುವುವು. ಆ ತಾಪಸರಿಗೆ ರಾಜನ ಮನೆಯವರು ಪಂಡಿತರೆಂಬುದು ತಿಳಿಯದೆಂದು ಕಾಣುತ್ತದೆ. ಶ್ರಮಣಧರ್ಮಗಳನ್ನು ನಡಸುವಂತೆ ಅವರಿಗೆ ಹೇಳು" ಎಂದನು.

ಮೂರನೆಯದನ್ನು ಕೇಳಿ, "ಅಲ್ಲಿರುವ ನಾಗರಾಜರು ಒಬ್ಬರೊಡನೆ ಒಬ್ಬರು ಜಗಳವಾಡುವರು. ಅದರಿಂದ ಆ ನೀರು ಕದಡುವುದು. ಅವರು ಹಿಂದಿನಂತೆ ಒಂದಾದರೆ ಪುನಃ ತಿಳಿಯಾಗುವುದು" ಎಂದನು.

ನಾಲ್ಕನೆಯದನ್ನು ಕೇಳಿ, "ಆ ವೃಕ್ಷದೇವತೆ ಹಿಂದೆ ಕಾಡಿನಲ್ಲಿ ಹೋಗುತ್ತಿದ್ದವರನ್ನು ಕಾಪಾಡುತ್ತಿತ್ತು. ಅದರಿಂದ ಅದಕ್ಕೆ ನಾನಾ

ರೀತಿಯ ಬಲಿಕರ್ಮಗಳು ಸಿಕ್ಕುತ್ತಿತ್ತು. ಈಗ ಅದು ಕಾಪಾಡುವುದಿಲ್ಲ, ಅದರಿಂದ ಬಲಿಕರ್ಮ ಸಿಕ್ಕುವುದಿಲ್ಲ. ಹಿಂದಿನಂತೆಯೇ ಕಾಪಾಡುತ್ತಿದ್ದರೆ ಪುನಃ ಎಲ್ಲ ಲಾಭವೂ ದೊರಕುವುದು. ರಾಜರು ಇರುವುದು ಅದಕ್ಕೆ ಗೊತ್ತಿಲ್ಲವೆಂದು ಕಾಣುತ್ತದೆ. ಕಾಡಿಗೆ ಬಂದವರನ್ನು ಕಾಪಾಡುವಂತೆ ಅದಕ್ಕೆ ತಿಳಿಸು'' ಎಂದನು.

ಐದನೆಯದನ್ನು ಕೇಳಿ, ''ಯಾವ ಹುತ್ತದ ಬುಡದಲ್ಲಿ ಕುಳಿತು ಆ ತಿತ್ತಿರವು ಮನೋಹರವಾಗಿ ಕೂಗುವುದೋ, ಅದರ ಕೆಳಗೆ ದೊಡ್ಡ ಹಣದ ಗಡಿಗೆಯಿದೆ. ಅದನ್ನು ನೀನು ಎತ್ತಿ ತೆಗೆದುಕೊ'' ಎಂದನು.

ಆರನೆಯದನ್ನು ಕೇಳಿ, ''ಯಾವ ಮರದ ಬುಡದಲ್ಲಿ ಮಾತ್ರ ಆ ಜಿಂಕೆ ಹುಲ್ಲು ತಿನ್ನಬಲ್ಲದೋ, ಆ ಮರದ ಮೇಲೆ ದೊಡ್ಡ ಜೇನು ಗೂಡು ಇದೆ. ಆ ಜೇನು ಬಿದ್ದು, ಅದೇ ಹುಲ್ಲಿನ ಮೇಲೆ ಅದಕ್ಕೆ ಆಸೆ; ಬೇರೆಯದನ್ನು ತಿನ್ನಲಾರದು. ನೀನು ಆ ಜೇನುಗೂಡನ್ನು ತೆಗೆದು ಕೊಂಡು ಅದರಲ್ಲಿ ಮೇಲಿನ ಜೇನನ್ನು ನನಗೆ ಕಳುಹು. ಉಳಿದುದನ್ನು ನೀನು ತಿನ್ನು'' ಎಂದು ಹೇಳಿದನು.

ಏಳನೆಯದನ್ನು ಕೇಳಿ, ''ಆ ಹಾವು ವಾಸಮಾಡುವ ಹುತ್ತದ ಕೆಳಗೆ ದೊಡ್ಡ ಹಣದ ಗಡಿಗೆಯಿದೆ. ಅದನ್ನು ಕಾಪಾಡುತ್ತಾ ವಾಸಿಸುವ ಅದು ಹೊರಗೆ ಬರುವಾಗ, ಧನಲೋಭದಿಂದ ಅದರ ಶರೀರವು ಹುತ್ತಕ್ಕೆ ಅಂಟಿಕೊಳ್ಳುವುದು. ಆಹಾರ ಹಿಡಿದ ಮೇಲೆ, ಧನಸ್ನೇಹದಿಂದ ಬೇರೆ ಯಾಗಿ, ವೇಗದಿಂದ ಸುಲಭವಾಗಿ ಪ್ರವೇಶಿಸುವುದು. ಆ ಹಣದ ಗಡಿಗೆ ಯನ್ನು ನೀನು ಎತ್ತಿ ತೆಗೆದುಕೊ'' ಎಂದನು.

ಎಂಟನೆಯದನ್ನು ಕೇಳಿ, "ಆ ತರುಣ ಸ್ತ್ರೀಯು ಗಂಡನೂ ತಾಯಿ ತಂದೆಗಳೂ ವಾಸಮಾಡುವ ಗ್ರಾಮಗಳ ನಡುವಿನ ಗ್ರಾಮದಲ್ಲಿ ಒಬ್ಬ ಜಾರನು ಇದ್ದಾನೆ. ಅವಳು ಅವನನ್ನು ನೆನೆದು, ಅವನ ಮೇಲಿನ ಸ್ನೇಹದಿಂದ ಗಂಡನ ಮನೆಯಲ್ಲಿ ವಾಸಿಸಲಾರಳು. ತಾಯಿತಂದೆ ಯರನ್ನು ನೋಡುವೆನೆಂದು ಜಾರನ ಮನೆಯಲ್ಲಿ ಕೆಲವು ದಿವಸ ವಾಸಿಸಿ, ಅನಂತರ ತಾಯಿತಂದೆಗಳ ಮನೆಗೆ ಹೋಗುವಳು. ಅಲ್ಲಿ ಕೆಲವು ದಿನ ವಿದ್ದು, ಪುನಃ ಜಾರನನ್ನು ಸ್ಮರಿಸಿ, ಗಂಡನ ಮನೆಗೆ ಹೋಗುವೆನೆಂದು

ಪುನಃ ಜಾರನ ಮನೆಗೇ ಹೋಗುವಳು. ಆ ಸ್ತ್ರೀಗೆ ರಾಜನಿರುವನೆಂಬು ದನ್ನು ತಿಳಿಸಿ, 'ಗಂಡನ ಮನೆಯಲ್ಲೇ ವಾಸಮಾಡಬೇಕು. ವಾಸ ಮಾಡದಿದ್ದರೆ ರಾಜನು ಹಿಡಿಸುವನು; ನೀನು ಬದುಕುವುದಿಲ್ಲ. ಇದನ್ನು ಮರೆಯದೆ ನೆನಪಿನಲ್ಲಿಡು' ಎಂದು ಅವಳಿಗೆ ಹೇಳು'' ಎಂದನು.

ಒಂಬತ್ತನೆಯದನ್ನು ಕೇಳಿ, ''ಹಿಂದೆ, ಆ ಗಣಿಕೆ ಒಬ್ಬನಿಂದ ಬೆಲೆ ತೆಗೆದುಕೊಂಡು, ಅವನನ್ನು ತೃಪ್ತಿಪಡಿಸದೆ ಇನ್ನೊಬ್ಬನಿಂದ ತೆಗೆದು ಕೊಳ್ಳುತ್ತಿರಲಿಲ್ಲ. ಅದರಿಂದ ಹಿಂದೆ ಅವಳಿಗೆ ಬಹಳ ಸಿಕ್ಕುತ್ತಿತ್ತು. ಈಗ ತನ್ನ ಧರ್ಮವನ್ನು ಬಿಟ್ಟು, ಒಬ್ಬನ ಕೈಯಿಂದ ಪಡೆದುದಕ್ಕೆ ತೃಪ್ತಿಪಡಿಸದೆಯೇ ಇನ್ನೊಬ್ಬನ ಕೈಯಿಂದ ಸ್ವೀಕರಿಸುವಳು; ಮೊದಲನೆ ಯವನನ್ನು ಕೇಳದೆ ಎರಡನೆಯವನನ್ನು ಸೇರುವಳು. ಅದರಿಂದ ಅವಳಿಗೆ ಬೆಲೆ ಸಿಕ್ಕುವುದಿಲ್ಲ, ಅವಳ ಬಳಿ ಯಾರೂ ಬರುವುದಿಲ್ಲ. ತನ್ನ ಧರ್ಮ ವನ್ನು ನಡಸಿದರೆ, ಹಿಂದಿನಂತೆಯೇ ಆಗುವುದು. ತನ್ನ ಧರ್ಮದಲ್ಲಿ ನಿಲ್ಲು ವಂತೆ ಅವಳಿಗೆ ಹೇಳು'' ಎಂದನು.

ಹತ್ತನೆಯದನ್ನು ಕೇಳಿ, ''ಹಿಂದೆ, ಆ ಗ್ರಾಮಭೋಜಕನು ಧರ್ಮದಿಂದ ಸಮವಾಗಿ ನ್ಯಾಯವನ್ನು ನಿಶ್ಚಯಮಾಡುತ್ತಿದ್ದನು. ಅದರಿಂದ ಜನರಿಗೆ ಪ್ರಿಯನಾದನು, ಮನೋಹರನಾದನು. ಸಮಾಧಾನ ಹೊಂದಿದ ಆ ಜನರು ಅವನಿಗೆ ಅನೇಕ ಬಹುಮಾನಗಳನ್ನು ತಂದರು. ಅದರಿಂದ ಅವನಿಗೆ ರೂಪ ಚೆನ್ನಾಯಿತು, ಹಣ ಹೆಚ್ಚಾಯಿತು, ಯಶಸ್ಸು ಕೂಡಿತು. ಈಗ, ಲಂಚ ತೆಗೆದುಕೊಂಡು ಅಧರ್ಮದಿಂದ ನ್ಯಾಯವನ್ನು ನಿಶ್ಚಯಮಾಡುವನು. ಅದರಿಂದ ಕೆಟ್ಟಗತಿ ಹೊಂದಿ ಜಿಪುಣನಾಗಿ ಪಾಂಡುರೋಗದಿಂದ ನರಳುವನು. ಮೊದಲಿನಂತೆ ನ್ಯಾಯವನ್ನು ನಿಶ್ಚಯಿಸಿದರೆ ಮೊದಲಿನಂತೆಯೇ ಆಗುವನು. ರಾಜನಿರುವುದು ಅವನಿಗೆ ಗೊತ್ತಿಲ್ಲವೆಂದು ಕಾಣುತ್ತದೆ. ಧರ್ಮದಿಂದ ನ್ಯಾಯವನ್ನು ನಿಶ್ಚಯಿಸು ವಂತೆ ಅವನಿಗೆ ಹೇಳು'' ಎಂದನು.

ಹೀಗೆ, ಗ್ರಾಮಣಿ ಚಂಡನು ಆ ಎಲ್ಲಾ ಸುದ್ದಿಗಳನ್ನೂ ತಿಳಿಸಿದನು. ರಾಜನು, ಸರ್ವಜ್ಞನಾದ ಬುದ್ಧನಂತೆ, ತನ್ನ ಪ್ರಜ್ಞೆಯಿಂದ ಅವು

ಎಲ್ಲವನ್ನೂ ವಿವರಿಸಿ, ಗ್ರಾಮಣಿ ಚಂಡನಿಗೆ ಬಹಳ ಹಣಕೊಟ್ಟು, ಅವನು ವಾಸಿಸುತ್ತಿದ್ದ ಗ್ರಾಮವನ್ನು ಶ್ರೇಷ್ಠವಾದ ದಾನವಾಗಿ ಮಾಡಿ ಅವನಿಗೇ ಕೊಟ್ಟು ಅವನನ್ನು ಅಲ್ಲಿ ನಿಲ್ಲಿಸಿದನು.

ಚಂಡನು ನಗರದಿಂದ ಹೊರಟು, ಬೋಧಿಸತ್ತ್ವನು ಕೊಟ್ಟ ಸುದ್ದಿಯನ್ನು ಬ್ರಾಹ್ಮಣ ಬಾಲಕರಿಗೂ, ತಾಪಸರಿಗೂ, ನಾಗರಾಜ ವೃಕ್ಷದೇವತೆಗಳಿಗೂ ತಿಳಿಸಿದನು; ತಿತ್ತಿರಪಕ್ಷಿಯು ಕುಳಿತ ಸ್ಥಳದಲ್ಲಿನ ನಿಧಿಯನ್ನು ತಾನು ತೆಗೆದುಕೊಂಡನು; ಜಿಂಕೆಯು ಹುಲ್ಲು ತಿನ್ನುವ ಸ್ಥಳದ ಮರದ ಮೇಲಿನ ಜೇನುಗೂಡನ್ನು ತೆಗೆದು, ಅದರ ಜೇನನ್ನು ರಾಜನಿಗೆ ಕಳುಹಿದನು; ಹಾವಿದ್ದ ಹುತ್ತವನ್ನು ಒಡೆಸಿ ಅಲ್ಲಿಯ ನಿಧಿಯನ್ನು ಸಂಗ್ರಹಿಸಿದನು; ಆ ತರುಣಿಗೂ ಗಣಿಕೆಗೂ ಗ್ರಾಮಭೋಜಕನಿಗೂ ರಾಜನು ಹೇಳಿ ಕಳುಹಿದ ಸುದ್ದಿಗಳನ್ನು ತಿಳಿಸಿ, ಮಹಾಯಶಸ್ಸಿನಿಂದ ತನ್ನ ಗ್ರಾಮಕ್ಕೆ ಹೋಗಿ, ಆಯುಸ್ಸು ಇರುವವರೆಗೂ ಇದ್ದು, ಅನಂತರ ತನ್ನ ಕರ್ಮಕ್ಕೆ ಅನುಸಾರವಾಗಿ ಹೋದನು.

ಆದರ್ಶಮುಖರಾಜನು ಕೂಡ, ದಾನ ಮೊದಲಾದ ಪುಣ್ಯಗಳನ್ನು ಮಾಡಿ, ಜೀವಿತವು ಕಡೆಯಾಗಲು, ಸ್ವರ್ಗದ ಸ್ಥಳವನ್ನು ಪೂರ್ಣಗೊಳಿಸಲು ಹೋದನು.

## ಅಲೀನ ಚಿತ್ತ

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರುವಾಗ ವಾರಾಣಸಿಗೆ ಅವಿದೂರದಲ್ಲಿ ಬಡಗಿಗಳ ಗ್ರಾಮವಿತ್ತು. ಅಲ್ಲಿ ಐನೂರು ಬಡಗಿಗಳು ವಾಸಿಸುತ್ತಿದ್ದರು. ಅವರು ನಾವೆಗಳಲ್ಲಿ ಹೊಳೆಯ ಮೇಲಕ್ಕೆ ಹೋಗಿ, ಮನೆಕಟ್ಟಲು ಬೇಕಾದ ಮರಗಳನ್ನು ಕಾಡಿನಲ್ಲಿ ಕಡಿದು, ಅಲ್ಲಿಯೇ ಒಂದುಪ್ಪರಿಗೆ ಎರಡುಪ್ಪರಿಗೆ ಮೊದಲಾದ ಭೇದಗಳ ಮನೆಗಳನ್ನು ಸಜ್ಜುಗೊಳಿಸಿ, ಕಂಬ ಮೊದಲುಗೊಂಡು ಎಲ್ಲಾ ಮರಕ್ಕೂ ಗುರುತುಮಾಡಿ, ನದೀ ತೀರಕ್ಕೆ ತಂದು, ನಾವೆಯ ಮೇಲೇರಿಸಿ, ನದಿಯನ್ನು ಅನುಸರಿಸಿ ನಗರಕ್ಕೆ ಬಂದು, ಯಾರು ಎಂತಹ ಮನೆ ಬಯಸಿದರೆ ಅವರಿಗೆ ಅಂತಹವುಗಳನ್ನು ಮಾಡಿಕೊಟ್ಟು, ಹಣ ತೆಗೆದುಕೊಂಡು, ಪುನಃ ಅಲ್ಲಿಗೇ ಹೋಗಿ ಮನೆಗೆ ಬೇಕಾದ ವಸ್ತುಗಳನ್ನು ತರುವರು.

ಹೀಗೆ ಜೀವನವನ್ನು ಕಲ್ಪಿಸಿಕೊಂಡು ಅವರು ಒಮ್ಮೆ ಗುಡಿಸಿಲುಗಳನ್ನು ಕಟ್ಟಿ ಮರಗಳನ್ನು ಕಡಿಯುತ್ತಿರಲು, ಸ್ವಲ್ಪ ದೂರದಲ್ಲಿ ಒಂದು ಆನೆ ಒಂದು ಖದಿರವೃಕ್ಷದ ಸಿವುರನ್ನು ತುಳಿಯಿತು. ಆ ಸಿವುರು ಅದರ ಕಾಲನ್ನು ಸೀಳಿತು, ಅದಕ್ಕೆ ಬಲವಾದ ನೋವಾಯಿತು. ಕಾಲು ಊದಿಕೊಂಡು ಕೊಳೆಯತೊಡಗಿತು. ಅದು ವೇದನೆಯಿಂದ ಹುಚ್ಚಾಗಿ ಅವರು ಮರ ಕಡಿಯುವ ಶಬ್ದ ಕೇಳಿ "ಈ ಬಡಗಿಯರನ್ನು ಆಶ್ರಯಿಸಿದರೆ ನನಗೆ ಸ್ವಸ್ತವಾಗುವುದು" ಎಂದು ತಿಳಿದುಕೊಂಡು, ಮೂರು ಕಾಲುಗಳಿಂದ ಅವರ ಬಳಿಹೋಗಿ ಸ್ವಲ್ಪ ದೂರದಲ್ಲಿ ಮಲಗಿತು. ಬಡಗಿಗಳು ಅದರ ಊದಿದ ಕಾಲನ್ನು ಕಂಡು ಬಳಿ ಸಾರಿ, ಕಾಲಿನಲ್ಲಿ ಸಿವುರನ್ನು ಕಂಡು, ತೀಕ್ಷ್ಣವಾದ ಬಾಚಿಯಿಂದ ಸಿವುರಿನ ಸುತ್ತಲೂ ಸೀಳಿ ಹಗ್ಗದಿಂದ ಬಿಗಿದು, ಸಿವುರನ್ನು ಹೊರಗೆ ಎಳೆದು ತೆಗೆದು, ಕೀವನ್ನು ಕಳೆದು, ಬಿಸಿನೀರಿನಿಂದ ತೊಳೆದು, ಅದಕ್ಕೆ ಸರಿಯಾದ ಔಷಧಗಳಿಂದ ಬೇಗನೆ ಗಾಯವನ್ನು ವಾಸಿಮಾಡಿದರು.

ಆನೆ ಆರೋಗ್ಯ ಹೊಂದಿ 'ನಾನು ಈ ಬಡಗಿಗಳ ಆಶ್ರಯದಿಂದ ಬದುಕಿದೆ. ಆದ್ದರಿಂದ ನಾನು ಇವರಿಗೆ ಉಪಕಾರಮಾಡುವುದು ತಕ್ಕುದು' ಎಂದು ಚಿಂತಿಸಿತು. ಅದು ಅಂದಿನಿಂದ ಬಡಗಿಗಳೊಡನೆ ಮರಗಳನ್ನು

ಎಳೆಯುವುದು, ಮರ ಕೆತ್ತುವ ಆಯುಧಗಳನ್ನೂ ಬಾಚಿ ಮೊದಲಾದವು ಗಳನ್ನೂ ತಂದುಕೊಡುವುದು, ಅಳೆಯುವ ಕಪ್ಪುದಾರದ ಕೊನೆಯನ್ನು ಸೊಂಡಿಲಿನಲ್ಲಿ ಸುತ್ತಿ ಹಿಡಿಯುವುದು. ಬಡಗಿಗಳೂ ಅದರ ಊಟದ ವೇಳೆಯಲ್ಲಿ ಒಂದೊಂದು ಅನ್ನದ ಮುದ್ದೆ ಕೊಡುತ್ತಾ ಐನೂರು ಮುದ್ದೆ ಕೊಡುವರು.

ಆ ಆನೆಗೆ ಒಂದು ಸರ್ವಶ್ವೇತವಾದ ಮರಿಯಿತ್ತು. ಅದು ಉತ್ತಮ ಜಾತಿಯ ಆನೆಮರಿ. ಆಗ ಅದಕ್ಕೆ "ನನಗಾದರೋ ವಯಸ್ಸಾಗಿದೆ. ನಾನು ಈಗ ಇವರ ಕೆಲಸ ಮಾಡುವುದಕ್ಕಾಗಿ ಮಗನನ್ನು ಕೊಟ್ಟು ಹೋಗುವುದು ಸರಿ" ಎಂದೆನ್ನಿಸಿತು. ಅದು ಬಡಗಿಗಳನ್ನು ಕೇಳದೆಯೇ ಕಾಡನ್ನು ಹೊಕ್ಕು ಮಗನನ್ನು ಕರೆತಂದು, "ಈ ಆನೆಯ ಮರಿ ನನ್ನ ಮಗ. ನೀವು ನನ್ನನ್ನು ಬದುಕಿಸಿದಿರಿ. ನಿಮ್ಮ ವೈದ್ಯದ ವೇತನಕ್ಕಾಗಿ ನಾನು ಇದನ್ನು ನಿಮಗೆ ಕೊಡುವೆನು. ಇದು ಇಂದಿನಿಂದ ನಿಮ್ಮ ಕೆಲಸಗಳನ್ನು ಮಾಡುವುದು" ಎಂದು ಹೇಳಿ, "ಇಂದಿನಿಂದ ನನ್ನ ಕರ್ತವ್ಯಕಾರ್ಯವನ್ನು ನೀನು ಮಾಡು" ಎಂದು ಮಗನಿಗೆ ಬುದ್ಧಿವಾದ ಹೇಳಿ ಬಡಗಿಗಳಿಗೆ ಕೊಟ್ಟು, ತಾನು ಅರಣ್ಯವನ್ನು ಪ್ರವೇಶಿಸಿತು. ಅಂದಿನಿಂದ ಆನೆಮರಿ ಬಡಗಿಗಳಿಗೆ ವಿಧೇಯವಾಗಿ ಅವರು ಹೇಳಿದುದನ್ನು ಕೇಳಿಕೊಂಡು ಎಲ್ಲಾ ಕಾರ್ಯಗಳನ್ನೂ ಮಾಡುತ್ತಿತ್ತು. ಅವರೂ ಅದನ್ನು ಐನೂರು ಅನ್ನದ ಮುದ್ದೆಗಳಿಂದ ಪೋಷಿಸುತ್ತಿದ್ದರು.

ಅದು ಕೆಲಸಮಾಡಿ ನದಿಗೆ ಇಳಿದು ಆಟವಾಡಿ ಬರುತ್ತಿತ್ತು. ಬಡಗಿಗಳ ಮಕ್ಕಳು ಅದರ ಸೊಂಡಿಲು ಮೊದಲಾದವುಗಳನ್ನು ಹಿಡಿದುಕೊಂಡು ನೀರಿನಲ್ಲೂ ನೆಲದಲ್ಲೂ ಅದರೊಡನೆ ಆಡುವರು.

ಒಳ್ಳೆಯ ಜಾತಿಯ ಆನೆಯಾಗಲಿ ಕುದುರೆಯಾಗಲಿ ಪುರುಷನಾಗಲಿ ನೀರಿನಲ್ಲಿ ಮಲ ಮೂತ್ರ ಮಾಡುವುದಿಲ್ಲ. ಆದ್ದರಿಂದ ಅದು ಕೂಡ ನೀರಿನಲ್ಲಿ ಮಲ ಮೂತ್ರ ಮಾಡದೆ ಹೊರಗೆ ನದೀತೀರದಲ್ಲೇ ಮಾಡುತ್ತಿತ್ತು. ಆಗ ಒಂದಾನೊಂದು ದಿವಸ ನದಿಯ ಮೇಲುಗಡೆ ಮಳೆ ಬಿತ್ತು. ಅರ್ಧ ಒಣಗಿದ ಆನೆಯ ಲದ್ದಿ ನೀರಿನೊಡನೆ ನದಿಗೆ ಇಳಿದು ಹೋಗುತ್ತಾ ವಾರಾಣಸಿ ನಗರದಲ್ಲಿ ಹೊಳೆಗೆ ಇಳಿಯುವ ಬಳಿ

ಒಂದಾನೊಂದು ಪೊದೆಯಲ್ಲಿ ಸಿಕ್ಕಿಕೊಂಡಿತು. ಆಗ ರಾಜನ ಆನೆ ಕಾಯುವವರು 'ಆನೆಗಳಿಗೆ ಸ್ನಾನಮಾಡಿಸೋಣ' ಎಂದು ಐನೂರು ಆನೆಗಳನ್ನು ನಡಸಿದರು. ಜಾತಿ ಆನೆಯ ಲದ್ದಿಯ ವಾಸನೆಯನ್ನು ಮೂಸಿ ಒಂದಾದರೂ ಆನೆ ನದಿಗೆ ಇಳಿಯಲು ಉತ್ಸಾಹಪಡಲಿಲ್ಲ, ಎಲ್ಲವೂ ಬಾಲವನ್ನು ಮೇಲೆತ್ತಿಕೊಂಡು ಓಡತೊಡಗಿದವು. ಆನೆ ಕಾಯುವವರು ಹಸ್ತ್ಯಾಚಾರ್ಯರಿಗೆ ತಿಳಿಸಿದರು. ಅವರು 'ನೀರಿನಲ್ಲಿ ಏನೋ ಸಿಕ್ಕಿಕೊಂಡಿರಬೇಕು' ಎಂದು ನೀರನ್ನು ಶೋಧಿಸಿ, ಆ ಪೊದೆಯಲ್ಲಿ ಜಾತಿ ಆನೆಯ ಲದ್ದಿಯನ್ನು ಕಂಡು, 'ಇದು ಇಲ್ಲಿ ಕಾರಣ' ಎಂದು ತಿಳಿದು, ಗಡಿಗೆಯನ್ನು ತರಿಸಿ, ನೀರಿನಿಂದ ತುಂಬಿ, ಅದನ್ನು ಅದರಲ್ಲಿ ಹಿಸುಕಿ, ಆನೆಗಳ ಮೈಮೇಲೆ ಚಿಮುಕಿಸಿದರು. ಮೈಗಳೆಲ್ಲಾ ಸುಗಂಧವಾದವು. ಅದೇ ಗಳಿಗೆಯೆ ಅವು ನದಿಗೆ ಇಳಿದು ಸ್ನಾನ ಮಾಡಿದುವು. ಹಸ್ತ್ಯಾಚಾರ್ಯರು ರಾಜನಿಗೆ ಆ ನಡೆದುದನ್ನು ತಿಳಿಸಿ, "ಆ ಜಾತಿ ಆನೆಯನ್ನು ಹುಡುಕಿ ಕರೆತರುವುದು ತಕ್ಕುದು, ದೇವ" ಎಂದರು. ರಾಜನು ನಾವೆಗಳನ್ನು ಒಟ್ಟುಗೂಡಿಸಿ ನದಿಯನ್ನು ದಾಟಿ, ಹೊಳೆಗೆ ಎದುರಾಗಿ ಹೋಗುವ ದೋಣಿಗಳಿಂದ ಬಡಗಿಗಳ ವಾಸಸ್ಥಾನವನ್ನು ಸಮೀಪಿಸಿದನು.

ಆನೆಯು ಮರಿ ನದಿಯಲ್ಲಿ ಕ್ರೀಡಿಸುತ್ತಾ ಭೇರೀಶಬ್ದವನ್ನು ಕೇಳಿ, ಹೋಗಿ ಬಡಗಿಗಳ ಬಳಿಯಲ್ಲಿ ನಿಂತಿತು. ಬಡಗಿಗಳು ರಾಜನನ್ನು ಎದುರುಗೊಂಡು, "ದೇವ, ಮರ ಬೇಕಾಗಿದ್ದರೆ ನೀನೇ ಏಕೆ ಬಂದೆ? ಯಾರನ್ನಾದರೂ ಕಳಿಸಿ ತರಿಸಲಾಗುತ್ತಿರಲಿಲ್ಲವೆ? " ಎಂದರು.

"ಅಯ್ಯಾ, ನಾನು ಮರಕ್ಕಾಗಿ ಬರಲಿಲ್ಲ. ನಾನು ಈ ಆನೆಗಾಗಿ ಬಂದೆ".

"ಹಿಡಿಸಿಕೊಂಡು ಹೋಗಬಹುದು, ದೇವ."

ಆನೆಯು ಮರಿ ಹೋಗಲು ಇಷ್ಟಪಡಲಿಲ್ಲ.

"ಏನು ಮಾಡಬೇಕೆನ್ನುವೆ, ಅಯ್ಯಾ, ಆನೆ? "

" ನನ್ನನ್ನು ಪೊಷಿಸಿದುದರ ಬೆಲೆಯನ್ನು ಬಡಗಿಗಳಿಗೆ ತರಿಸಿಕೊಡು, ದೇವ."

'ಒಳ್ಳೆಯದಪ್ಪ' ಎಂದು ರಾಜನು ಆನೆಯ ನಾಲ್ಕು ಕಾಲುಗಳ ಬಳಿಯೂ ಸೊಂಡಿಲು ಬಾಲಗಳ ಬಳಿಯೂ ನೂರುಸಾವಿರ ನೂರು

ಸಾವಿರ ಕಾರ್ಷಾಪಣಗಳನ್ನು ಇಡಿಸಿದನು. ಆನೆ ಅಷ್ಟಕ್ಕೇ ಬರಲಿಲ್ಲ. ಎಲ್ಲಾ ಬಡಗಿಗಳಿಗೂ ಎರಡೆರಡು ಬಟ್ಟೆಯನ್ನೂ, ಬಡಗಿಗಳ ಹೆಂಡಿರಿಗೆ ಉಡುವ ಬಟ್ಟೆಗಳನ್ನೂ ಕೊಟ್ಟು, ಜೊತೆಯಲ್ಲಿ ಆಡಿದ ಮಕ್ಕಳ ಪಾಲನೆಗೆ ಬೇಕಾದುದನ್ನು ಕೊಟ್ಟಾಗಲು ಬಡಗಿಗಳನ್ನೂ ಅವರ ಹೆಂಡಿರು ಮಕ್ಕಳನ್ನೂ ತಿರುತಿರುಗಿ ನೋಡುತ್ತಾ ರಾಜನೊಡನೆ ಹೋಯಿತು.

ರಾಜನು ಅದನ್ನು ಕೊಂಡು ನಗರಕ್ಕೆ ಹೋಗಿ, ನಗರವನ್ನೂ ಗಜಶಾಲೆಯನ್ನೂ ಅಲಂಕಾರಗೊಳಿಸಿ, ಆನೆಯನ್ನು ನಗರದಲ್ಲಿ ಪ್ರದಕ್ಷಿಣ ಮಾಡಿಸಿ, ಗಜಶಾಲೆಯೊಳಕ್ಕೆ ಕರೆತಂದು, ಸರ್ವಾಲಂಕಾರಗಳಿಂದ ಅಲಂಕರಿಸಿ ಅಭಿಷೇಕಗೈದು, ಪಟ್ಟದಾನೆ ಮಾಡಿ, ಅದನ್ನು ತನ್ನ ಸ್ನೇಹಿತನ ಸ್ಥಾನದಲ್ಲಿ ನಿಲ್ಲಿಸಿ, ಅರ್ಧ ರಾಜ್ಯವನ್ನು ಅದಕ್ಕೆ ಕೊಟ್ಟು, ಅದನ್ನೂ ತನ್ನಂತೆಯೇ ಕಾಣುತ್ತಿದ್ದನು. ಆನೆ ಬಂದ ಕಾಲದಿಂದ ಹಿಡಿದು ಸಕಲ ಜಂಬೂದ್ವೀಪದ ರಾಜ್ಯವೂ ರಾಜನ ಹಸ್ತಗತವೇ ಆಯಿತು.

ಹೀಗೆ ಕಾಲವಾಗುತ್ತಿರಲು ಬೋಧಿಸತ್ತ್ವನು ಆ ರಾಜನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಜನ್ಮ ತಾಳಿದನು. ಅವಳ ಗರ್ಭ ಪರಿಪಕ್ವವಾಗುವಾಗ ರಾಜನು ಕಾಲವಾದನು. ರಾಜನು ಕಾಲವಾದುದನ್ನು ತಿಳಿದರೆ ಆನೆಗೆ ಅಲ್ಲಿಯೇ ಎದೆಯೊಡೆಯುವುದೆಂದು ಅದನ್ನು ಅದಕ್ಕೆ ತಿಳಿಸದೆಯೇ ಅದನ್ನು ಎಂದಿನಂತೆ ಸೇವಿಸುತ್ತಿದ್ದರು.

ನೆರೆಯುವನಾದ ಕೋಸಲ ರಾಜನು ಆ ರಾಜನು ಕಾಲವಾದುದನ್ನು ಕೇಳಿ, "ರಾಜ್ಯಕ್ಕೆ ರಕ್ಷಣೆಯಿಲ್ಲ" ಎಂದು ಮಹತ್ತಾದ ಸೇನೆಯೊಡನೆ ಬಂದು ನಗರವನ್ನು ಸುತ್ತಿಕೊಂಡನು.

ನಗರದವರು ನಗರದ್ವಾರಗಳನ್ನು ಮುಚ್ಚಿ, "ನಮ್ಮ ರಾಜನ ಪಟ್ಟದ ರಾಣಿಗೆ ಪರಿಪೂರ್ಣಗರ್ಭ. ಇಂದಿನಿಂದ ಏಳನೆಯ ದಿವಸ ಅವಳು ಮಗನನ್ನು ಹೆರುವಳೆಂದು ಲಕ್ಷಣಜ್ಞರು ಹೇಳುವರು. ಅವಳು ಮಗನನ್ನು ಹೆತ್ತರೆ, ಏಳನೆಯ ದಿವಸ ಯುದ್ಧ ಮಾಡುವೆವು, ರಾಜ್ಯವನ್ನು ಕೊಡೆವು. ಇಷ್ಟು ಕಾಲ ಬರದೆ ಇರು" ಎಂದು ಬರೆದು ಕಳಿಸಿದರು. ರಾಜನು ಒಳ್ಳೆಯದೆಂದು ಒಪ್ಪಿದನು.

ದೇವಿಯು ಏಳನೆಯ ದಿವಸ ಮಗನನ್ನು ಹೆತ್ತಳು. ಅವನಿಗೆ ಹೆಸರಿಡುವ ದಿವಸ "ಮಹಾಜನಗಳ ಅಲೀನವಾದ ಚಿತ್ತವನ್ನು ಬಿಗಿ ಹಿಡಿಯುತ್ತಾ ಇವನು ಹುಟ್ಟಿದವನು" ಎಂದು ಅಲೀನಚಿತ್ತಕುಮಾರ ನೆಂದೇ ಅವನಿಗೆ ಹೆಸರಿಟ್ಟರು. ಅವನು ಹುಟ್ಟಿದ ದಿವಸದಿಂದಲೇ ಮೊದ ಲಾಗಿ ನಗರದವರೆಲ್ಲಾ ಕೋಸಲ ರಾಜನೊಡನೆ ಯುದ್ಧ ಮಾಡಿದರು. ನಾಯಕನಿಲ್ಲದುದರಿಂದ ಯುದ್ಧಮಾಡುತ್ತಿದ್ದ ಬಲ ಮಹತ್ತಾಗಿದ್ದರೂ ಕೊಂಚಕೊಂಚವಾಗಿ ಹಿಮ್ಮೆಟ್ಟುತ್ತಾ ಬಂತು. ಅಮಾತ್ಯರು ದೇವಿಗೆ ಅದನ್ನು ತಿಳಿಸಿ, "ನಾವು ಹೀಗೆ ಹಿಮ್ಮೆಟ್ಟುತ್ತಾ ಸೋಲುವೆವೆಂದು ಹೆದರುವೆವು. ನಮ್ಮ ರಾಜನು ಕಾಲವಾದುದೂ, ಅವನಿಗೆ ಮಗ ಹುಟ್ಟಿ ದುದೂ, ಕೋಸಲರಾಜ ಬಂದು ಯುದ್ಧಮಾಡುತ್ತಿರುವುದೂ ರಾಜನ ಸ್ನೇಹಿತನಾದ ಪಟ್ಟದಾನೆಗೆ ತಿಳಿಯದು. ಅದಕ್ಕೆ ತಿಳಿಸೋಣವೆ?" ಎಂದು ಕೇಳಿದರು. ಅವಳು ಒಳ್ಳೆಯದೆಂದು ಒಪ್ಪಿ, ಮಗನಿಗೆ ಅಲಂಕಾರ ಮಾಡಿ, ಬಟ್ಟೆಯ ಸಿಂಬಿಯಲ್ಲಿ ಮಲಗಿಸಿ, ಅರಮನೆಯಿಂದ ಇಳಿದು, ಅಮಾತ್ಯಗಣಪರಿವೃತಳಾಗಿ ಗಜಶಾಲೆಗೆ ಹೋಗಿ, ಬೋಧಿಸತ್ತ್ವನನ್ನು ಆನೆಯ ಪಾದಮೂಲದಲ್ಲಿ ಮಲಗಿಸಿ, "ಸ್ವಾಮಿ, ನಿನ್ನ ಸಹಾಯಕನು ಕಾಲವಾದನು. ನಿನ್ನ ಎದೆಯೊಡೆಯುವುದೆಂಬ ಭಯದಿಂದ ನಾವು ನಿನಗೆ ತಿಳಿಸಲಿಲ್ಲ. ಇದು ನಿನ್ನ ಸ್ನೇಹಿತನ ಮಗು. ಕೋಸಲರಾಜನು ಬಂದು ನಗರವನ್ನು ಬಳಸಿ ನಿನ್ನ ಮಗನೊಡನೆ ಯುದ್ಧಮಾಡುವನು. ಸೇನೆ ಹಿಮ್ಮೆಟ್ಟುತ್ತಿದೆ. ನಿನ್ನ ಮಗನನ್ನು ನೀನೇ ಕೊಲ್ಲು, ಅಥವಾ ರಾಜ್ಯವನ್ನು ಅವನಿಗೆ ಹಿಡಿದುಕೊಡು" ಎಂದಳು.

ಆಗ ಆನೆ ಬೋಧಿಸತ್ತ್ವನನ್ನು ಸೊಂಡಿಲಿನಿಂದ ಸವರಿ, ಎತ್ತಿ ಕುಂಭದ ಮೇಲಿರಿಸಿಕೊಂಡು, ಅತ್ತು ಗೋಳಾಡಿ, ಬೋಧಿಸತ್ತ್ವನನ್ನು ಇಳಿಸಿ, ದೇವಿಯ ಕೈಯಲ್ಲಿ ಮಲಗಿಸಿ, "ಕೋಸಲರಾಜನನ್ನು ಹಿಡಿಯು ವೆನು" ಎಂದು ಗಜಶಾಲೆಯಿಂದ ಹೊರಟಿತು. ಅಮಾತ್ಯರು ಅದಕ್ಕೆ ಅಂಗರಕ್ಷೆಗಳನ್ನು ಹಾಕಿ ಅಲಂಕಾರಮಾಡಿ, ನಗರದ್ವಾರವನ್ನು ತೆರೆದು, ಅದನ್ನು ಬಳಸಿ ಹೊರಟರು. ಆನೆ ನಗರದಿಂದ ಹೊರಟು ಘೀಂಕಾರ ಮಾಡಿ,ಮಹಾಜನರನ್ನು ಭಯಗೊಳಿಸಿ ಓಡಿಸಿ, ಪಾಳೆಯವನ್ನು ಮುರಿದು,

ಕೋಸಲರಾಜನನ್ನು ಜುಟ್ಟು ಹಿಡಿದು ತಂದು, ಬೋಧಿಸತ್ತ್ವನ ಪಾದಮೂಲದಲ್ಲಿ ಮಲಗಿಸಿ, ಅವನನ್ನು ಕೊಲ್ಲಲು ಎದ್ದವರನ್ನು ತಡೆದು, "ಇಂದಿನಿಂದ ತೊಡಗಿ ಅಪ್ರಮತ್ತನಾಗಿರು. ಕುಮಾರನು ಚಿಕ್ಕವನೆಂದು ಕೊಳ್ಳಬೇಡ" ಎಂದು ಬುದ್ಧಿವಾದ ಹೇಳಿ ಕಳಿಸಿತು.

ಅಂದಿನಿಂದ ಹಿಡಿದು ಸಕಲ ಜಂಬೂದ್ವೀಪದ ರಾಜ್ಯವೂ ಬೋಧಿಸತ್ತ್ವನಿಗೇ ಹಸ್ತಗತವಾಯಿತು, ಇನ್ನೊಬ್ಬ ಪ್ರತಿಶತ್ರುವೆಂಬವನು ಮೇಲೇಳಲು ಸಮರ್ಥನಾಗಲಿಲ್ಲ. ಬೋಧಿಸತ್ತ್ವನು ಏಳನೆಯ ವರ್ಷದಲ್ಲಿ ಅಭಿಷೇಕ ಪಡೆದು, ಅಲೀನಚಿತ್ತರಾಜನೆಂಬವನಾಗಿ, ಧರ್ಮದಿಂದ ರಾಜ್ಯವಾಳುತ್ತಾ ಇದ್ದು, ಬದುಕು ಮುಗಿದ ಮೇಲೆ ಸ್ವರ್ಗಪದವನ್ನು ಪೂರೈಸಿದನು.

# ವೈದರ್ಭ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಒಂದಾನೊಂದು ಗ್ರಾಮದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣನು ವೈದರ್ಭವೆಂಬ ಮಂತ್ರವನ್ನು ತಿಳಿದಿದ್ದನು. ಆ ಮಂತ್ರ ಮಹಾ ಬೆಲೆಯುಳ್ಳುದು, ಯೋಗ್ಯತೆಯುಳ್ಳುದು. ನಕ್ಷತ್ರಯೋಗ ಲಭಿಸಿದಾಗ ಆ ಮಂತ್ರವನ್ನು ಹೇಳಿ ಆಕಾಶವನ್ನು ತಲೆಯೆತ್ತಿ ನೋಡಿದರೆ, ಆಕಾಶದಿಂದ ಸಪ್ತರತ್ನಗಳ ಮಳೆಯಾಗುತ್ತಿತ್ತು. ಆಗ ಬೋಧಿಸತ್ತ್ವನು ಆ ಬ್ರಾಹ್ಮಣನ ಬಳಿ ವಿದ್ಯೆ ಕಲಿಯುತ್ತಿದ್ದನು.

ಆಗ ಒಂದು ದಿನ ಆ ಬ್ರಾಹ್ಮಣನು ಬೋಧಿಸತ್ತ್ವನನ್ನು ಕರೆದು ಕೊಂಡು ಏನೋ ಕಾರ್ಯಕ್ಕಾಗಿ ತನ್ನ ಗ್ರಾಮದಿಂದ ಹೊರಟು ಬೇರೆಯ ರಾಷ್ಟ್ರಕ್ಕೆ ಬಂದನು. ನಡುದಾರಿಯಲ್ಲಿ ಒಂದಾನೊಂದು ಅರಣ್ಯದಲ್ಲಿ 'ಕಳುಹುವ ಕಳ್ಳ'ರೆಂದು ಹೆಸರಾದ ಐನೂರ್ವರು ದಾರಿಗರನ್ನು ಕೊಲ್ಲು ತ್ತಿದ್ದರು. ಅವರು ಬೋಧಿಸತ್ತ್ವನನ್ನೂ ವೈದರ್ಭಬ್ರಾಹ್ಮಣನನ್ನೂ ಹಿಡಿದರು.

ಅವರನ್ನು 'ಕಳುಹುವ ಕಳ್ಳ'ರೆಂದು ಏಕೆ ಹೇಳುತ್ತಿದ್ದರೆಂದರೆ: ಅವರು ಇಬ್ಬರನ್ನು ಹಿಡಿದರೆ ಒಬ್ಬನನ್ನು ಹಣ ತರುವುದಕ್ಕಾಗಿ ಕಳಿಸುತ್ತಿದ್ದರು. ಅದರಿಂದ ಅವರನ್ನು 'ಕಳುಹುವ ಕಳ್ಳ'ರೆನ್ನುತ್ತಿದ್ದರು. ತಂದೆ ಮಕ್ಕಳನ್ನು ಹಿಡಿದು, "ನೀನು ನಮಗೆ ಹಣ ತಂದುಕೊಟ್ಟು ಮಗನನ್ನು ಕೊಂಡು ಹೋಗು" ಎಂದು ತಂದೆಗೆ ಹೇಳುತ್ತಿದ್ದರು. ಅದೇ ರೀತಿಯಲ್ಲಿ ತಾಯಿ ಮಗಳನ್ನು ಹಿಡಿದು ತಾಯನ್ನು ಬಿಟ್ಟು ಕಳಿಸುತ್ತಿದ್ದರು, ಹಿರಿಯ ಕಿರಿಯ ರನ್ನು ಹಿಡಿದು ಹಿರಿಯಣ್ಣನನ್ನು ಬಿಡುತ್ತಿದ್ದರು, ಗುರುಶಿಷ್ಯರನ್ನು ಹಿಡಿದು ಶಿಷ್ಯರನ್ನು ಬಿಟ್ಟುಕಳಿಸುತ್ತಿದ್ದರು.

ಅವರು ಆಗಲೂ ವೈದರ್ಭಬ್ರಾಹ್ಮಣನನ್ನು ಹಿಡಿದು ಬೋಧಿಸತ್ತ್ವ ನನ್ನು ಬಿಟ್ಟುಕಳಿಸಿದರು. ಬೋಧಿಸತ್ತ್ವನು ಆಚಾರ್ಯನಿಗೆ ವಂದಿಸಿ, "ನಾನು ಒಂದೆರಡು ದಿನಗಳೊಳಗೆ ಬರುತ್ತೇನೆ. ನೀನು ಹೆದರಬೇಡ. ನನ್ನ ಮಾತಿನಂತೆ ನೀನು ನಡೆ. ಇಂದು ಧನದ ಮಳೆ ಬರಿಸುವ ನಕ್ಷತ್ರಯೋಗ ವಾಗುವುದು. ನೀನು ದುಃಖವನ್ನು ತಾಳಲಾರದೆ ಮಂತ್ರ ಹೇಳಿ ಧನದ

ಮಳೆಗರೆಸಬೇಡ. ಮಳೆಗರೆಸಿದರೆ ನೀನು ಈ ಐನೂರು ಕಳ್ಳರ ಕೈಯಲ್ಲಿ ವಿನಾಶಹೊಂದುವೆ" ಎಂದನು.

ಹೀಗೆ ಆಚಾರ್ಯನಿಗೆ ಬುದ್ಧಿಹೇಳಿ ಅವನು ಹಣಕ್ಕಾಗಿ ಹೊರಟನು. ಕಳ್ಳರು ಕೂಡ ಸೂರ್ಯ ಮುಳುಗಲು ಬ್ರಾಹ್ಮಣನನ್ನು ಕಟ್ಟಿ ಮಲಗಿಸಿದರು. ಅದೇ ಕ್ಷಣದಲ್ಲಿ ಪ್ರಾಚೀನಲೋಕಧಾತುವಿನಿಂದ ಪರಿಪೂರ್ಣವಾದ ಚಂದ್ರಮಂಡಲವೆದ್ದಿತು. ಬ್ರಾಹ್ಮಣನು ನಕ್ಷತ್ರವನ್ನುಗಮನಿಸುತ್ತಾ "ಹಣದ ಮಳೆಗರೆಸುವ ನಕ್ಷತ್ರಯೋಗ ಸಿಕ್ಕಿತು. ನಾನು ಏಕೆ ದುಃಖ ಅನುಭವಿಸಬೇಕು? ಮಂತ್ರಹೇಳಿ, ರತ್ನದ ಮಳೆಗರೆಸಿ, ಕಳ್ಳರಿಗೆ ಧನ ಕೊಟ್ಟು, ಯಥಾಸುಖವಾಗಿ ಹೋಗುವೆನು" ಎಂದು ಚಿಂತಿಸಿ, ಕಳ್ಳರನ್ನು ಕರೆದು, "ಓ ಕಳ್ಳರೆ, ನನ್ನನ್ನು ನೀವು ಏಕೆ ಹಿಡಿದಿರಿ?" ಎಂದನು.

"ಧನಕ್ಕಾಗಿ, ಅಯ್ಯಾ."

"ನಿಮಗೆ ಧನ ಬೇಕಾದರೆ ಬೇಗ ನನ್ನ ಕಟ್ಟನ್ನು ಕಳೆದು, ತಲೆಗೆ ಸ್ನಾನಮಾಡಿಸಿ, ಒಣಗದ ಬಟ್ಟೆ ಹೊದೆಸಿ, ಗಂಧವನ್ನು ಲೇಪಿಸಿ, ಹೂಗಳಿಂದ ಅಲಂಕರಿಸಿ, ನಿಲ್ಲಿಸಿರಿ."

ಕಳ್ಳರು ಅವನು ಹೇಳಿದುದನ್ನು ಕೇಳಿ ಹಾಗೆಯೇ ಮಾಡಿದರು. ಬ್ರಾಹ್ಮಣನು ನಕ್ಷತ್ರಯೋಗವನ್ನು ತಿಳಿದು, ಮಂತ್ರಹೇಳಿ, ಆಕಾಶದ ಕಡೆ ನೋಡಿದನು. ಆಗಲೇ ಆಕಾಶದಿಂದ ರತ್ನಗಳು ಬಿದ್ದುವು. ಕಳ್ಳರು ಆ ಧನವನ್ನು ರಾಶಿಮಾಡಿ ಹೊದ್ದ ಹೊದಿಕೆಗಳಲ್ಲಿ ಕಟ್ಟಿಕೊಂಡು ಹೋದರು. ಬ್ರಾಹ್ಮಣನೂ ಅವರ ಹಿಂದೆಯೇ ಹೋದನು.

ಆಗ ಆ ಕಳ್ಳರನ್ನು ಬೇರೆ ಐನೂರು ಕಳ್ಳರು ಹಿಡಿದರು. "ನಮ್ಮನ್ನೇಕೆ ಹಿಡಿದಿರಿ?" ಎಂದು ಕೇಳಲು, "ಧನಕ್ಕಾಗಿ" ಎಂದರು. ಅದಕ್ಕೆ ಅವರು "ನಿಮಗೆ ಧನ ಬೇಕಾದರೆ ಈ ಬ್ರಾಹ್ಮಣನನ್ನು ಹಿಡಿಯಿರಿ. ಇವನು ಆಕಾಶದ ಕಡೆ ನೋಡಿ ಧನದ ಮಳೆಗರೆಸುವನು. ನಮಗೂ ಇದನ್ನು ಇವನು ಹೀಗೇ ಕೊಟ್ಟನು" ಎಂದರು.

ಆ ಕಳ್ಳರು ಆ ಕಳ್ಳರನ್ನು ಬಿಟ್ಟು, "ನಮಗೂ ಧನ ಕೊಡು" ಎಂದು ಬ್ರಾಹ್ಮಣನನ್ನು ಹಿಡಿದರು.

ಬ್ರಾಹ್ಮಣನು "ನಾನು ನಿಮಗೆ ಧನ ಕೊಡುತ್ತೇನೆ. ಆದರೆ ಧನದ ಮಳೆಗರೆಸುವ ನಕ್ಷತ್ರಯೋಗ ಇಂದಿನಿಂದ ವರ್ಷದ ಕಡೆಗೆ ಬರುತ್ತದೆ. ಧನ ಬೇಕಾದರೆ ತಾಳಿರಿ, ಆಗ ಧನದ ಮಳೆಗರೆಸುವೆನು" ಎಂದನು.

ಕಳ್ಳರು ಕ್ರುದ್ಧರಾಗಿ, "ಓಹೋ ದುಷ್ಟ ಬ್ರಾಹ್ಮಣ, ಇತರರಿಗೆ ಈಗ ತಾನೆ ಧನದ ಮಳೆಗರೆಸಿ, ನಮಗೆ ಇನ್ನೊಂದು ವರ್ಷ ತಡೆಯ ಹೇಳುವೆಯಾ ? " ಎಂದು ತೀಕ್ಷ್ಣವಾದ ಕತ್ತಿಯಿಂದ ಬ್ರಾಹ್ಮಣನನ್ನು ಎರಡಾಗಿ ಸೀಳಿ ದಾರಿಯಲ್ಲಿ ಬಿಸುಟು, ವೇಗದಿಂದ ಬೆಂಬತ್ತಿ, ಆ ಕಳ್ಳರೊಡನೆ ಯುದ್ಧವಾಡಿ, ಅವರೆಲ್ಲರನ್ನೂ ಸಾಯಿಸಿ, ಧನವನ್ನು ತೆಗೆದು ಕೊಂಡು, ಪುನಃ ಎರಡು ಗುಂಪಾಗಿ ಒಬ್ಬರೊಡನೊಬ್ಬರು ಯುದ್ಧವಾಡಿ ಇನ್ನೂರೈವತ್ತು ಜನರನ್ನು ಕೊಂದರು. ಅದೇ ರೀತಿಯಲ್ಲಿ ಇಬ್ಬರು ಉಳಿಯುವವರೆಗೂ ಒಬ್ಬರನ್ನೊಬ್ಬರು ಕೊಂದರು.

ಹೀಗೆ ಇಬ್ಬರ ಹೊರತು ಎಲ್ಲರೂ ನಾಶವಾದರು. ಉಳಿದ ಇಬ್ಬರು ಉಪಾಯದಿಂದ ಆ ಧನವನ್ನು ತಂದು ಗ್ರಾಮದ ಸಮೀಪದ ಪೊದೆಯಲ್ಲಿ ಅದನ್ನು ಮುಚ್ಚಿಟ್ಟರು. ಒಬ್ಬನು ಖಡ್ಗ ಹಿಡಿದು ಅದರ ಕಾವಲಿಗೆ ಕುಳಿತನು, ಒಬ್ಬನು ಅಕ್ಕಿ ತೆಗೆದು ಅನ್ನ ಬೇಯಿಸುವುದಕ್ಕಾಗಿ ಗ್ರಾಮಕ್ಕೆ ಹೋದನು.

'ಲೋಭವೆಂಬುದು ವಿನಾಶಕ್ಕೆ ಮೂಲ' ಎಂಬಂತೆ ಧನದ ಬಳಿ ಕುಳಿತವನು "ಅವನು ಬಂದರೆ ಈ ಧನ ಎರಡು ಪಾಲಾಗುವುದು. ಅವನು ಬಂದೊಡನೆಯೇ ನಾನು ಅವನನ್ನು ಖಡ್ಗದಿಂದ ಹೊಡೆದು ಕೊಲ್ಲುವೆನು" ಎಂದು ಚಿಂತಿಸಿ, ಖಡ್ಗವನ್ನು ಸನ್ನಾಹಮಾಡಿ ಅವನ ಬರವನ್ನೇ ನೋಡುತ್ತಾ ಕುಳಿತನು.

ಇನ್ನೊಬ್ಬನೂ "ಆ ಧನ ಎರಡು ಪಾಲಾಗುವುದು. ನಾನು ಅನ್ನದಲ್ಲಿ ವಿಷ ಹಾಕಿ, ಅವನಿಗೆ ತಿನ್ನಿಸಿ, ಸಾಯಿಸಿ, ಒಬ್ಬನೇ ಧನ ಪಡೆಯುವೆನು" ಎಂದು ತಾನು ತಿಂದು ಉಳಿದುದರಲ್ಲಿ ವಿಷ ಹಾಕಿ ಅದನ್ನು ಅಲ್ಲಿಗೆ ತೆಗೆದುಕೊಂಡು ಬಂದನು.

ಅವನು ಅನ್ನವನ್ನು ಇಳಿಸಿದೊಡನೆಯೇ ಇನ್ನೊಬ್ಬನು ಖಡ್ಗದಿಂದ ಅವನನ್ನು ಎರಡಾಗಿ ಕತ್ತರಿಸಿ, ಆ ಮುಚ್ಚಿದ್ದೆಡೆ ಅವನನ್ನು ಚೆಲ್ಲಿ, ಆ ಅನ್ನವನ್ನು ತಿಂದು ತಾನೂ ಅಲ್ಲೇ ಸತ್ತನು.

ಹೀಗೆ ಆ ಧನ ಕಾರಣವಾಗಿ ಎಲ್ಲರೂ ವಿನಾಶವಾದರು.

ಬೋಧಿಸತ್ತ್ವನೂ ಒಂದೆರಡು ದಿನಗಳಲ್ಲಿ ಧನ ತೆಗೆದುಕೊಂಡು ಬಂದನು. ಅಲ್ಲಿ ಆಚಾರ್ಯನನ್ನು ಕಾಣದೆ, ಸುತ್ತಲೂ ಚೆದರಿದ್ದ ಧನವನ್ನು ಕಂಡು, "ಆಚಾರ್ಯನು ನನ್ನ ಮಾತು ನಡಸದೆ ಧನದ ಮಳೆಗರೆಸಿರಬೇಕು. ಎಲ್ಲರೂ ವಿನಾಶವಾಗಿರಬೇಕು" ಎಂದು ಮಹಾಮಾರ್ಗದಲ್ಲಿ ಹೋದನು. ಹೋಗುತ್ತಾ ಆಚಾರ್ಯನು ಮಹಾಮಾರ್ಗದಲ್ಲಿ ಎರಡಾಗಿ ಸೀಳಿಬಿದ್ದಿದ್ದುದನ್ನು ಕಂಡು, "ನನ್ನ ಮಾತು ನಡೆಸದೆ ಸತ್ತ" ನೆಂದು ಕಟ್ಟಿಗೆಯನ್ನುಎತ್ತಿ ಚಿತೆಮಾಡಿ, ಆಚಾರ್ಯನನ್ನುಸುಟ್ಟು,ವನಪುಷ್ಪಗಳಿಂದ ಪೂಜಿಸಿ, ಮುಂದೆ ಹೋಗುತ್ತಾಸತ್ತ ಐನೂರ್ವರನ್ನೂ ಅನಂತರ ಕ್ರಮ ಕ್ರಮವಾಗಿ ಇಬ್ಬರವರೆಗೂ ಸತ್ತವರನ್ನೂ ಕಂಡು, "ಇಬ್ಬರ ಹೊರತು ಈ ಸಾವಿರ ಜನ ವಿನಾಶವಾದರು. ಇನ್ನಿಬ್ಬರೂ ಕಳ್ಳರಾಗಿರಬೇಕು. ಅವರೂ ಸುಮ್ಮನಿದ್ದಿರಲಾರರು. ಅವರೆಲ್ಲಿ ಹೋದರು?" ಎಂದು ಹೇಳುತ್ತಾ ಅವರು ಹಣವನ್ನು ಕೊಂಡುಹೋಗಿ ಪೊದೆಯನ್ನು ಹೊಕ್ಕ ದಾರಿಯನ್ನು ಕಂಡು, ಹೋಗಿ, ಬಿಗಿದಿಟ್ಟ ಗಂಟನ್ನೂ ಧನದ ರಾಶಿಯನ್ನೂ ಕಂಡು, ಒಬ್ಬನು ಊಟದ ಪಾತ್ರೆಯನ್ನು ಉರುಳಿಸಿ ಸತ್ತು ಬಿದ್ದಿದ್ದುದನ್ನು ಕಂಡನು. ಆಗ 'ಇವರು ಹೀಗೆ ಮಾಡಿರಬೇಕು' ಎಂದು ಎಲ್ಲವನ್ನೂ ತಿಳಿದು, 'ಅವನು ಎಲ್ಲಿ?' ಎಂದು ಹುಡುಕುತ್ತಾ ಅವನೂ ಮುಚ್ಚಿದ್ದ ಕಡೆ ಗಾಯಗೊಂಡು ಬಿದ್ದಿದ್ದುದನ್ನು ಕಂಡು, "ನನ್ನ ಆಚಾರ್ಯನು ನನ್ನ ಮಾತನ್ನು ನಡಸದೆ ತನ್ನ ವಾಚಾಲತ್ವದಿಂದ ತಾನು ನಾಶವಾದನು, ಅಲ್ಲದೆ ಸಾವಿರ ಜನರನ್ನುನಾಶಮಾಡಿದನು. ಅನುಪಾಯದಿಂದ ಅಕಾರಣವಾಗಿ ತನ್ನ ವೃದ್ಧಿಯನ್ನೇ ಬಯಸುವವನು ನನ್ನ ಆಚಾರ್ಯನಂತೆ ಮಹಾನಾಶವನ್ನೇ ಪಡೆಯುವನು" ಎಂದು ಚಿಂತಿಸಿ, "ಅನುಪಾಯದಿಂದ ಅರ್ಥವನ್ನು ಇಷ್ಟಪಡುವವನು ನಾಶವಾಗುವನು. ಕಳ್ಳರು ವೈದರ್ಭನನ್ನು ಕೊಂದರು, ಎಲ್ಲರೂ ವ್ಯಸನಹೊಂದಿದರು" ಎಂದನು.

ಹೀಗೆ ಬೋಧಿಸತ್ತ್ವನು "ನನ್ನ ಆಚಾರ್ಯನು ಹೇಗೆ ಅನುಪಾಯ ದಿಂದ ಆಸ್ಥಾನದಲ್ಲಿ ಪರಾಕ್ರಮಮಾಡುತ್ತಾ ಧನದ ಮಳೆಗರೆಸಿ ತಾನೂ ಸಾವುಪಡೆದು ಇತರರ ವಿನಾಶಕ್ಕೆ ಕಾರಣನಾದನೋ ಹಾಗೆಯೇ ಇತರರೂ ಅನುಪಾಯದಿಂದ ತಮ್ಮ ಅರ್ಥವನ್ನು ಬಯಸುತ್ತಾ ವ್ಯಾಯಾಮ ಮಾಡಿದರೆ, ತಾವೂ ಹಾಳಾಗುವರು, ಇತರರನ್ನೂ ಹಾಳುಮಾಡುವರು" ಎಂದು ವನ ದನಿಕೊಡುವಂತೆ, ದೇವತೆಗಳು ಸಾಧುಕಾರ ಕೊಡುವಂತೆ ಧರ್ಮವನ್ನು ತಿಳಿಸಿದನು. ಅನಂತರ ಆ ಧನವನ್ನು ಉಪಾಯ ದಿಂದ ತನ್ನ ಮನೆಗೆ ತರಿಸಿ ದಾನಾದಿ ಪುಣ್ಯಗಳನ್ನು ಮಾಡುತ್ತಾ, ಆಯುಸ್ಸಿರುವವರೆಗೆ ಇದ್ದು, ಜೀವ ಮುಗಿದ ಮೇಲೆ ಸ್ವರ್ಗಪದವನ್ನು ಪೂರೈಸಲು ಹೋದನು.

# ಸುಪಾರಗ

ಹಿಂದೆ, ಭರು ರಾಷ್ಟ್ರದಲ್ಲಿ ಭರು ರಾಜನೆಂಬವನು ರಾಜ್ಯವಾಳು ತ್ತಿದ್ದನು. ಅಲ್ಲಿ ಭರುಕಚ್ಛವೆಂಬ ಪಟ್ಟಣಗ್ರಾಮವಿತ್ತು. ಆಗ ಬೋಧಿ ಸತ್ತ್ವನು ಭರುಕಚ್ಛದಲ್ಲಿ ಹಡಗು ನಡಸುವ ಹಿರಿಯನ ಮಗನಾಗಿ, ಪ್ರಸನ್ನಮುಖನಾಗಿ, ಸುವರ್ಣವರ್ಣನಾಗಿ ಹುಟ್ಟಿದನು. ಸುಪಾರಗ ಕುಮಾರನೆಂದು ಅವನಿಗೆ ಹೆಸರಿಟ್ಟರು. ಅವನು ಮಹತ್ತಾದ ಪರಿವಾರ ದೊಡನೆ ಬಳೆಯುತ್ತಾ ಹದಿನಾರು ವರ್ಷದ ವೇಳೆಗೇ ಹಡಗು ನಡಸುವ ವಿದ್ಯೆಯಲ್ಲಿ ಪ್ರವೀಣನಾಗಿ, ತಂದೆ ಸತ್ತ ಬಳಿಕ ಹಡಗು ನಡಸುವ ಹಿರಿಯನಾಗಿ, ಹಡಗು ನಡಸುವ ಕೆಲಸ ಮಾಡಿದನು; ಪಂಡಿತನೂ ಜ್ಞಾನಸಂಪನ್ನನೂ ಆದನು. ಅವನು ಏರಿದ ನಾವೆಗೆ ವಿಪತ್ತೆಂಬುದು ಇರಲಿಲ್ಲ.

ಅವನಿಗೆ ಕೆಲವು ಕಾಲದನಂತರ ಉಪ್ಪುಸೀರಿನ ಏಟು ಬಿದ್ದು ಎರಡು ಕಣ್ಣೂ ನಾಶವಾದವು. ಅವನು ಅಂದಿನಿಂದ ಹಡಗು ನಡಸುವ ಹಿರಿಯನಾದರೂ ಹಡಗು ನಡಸುವ ಕೆಲಸವನ್ನು ಮಾಡದೆ "ರಾಜನನ್ನು ಆಶ್ರಯಿಸಿ ಜೀವಿಸುವೆನು" ಎಂದು ರಾಜನ ಬಳಿ ಸೇರಿದನು. ಅವನನ್ನು ರಾಜನು ಬೆಲೆ ಕಟ್ಟುವ ಕೆಲಸದಲ್ಲಿ ನಿಲ್ಲಿಸಿದನು. ಅಂದಿನಿಂದ ರಾಜನ ಹಸ್ತಿರತ್ನ ಅಶ್ವರತ್ನ ಮುಕ್ತಾಸಾರ ಮಣಿಸಾರ ಮೊದಲಾದವುಗಳಿಗೆ ಅವನು ಬೆಲೆ ಕಟ್ಟುವನು.

ಆಗ ಒಂದು ದಿನ "ರಾಜನಿಗೆ ಇದು ಮಂಗಲಹಸ್ತಿಯಾಗುವುದು" ಎಂದು ಕಾಳಪಾಷಾಣಕೂಟವರ್ಣದ ಒಂದು ವಾರಣವನ್ನು ತಂದರು. ರಾಜನು ಅದನ್ನು ಕಂಡು, "ಪಂಡಿತನಿಗೆ ತೋರಿಸಿರಿ" ಎಂದನು. ಆಗ ಅದನ್ನು ಅವನ ಹತ್ತಿರ ಒಯ್ದರು. ಅವನು ಕೈಯಿಂದ ಆದರ ಮೈಯನ್ನು ಸವರಿ, "ಇದು ಮಂಗಳಹಸ್ತಿಯಾಗಲು ಯೋಗ್ಯವಲ್ಲ. ಇದರ ಹಿಂಭಾಗ ಮೋಟಾಗಿದೆ. ಇದರ ತಾಯಿ ಇದನ್ನು ಹಡೆದಾಗ ಹೆಗಲ ಮೇಲೆ ಕೊಳ್ಳಲಾರದೆ, ನೆಲದಲ್ಲಿ ಬಿದ್ದುದರಿಂದ ಹಿಂಗಾಲು ಮೋಟಾಯಿತು" ಎಂದನು. ಆನೆಯನ್ನು ಕೊಂಡುಬಂದವರನ್ನು ಕೇಳಿದನು. ಅವರು

'ಪಂಡಿತನು ಸತ್ಯ ಹೇಳುವನು' ಎಂದರು. ರಾಜನು ಅದನ್ನು ಕೇಳಿ ತುಷ್ಟನಾಗಿ ಅವನಿಗೆ ಎಂಟು ಕಾರ್ಷಾಪಣಗಳನ್ನು ಕೊಡಿಸಿದನು.

ಪುನಃ ಒಂದು ದಿನ 'ಇದು ರಾಜನ ಮಂಗಲಾಶ್ವವಾಗುವುದೆ'ಂದು ಒಂದು ಕುದುರೆಯನ್ನು ಕರೆತಂದರು. ಅದನ್ನೂ ರಾಜನು ಪಂಡಿತನ ಬಳಿಗೆ ಕಳಿಸಿದನು. ಅವನು ಕೈಯಿಂದ ಅದನ್ನು ಸವರಿನೋಡಿ, "ಇದು ಮಂಗಲಾಶ್ವವಾಗಲು ತಕ್ಕುದಲ್ಲ. ಇದು ಹುಟ್ಟಿದ ದಿವಸವೇ ಇದರ ತಾಯಿ ಸತ್ತಿತು. ಅದರಿಂದ ತಾಯಿಹಾಲು ದೊರಕದೆ ಇದು ಚೆನ್ನಾಗಿ ಬೆಳೆದಿಲ್ಲ" ಎಂದನು. ಆ ಮಾತೂ ಸತ್ಯವೇ ಆಯಿತು. ರಾಜನು ಅದನ್ನೂ ಕೇಳಿ ಸಂತೋಷಿಸಿ ಎಂಟೇ ಕಾರ್ಷಾಪಣಗಳನ್ನು ಅವನಿಗೆ ಕೊಡಿಸಿದನು.

ಇನ್ನೊಂದು ದಿನ 'ಇದು ಮಂಗಲರಥವಾಗುವುದೆ'ಂದು ರಥವನ್ನು ತಂದರು. ರಾಜನು ಅದನ್ನೂ ಅವನ ಹತ್ತಿರ ಕಳಿಸಿದನು. ಅವನು ಅದನ್ನು ಕೈಯಿಂದ ಸವರಿ, "ಈ ರಥವು ಟೊಳ್ಳುಮರದಿಂದಾದುದು. ಆದ್ದರಿಂದ ರಾಜನಿಗೆ ಅನುರೂಪವಲ್ಲ" ಎಂದನು. ಅವನ ಆ ಮಾತೂ ಸತ್ಯವೇ ಆಯಿತು. ರಾಜನು ಅದನ್ನೂ ಕೇಳಿ ಎಂಟೇ ಕಾರ್ಷಾಪಣಗಳನ್ನು ಅವನಿಗೆ ಕೊಡಿಸಿದನು.

ಅನಂತರ ಮಹಾರ್ಘವಾದ ಕಂಬಳರತ್ನವನ್ನು ತಂದರು. ರಾಜನು ಅದನ್ನೂ ಅವನಿಗೇ ಕಳಿಸಿದನು. ಅವನು ಅದನ್ನೂ ಕೈಯಿಂದ ಸವರಿ, "ಇದರಲ್ಲಿ ಇಲಿ ಕಡಿದುದೊಂದು ಸ್ಥಾನವಿದೆ" ಎಂದನು. ಶೋಧಿಸಿದವರು ಅದನ್ನು ಕಂಡು ರಾಜನಿಗೆ ತಿಳಿಸಿದರು. ರಾಜನು ಸಂತೋಷಿಸಿ ಎಂಟೇ ಕಾರ್ಷಾಪಣಗಳನ್ನು ಅವನಿಗೆ ಕೊಡಿಸಿದನು.

ಆಗ ಸುಪಾರಗನು "ಈ ರಾಜನು ಇಂತಹ ಆಶ್ಚರ್ಯಗಳನ್ನು ಕಂಡರೂ ಎಂಟೇ ಕಾರ್ಷಾಪಣ ಕೊಡಿಸಿದನು. ಇವನು ಕೊಡುವುದು ನಾಪಿತನಿಗೆ ಕೊಡುವಂತಹದು. ಇವನು ನಾಪಿತನಿಗೆ ಹುಟ್ಟಿದವನಿರಬೇಕು. ಇಂತಹ ರಾಜನ ಸೇವೆಯಿಂದ ನನಗೇನು? ನನ್ನ ವಾಸಸ್ಥಾನಕ್ಕೇ ಹೋಗುವೆನು" ಎಂದು ಅವನು ಭರುಕಚ್ಛ ಪಟ್ಟಣಕ್ಕೇ ಹಿಂದಿರುಗಿ ಬಂದನು.

ಆಗ ಅಲ್ಲಿ ವಾಸಿಸಿದ್ದ ವಾಣಿಜರು ನಾವೆಯನು ಸಜ್ಜುಗೊಳಿಸಿ, 'ಯಾರನ್ನು ಹಡಗು ನಡಸುವವನನ್ನಾಗಿ ಮಾಡೋಣ'? ಎಂದು ಆಲೋಚಿಸಿ, "ಸುಪಾರಗ ಪಂಡಿತನು ಏರಿದ ನಾವೆ ವಿಪತ್ತಿಗೊಳಗಾಗದು. ಈ ಪಂಡಿತನು ಉಪಾಯಕುಶಲಿ. ಕುರುಡನಾದರೂ ಸುಪಾರಗ ಪಂಡಿತನೇ ಉತ್ತಮು" ಎಂದು, ಅವನ ಬಳಿಸಾರಿ, "ನೀನು ನಮ್ಮ ಹಡಗು ನಡಸುವವನಾಗು" ಎಂದರು.

"ಅಯ್ಯಾ, ನಾನು ಕುರುಡ." ಹಡಗನ್ನು ಹೇಗೆ ನಡಸಲಿ ?"

" ಸ್ವಾಮಿ, ಕುರುಡನಾದರೂ ನೀನೇ ನಮಗೆ ಉತ್ತಮ."

ಪುನಃ ಪುನಃ ಬೇಡಲು, "ಒಳ್ಳೆಯದಯ್ಯಾ, ನೀವು ತಿಳಿಸಿದಂತೆಯೆ ಹಡಗು ನಡಸುವವನಾಗುವೆನು" ಎಂದು ಸುಪಾರಗನು ಅವರ ನಾವೆಯನ್ನು ಹತ್ತಿದನು.

ಅವರು ನಾವೆಯಲ್ಲಿ ಮಹಾಸಮುದ್ರದ ಮೇಲೆ ಹೋದರು. ನಾವೆ ಏಳು ದಿವಸ ಉಪದ್ರವವಿಲ್ಲದೆ ಹೋಯಿತು. ಆಮೇಲೆ ಅಕಾಲದ ಗಾಳಿ ಯೆದ್ದಿತು. ನಾವೆ ನಾಲ್ಕು ತಿಂಗಳು ಪ್ರಕೃತಿಸಮುದ್ರದ ಮೇಲೆ ತಿರುಗಾಡಿ, ಕ್ಷುರಮಾಲ ಸಮುದ್ರವೆಂಬುದನ್ನು ಮುಟ್ಟಿತು. ಅಲ್ಲಿ ಮನುಷ್ಯರಂತೆ ಮೈಯೂ ಕ್ಷುರದಂತೆ ಮೂಗೂ ಉಳ್ಳ ಮತ್ಸ್ಯಗಳು ನೀರಿನಲ್ಲಿ ಎದ್ದೆದ್ದು ಮುಳುಗುತ್ತಿದ್ದುವು.

ವಾಣಿಜರು ಅದನ್ನು ಕಂಡು ಮಹಾಸತ್ತ್ವನನ್ನು ಕುರಿತು, "ಕ್ಷುರದಂತೆ ಮೂಗುಳ್ಳ ಮನುಷ್ಯರು ಏಳುವರು, ಮುಳುಗುವರು. ಸುಪಾರಗ, ಇದು ಯಾವ ಸಮುದ್ರ ? ಹೇಳು" ಎಂದು ಆ ಸಮುದ್ರದ ಹೆಸರು ಕೇಳಿದರು.

ಹೀಗೆ ಅವರು ಕೇಳಲು, ಸುಪಾರಗನು ತನ್ನ ಹಡಗು ನಡಸುವ ಸೂತ್ರವನ್ನು ತಿರುವಿ ಹಾಕಿ, "ಹಣ ಹುಡುಕಿಕೊಂಡು ಭರುಕಚ್ಛದಿಂದ ಹೊರಟ ವಾಣಿಜರೆ, ನಿಮ್ಮ ನಾವೆ ದಾರಿತಪ್ಪಿ ಬಂದಿರುವ ಇದನ್ನು ಕ್ಷುರಮಾಲಾ ಎನ್ನುವರು" ಎಂದನು.

ಆ ಸಮುದ್ರದಲ್ಲಿ ವಜ್ರ ದೊರಕುವುದು. ಮಹಾಸತ್ತ್ವನು "ಇದು ವಜ್ರ ಸಮುದ್ರವೆಂದು ಇವರಿಗೆ ನಾನು ಹೇಳಿದರೆ, ಲೋಭದಿಂದ ಇವರು

ಬಹು ವಜ್ರವನ್ನು ಕೊಂಡು ನಾವೆಯನ್ನು ಮುಳುಗಿಸಿಬಿಡುವರು"ಎಂದು ಅವರಿಗೆ ತಿಳಿಸದೆಯೇ ನಾವೆಯನ್ನು ಕಟ್ಟಿಸಿ, ಉಪಾಯದಿಂದ ಒಂದು ಹಗ್ಗವನ್ನು ಹಿಡಿದು, ಮೀನು ಹಿಡಿಯುವ ರೀತಿಯಿಂದ ಬಲೆಯನ್ನು ಬೀಳಗೊಳಿಸಿ, ವಜ್ರಸಾರವನ್ನು ಮೇಲೆತ್ತಿ ನಾವೆಯಲ್ಲಿ ಇಟ್ಟು, ಇತರ ಅಲ್ಪ ಬೆಲೆಯ ವಸ್ತುಗಳನ್ನು ಬಿಸಾಡಿಸಿದನು.

ನಾವೆ ಆ ಸಮುದ್ರವನ್ನು ದಾಟಿ ಅನಂತರ ಅಗ್ನಿಮಾಲೀ ಎಂಬುದಕ್ಕೆ ಹೋಯಿತು. ಅದು ಪ್ರಜ್ವಲಿಸುವ ಅಗ್ನಿಸ್ಕಂಧದಂತೆ, ಮಧ್ಯಾಂತಿಕ ಸೂರ್ಯನಂತೆ, ಬೆಳಗು ಬಿಡುತ್ತಾ ಇತ್ತು.

ವಾಣಿಜರು "ಅಗ್ನಿಯಂತೆ, ಸೂರ್ಯನಂತೆ ಕಂಡುಬರುವ ಈ ಸಮುದ್ರ ಯಾವುದು, ಸುಪಾರಗ?" ಎಂದು ಅವನನ್ನು ಕೇಳಿದರು.

ಮಹಾಸತ್ತ್ವನು ಅದಕ್ಕೆ "ಹಣ ಹುಡುಕಿಕೊಂಡು ಭರುಕಚ್ಛದಿಂದ ಹೊರಟಿರುವ ವಾಣಿಜರೆ, ನಿಮ್ಮ ನಾವೆ ದಾರಿ ತಪ್ಪಿರುವ ಇದನ್ನು ಅಗ್ನಿಮಾಲೀ ಎನ್ನುವರು" ಎಂದನು.

ಆ ಸಮುದ್ರದಲ್ಲಿ ಸುವರ್ಣ ಹೆಚ್ಚಾಗಿತ್ತು. ಮಹಾಸತ್ತ್ವನು ಮೊದಲಿನಂತೆಯೇ ಆಗಲೂ ಚಿನ್ನವನ್ನು ತೆಗೆಸಿ ನಾವೆಯಲ್ಲಿಟ್ಟನು. ನಾವೆ ಆ ಸಮುದ್ರವನ್ನೂ ದಾಟಿ ಹಾಲಿನಂತೆ, ಮೊಸರಿನಂತೆ ಪ್ರಕಾಶಿಸುವ ದಧಿಮಾಲಿಯೆಂಬ ಸಮುದ್ರವನ್ನು ಮುಟ್ಟಿತು.

ವಾಣಿಜರು "ಈ ಸಮುದ್ರ ಹಾಲಿನಂತೆ,ಮೊಸರಿನಂತೆ ಕಾಣುತ್ತದೆ. ಈ ಸಮುದ್ರ ಯಾವುದು, ಸುಪಾರಗ?" ಎಂದು ಅದರ ಹೆಸರನ್ನು ಕೇಳಿದರು.

ಮಹಾಸತ್ತ್ವನು "ಹಣ ಹುಡುಕಿಕೊಂಡು ಭರುಕಚ್ಛದಿಂದ ಹೊರಟಿರುವ ವಾಣಿಜರೆ, ನಾವೆ ದಾರಿ ತಪ್ಪಿರುವ ಇದನ್ನು ದಧಿಮಾಲಿಯೆನ್ನುವರು" ಎಂದನು.

ಆ ಸಮುದ್ರದಲ್ಲಾದರೋ ಬೆಳ್ಳಿ ಬಹಳ. ಅವನು ಅದನ್ನೂ ಉಪಾಯದಿಂದ ತೆಗೆಸಿ ನಾವೆಯಲ್ಲಿ ಇಡಿಸಿದನು.

ನಾವೆ ಆ ಸಮುದ್ರವನ್ನು ದಾಟಿ ನೀಲಕುಶತೃಣದಂತೆ, ಸಂಪನ್ನ ಸಸ್ಯದಂತೆ ಹೊಳೆಯುವ ನೀಲವರ್ಣಕುಶಮಾಲವೆಂಬ ಸಮುದ್ರವನ್ನು ಮುಟ್ಟಿತು.

ವಾಣಿಜರು "ಕುಶದಂತೆ, ಸಸ್ಯದಂತೆ, ಈ ಸಮುದ್ರ ಕಣ್ಗೊಳಿಸುತ್ತದೆ. ಈ ಸಮುದ್ರ ಯಾವುದು, ಸುಪಾರಗ?" ಎಂದು ಅದರ ಹೆಸರನ್ನು ಕೇಳಿದರು.

ಅವನು "ಹಣ ಹುಡುಕಿಕೊಂಡು ಭರುಕಚ್ಛದಿಂದ ಹೊರಟ ವಾಣಿಜರೆ, ನಾವೆ ದಾರಿತಪ್ಪಿರುವ ಇದನ್ನು ಕುಶಮಾಲೀಯೆಂದು ಹೇಳುವರು" ಎಂದನು.

ಆ ಸಮುದ್ರದಲ್ಲಾದರೋ ನೀಲಮಣಿರತ್ನ ಬೇಕಾದಷ್ಟು. ಅವನು ಅದನ್ನೂ ಉಪಾಯದಿಂದ ತೆಗೆಸಿ ನಾವೆಯಲ್ಲಿ ಇಡಿಸಿದನು.

ನಾವೆ ಆ ಸಮುದ್ರವನ್ನೂ ದಾಟಿ, ನಳವನದಂತೆ, ವೇಣುವನದಂತೆ ಬೆಳಗುತ್ತಿದ್ದ ನಳಮಾಲಿಯೆಂಬ ಸಮುದ್ರವನ್ನು ಮುಟ್ಟಿತು.

ವಾಣಿಜರು "ನಳದಂತೆ, ವೇಣುವಿನಂತೆ ಈ ಸಮುದ್ರ ಕಣ್ಗೊಳಿಸುವುದು. ಇದು ಯಾವ ಸಮುದ್ರ, ಸುಪಾರಗ?" ಎಂದು ಅದರ ಹೆಸರನ್ನು ಕೇಳಿದರು.

ಮಹಾಸತ್ತ್ವನು "ಧನ ಹುಡುಕಿಕೊಂಡು ಭರುಕಚ್ಛದಿಂದ ಹೊರಟಿರುವ ವಾಣಿಜರೆ, ನಾವೆ ದಾರಿತಪ್ಪಿರುವ ಇದನ್ನು ನಳಮಾಲೀ ಎಂದು ಕರೆಯುವರು" ಎಂದನು.

ಆ ಸಮುದ್ರದಲ್ಲಿ ಬಿದಿರಿನ ಬಣ್ಣದ ವೈಡೂರ್ಯ ಅಧಿಕ. ಅವನು ಅದನ್ನೂ ತೆಗೆಸಿ ನಾವೆಯಲ್ಲಿ ಇಡಿಸಿದನು.

ವಾಣಿಜರು ನಳಮಾಲಿಯನ್ನು ದಾಟಿ, ಬಡಬಾಮುಖಸಮುದ್ರವೆಂಬುದನ್ನು ಕಂಡರು. ಅಲ್ಲಿ ನೀರು ಸೆಳೆದು ಸೆಳೆದು ಎಲ್ಲಕಡೆಯೂ ಮೇಲೇಳುವುದು. ಅಲ್ಲಿ ಎಲ್ಲಕಡೆಯೂ ನೀರು ಮೇಲೆದ್ದು, ಎಲ್ಲಕಡೆಯೂ ದಡ ಮುರಿದ ಮಹಾಬಿಲದಂತೆ ಕಾಣುವುದು. ಅಲೆಗಳು ಎದ್ದು

ಪ್ರಪಾತದಂತಾಗುವುದು. ಭಯ ಹುಟ್ಟಿಸುವ ಶಬ್ದ ಎದ್ದು ಕಿವಿಗಳನ್ನು ಬಿರಿಯುವುದು, ಹೃದಯವನ್ನು ಸೀಳುವುದು.

ಅದನ್ನು ಕಂಡು ವಾಣಿಜರು ಭಯದಿಂದ ನಡುಗಿ, "ಮಹಾ ಭಯವೂ ಭೀಷಣಕವೂ ಆದ ಈ ಸಮುದ್ರವು ಅಮಾನುಷವಾಗಿ ಸುಯ್ಯುಗುಡುತ್ತದೆ. ಪಾತಾಳದಂತೆ, ಪ್ರಪಾತದಂತೆ ಈ ಸಮುದ್ರ ಕಾಣುತ್ತದೆ. ಈ ಸಮುದ್ರ ಎಂತಹದೆಂದು ನಿನ್ನನ್ನು ಕೇಳುವೆವು, ಸುಪಾರಗ ? " ಎಂದರು.

"ಹಣ ಹುಡುಕಿಕೊಂಡು ಭರುಕಚ್ಛದಿಂದ ಹೊರಟಿರುವ ವಾಣಿಜರೆ, ನಾವೆ ದಾರಿ ತಪ್ಪಿರುವ ಇದನ್ನು ಬಡಬಾಮುಖೀ ಎಂದು ಕರೆಯುವರು " ಎಂದು ಅದರ ಹೆಸರನ್ನು ತಿಳಿಸಿ, "ಅಯ್ಯಾ, ಈ ಬಡಬಾಮುಖಿಯೆಂಬ ಸಮುದ್ರವನ್ನು ಸೇರಿ ಹಿಂದಿರುಗಲು ಸಮರ್ಥವಾದ ನಾವೆಯೆಂಬುದಿಲ್ಲ. ಈ ನಾವೆ ಅಲ್ಲಿಗೆ ಹೋದರೆ ಮುಳುಗಿ ವಿನಾಶವಾಗುವುದು" ಎಂದನು.

ಆ ನಾವೆಯನ್ನು ಏಳುನೂರು ಮನುಷ್ಯರು ಏರಿದ್ದರು. ಅವರೆಲ್ಲರೂ ಮರಣಭಯದಿಂದ ಹೆದರಿ, ಅವೀಚೀನರಕದಲ್ಲಿ ಸುಡುತ್ತಿರುವವರಂತೆ ಒಂದೇ ಕೂಗಿನಿಂದ ಅತಿ ಕರುಣಸ್ವರವನ್ನು ಕೂಗಿದರು. ಮಹಾ ಸತ್ತ್ವನು " ನನ್ನ ಹೊರತು ಇವರಿಗೆ ಒಳ್ಳೆಯದುಂಟುಮಾಡಲು ಸಮರ್ಥರಾದವರಿಲ್ಲ. ಸತ್ಯಕ್ರಿಯೆಯಿಂದ ಇವರಿಗೆ ಒಳ್ಳೆಯದನ್ನು ಮಾಡುತ್ತೇನೆ" ಎಂದು ಚಿಂತಿಸಿ, ಅವರನ್ನು ಕರೆದು, " ಅಯ್ಯಾ, ನನಗೆ ಬೇಗ ಗಂಧೋದಕದಿಂದ ಸ್ನಾನಮಾಡಿಸಿ, ಹೊಸ ವಸ್ತ್ರಗಳನ್ನು ಹೊದೆಸಿ, ಪೂರ್ಣಪಾತ್ರವನ್ನು ಸಜ್ಜುಗೊಳಿಸಿ, ನಾವೆಯ ಮುಂಭಾಗದಲ್ಲಿ ನನ್ನನ್ನು ನಿಲ್ಲಿಸಿರಿ " ಎಂದನು.

ಅವರು ಬೇಗನೆ ಹಾಗೆಯೇ ಮಾಡಿದರು. ಮಹಾಸತ್ತ್ವನು ಎರಡೂ ಕೈಗಳಲ್ಲಿ ಪೂರ್ಣಪಾತ್ರವನ್ನು ಹಿಡಿದು ನಾವೆಯ ಮುಂಭಾಗದಲ್ಲಿ ನಿಂತು ಸತ್ಯಕ್ರಿಯೆ ಮಾಡುತ್ತಾ " ನನಗೆ ನೆನಪಿರುವಂತೆ, ನನಗೆ ಬುದ್ಧಿ ಬಂದ ಕಾಲದಿಂದ ನನಗೆ ತಿಳಿದಂತೆ, ಒಂದು ಪ್ರಾಣಿಯನ್ನೂ ನಾನು ಹಿಂಸಿಸಿಲ್ಲ. ಈ ಸತ್ಯದ ಮಾತಿನಿಂದ ನಾವೆ ಸ್ವಸ್ತವಾಗಿ ಹಿಂದಿರುಗಲಿ " ಎಂದನು.

ನಾಲ್ಕು ಮಾಸ ವಿದೇಶದಲ್ಲಿ ತಿರುಗುತ್ತಿದ್ದ ನಾವೆ ಹಿಂದಿರುಗಿ ಋದ್ಧಿಯಿಂದ ಕೂಡಿದಂತೆ ಋದ್ಧಿಯ ಅನುಭಾವದಿಂದ ಒಂದೇ ದಿನದಲ್ಲಿ ಭರುಕಚ್ಛಪಟ್ಟಣಕ್ಕೆ ಬಂದಿತು; ನೆಲದ ಮೇಲೂ ಹೋಗಿ, ಎಂಟು ವೃಷಭಗಳ ದೂರ ಹಾರಿ, ನಾವಿಕರ ಮನೆಬಾಗಿಲಲ್ಲಿ ನಿಂತಿತು.

ಮಹಾಸತ್ತ್ವನು ಆ ವಾಣಿಜರಿಗೆ ಸುವರ್ಣ ರಜತಮಣಿ ಪ್ರವಾಳ ವಜ್ರಗಳನ್ನು ಭಾಗಿಸಿಕೊಟ್ಟನು. "ನಿಮಗೆ ಈ ರತ್ನಗಳು ಸಾಕು. ಪುನಃ ಸಮುದ್ರವನ್ನು ಪ್ರವೇಶಿಸಬೇಡಿರಿ" ಎಂದು ಅವರಿಗೆ ಬುದ್ಧಿ ಹೇಳಿ ಜೀವವಿರುವತನಕ ದಾನಾದಿಗಳನ್ನು ಮಾಡುತ್ತಾ ಇದ್ದು, ದೇವಪುರವನ್ನು ಪೂರೈಸಿದನು.

## ದಧಿವಾಹನ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಕಾಶೀರಾಷ್ಟ್ರದಲ್ಲಿ ನಾಲ್ಕು ಜನ ಅಣ್ಣತಮ್ಮಂದಿರಿದ್ದರು. ಅವರು ಬ್ರಾಹ್ಮಣರು ; ಮನೆಯನ್ನು ಬಿಟ್ಟು ಹೊರಟು ಋಷಿಗಳಾಗಿ, ಹಿಮವಂತ ಪ್ರದೇಶದಲ್ಲಿ ಸಾಲಾಗಿ ಪರ್ಣಶಾಲೆ ಮಾಡಿಕೊಂಡು ವಾಸಮಾಡುತ್ತಿದ್ದರು.

ಅವರಲ್ಲಿ ಹಿರಿಯ ಸಹೋದರನು ಸತ್ತಮೇಲೆ ಇಂದ್ರಪದವಿಯನ್ನು ಪಡೆದನು. ಆಗ ತಾನು ಯಾರೆಂಬುದನ್ನು ತಿಳಿದು, ಏಳೆಂಟು ದಿವಸಗಳಿಗೆ ಒಂದು ಬಾರಿ ಇತರರನ್ನು ಬಂದು ಕಂಡು, ಅವರಿಗೆ ಸಹಾಯ ಮಾಡುತ್ತಿದ್ದನು.

ಒಂದು ದಿನ, ಇಂದ್ರಪದವಿಯನ್ನು ಪಡೆದವನು ಆ ಸಂನ್ಯಾಸಿಗಳಲ್ಲಿ ಹಿರಿಯನಾದವನಿಗೆ ವಂದಿಸಿ, ಒಂದು ಕಡೆ ಕುಳಿತು, "ಸ್ವಾಮಿ, ನಿನಗೇನು ಬೇಕು ?" ಎಂದು ಕೇಳಿದನು.

ಆ ತಪಸ್ವಿಗೆ ಪಾಂಡುರೋಗವಿತ್ತು. ಆದ್ದರಿಂದ ಅವನು "ನನಗೆ ಬೆಂಕಿ ಬೇಕು" ಎಂದನು.

ಇಂದ್ರತ್ವವನ್ನು ಪಡೆದವನು ಅವನಿಗೆ ಒಂದು ಕತ್ತಿಗೊಡಲಿಯನ್ನು ಕೊಟ್ಟನು. ಅದನ್ನು ಕತ್ತಿಯಾಗಿಯೂ ಉಪಯೋಗಿಸಬಹುದು, ಕೊಡಲಿಯಂತೆಯೂ ಉಪಯೋಗಿಸಿಬಹುದು.

ತಾಪಸನು "ಇದನ್ನು ಕೊಂಡುಹೋಗಿ ನನಗೆ ಕಟ್ಟಿಗೆ ತರುವವರು ಯಾರು ?" ಎಂದನು.

ಅದಕ್ಕೆ ಶಕ್ರನು "ಸ್ವಾಮಿ, ನಿನಗೆ ಸೌದೆ ಬೇಕಾದರೆ ಈ ಕೊಡಲಿಯನ್ನು ಕೈಯಿಂದ ಹೊಡೆದು, 'ಸೌದೆ ತಂದು ಬೆಂಕಿಮಾಡು' ಎಂದು ಹೇಳು. ಇದು ಸೌದೆಯನ್ನು ತಂದು ಬೆಂಕಿ ಮಾಡುವುದು" ಎಂದನು.

ಹೀಗೆಂದು ಅವನಿಗೆ ಆ ಕತ್ತಿಗೊಡಲಿಯನ್ನು ಕೊಟ್ಟು, ಎರಡನೆಯವನ ಬಳಿ ಸಾರಿ, "ಸ್ವಾಮಿ, ನಿನಗೇನು ಬೇಕು?" ಎಂದು ಕೇಳಿದನು.

ಆ ಸಂನ್ಯಾಸಿಯ ಪರ್ಣಶಾಲೆಯು ಆನೆಗಳು ಬಂದುಹೋಗುವ ಮಾರ್ಗದಲ್ಲಿತ್ತು. ಅದರಿಂದ ಅವನು "ಆನೆಗಳಿಂದ ನನಗೆ ಬಹಳ ತೊಂದರೆಯಾಗುತ್ತಿದೆ. ಅವುಗಳನ್ನು ಓಡಿಸು" ಎಂದನು.

ಶಕ್ರನು ಅವನಿಗೆ ಒಂದು ಭೇರಿಯನ್ನು ಕೊಟ್ಟು, "ಸ್ವಾಮಿ, ಭೇರಿಯ ಈ ಕಡೆ ಹೊಡೆದರೆ, ನಿನ್ನ ಶತ್ರುಗಳು ಓಡುವರು; ಭೇರಿಯ ಈ ಕಡೆ ಹೊಡೆದರೆ ಅವರು ಮಿತ್ರರಾಗಿ ಚತುರಂಗ ಸೇನೆಯೊಡನೆ ನಿನ್ನನ್ನು ಓಲೈಸುವರು" ಎಂದನು.

ಹೀಗೆಂದು ಅವನಿಗೆ ಆ ಭೇರಿಯನ್ನು ಕೊಟ್ಟು, ಕೊನೆಯವನ ಬಳಿ ಹೋಗಿ, "ಸ್ವಾಮಿ, ನಿನಗೇನು ಬೇಕು?" ಎಂದು ಕೇಳಿದನು.

ಅವನಿಗೆ ಕೂಡ ಪಾಂಡುರೋಗವಿತ್ತು. ಅದರಿಂದ ಅವನು "ನನಗೆ ಮೊಸರು ಬೇಕು" ಎಂದನು.

ಶಕ್ರನು ಅವನಿಗೆ ಒಂದು ಮೊಸರಿನ ಪಾತ್ರೆಯನ್ನು ಕೊಟ್ಟು, "ನಿನಗೆ ಮೊಸರು ಬೇಕಾದರೆ, ಇದನ್ನು ಬಗ್ಗಿಸು; ಮಹಾನದಿಯಾಗಿ ಮಹಾಪ್ರವಾಹವಾಗಿ ಹೊರಟು ನಿನಗೆ ಒಂದು ರಾಜ್ಯವನ್ನು ಹಿಡಿದು ಕೊಡಲು ಕೂಡ ಇದು ಸಮರ್ಥವಾಗುವುದು" ಎಂದು ಹೇಳಿ ಹೊರಟನು.

ಅನಂತರ, ಕತ್ತಿಗೊಡಲಿಯು ಹಿರಿಯ ಸಹೋದರನಿಗೆ ಬೆಂಕಿ ಮಾಡಿಕೊಡುತ್ತಿತ್ತು. ಇನ್ನೊಬ್ಬನು ಭೇರಿಯ ಒಂದು ಕಡೆ ಹೊಡೆದರೆ, ಆನೆ ಓಡಿಹೋಗುತ್ತಿತ್ತು. ಕಡೆಯವನು ಮೊಸರು ತಿನ್ನುತ್ತಿದ್ದನು.

ಆ ಸಮಯದಲ್ಲಿ ಒಂದು ಹಂದಿ ಹಾಳುಬಿದ್ದ ಗ್ರಾಮವೊಂದರಲ್ಲಿ ತಿರುಗುತ್ತಾ ದಿವ್ಯವಾದ ಒಂದು ಮಣಿಯನ್ನು ಕಂಡಿತು. ಅದು ಆ ಮಣಿಯನ್ನು ಬಾಯಲ್ಲಿ ಕಚ್ಚಿ, ಅದರ ಪ್ರಭಾವದಿಂದ ಆಕಾಶದಲ್ಲಿ ಏರಿ, ಸಮುದ್ರದ ನಡುವಿನ ಒಂದು ದ್ವೀಪಕ್ಕೆ ಹೋಗಿ, ಅಲ್ಲಿ ತಾನು ವಾಸಿಸುವೆನೆಂದು ಇಳಿದು, ಒಂದು ಉದುಂಬರವೃಕ್ಷದ ಕೆಳಗೆ ಸೊಗಸಾದ ಸ್ಥಳದಲ್ಲಿ ಮನೆಮಾಡಿಕೊಂಡಿತು. ಒಂದು ದಿನ, ಅದು ಆ ಮಣಿಯನ್ನು ಎದುರಿಗೆ ಇಟ್ಟುಕೊಂಡು ಆ ಮರದ ಮೂಲದಲ್ಲಿ ಮಲಗಿತು.

ಆ ಸಮಯದಲ್ಲಿ, ಕಾಶೀರಾಷ್ಟ್ರದಲ್ಲಿ ವಾಸಿಸುತ್ತಿದ್ದ ಒಬ್ಬ ಮನುಷ್ಯನನ್ನು ಅವನ ತಾಯಿತಂದೆಗಳು 'ಇವನಿಂದ ನಮಗೆ ಉಪಕಾರವಿಲ್ಲ'ವೆಂದು ಮನೆಯಿಂದ ಅಟ್ಟಿದ್ದರು. ಅವನು ಸಮುದ್ರತೀರದ ಗ್ರಾಮವೊಂದಕ್ಕೆ ಹೋಗಿ, ಅಲ್ಲಿ ನಾವಿಕರಿಗೆ ಕೆಲಸಗಾರನಾಗಿ ನಾವೆಯನ್ನು ಏರಿದನು. ನಡುಸಮುದ್ರದಲ್ಲಿ ಹಡಗು ಒಡೆಯಲು, ಅದರ ಹಲಗೆಗಳೊಡನೆ ತೇಲಿ ಆ ಹಂದಿಯಿದ್ದ ದ್ವೀಪವನ್ನು ಸೇರಿದನು. ಅಲ್ಲಿ ಹಣ್ಣುಹಂಪಲುಗಳನ್ನು ಹುಡುಕುತ್ತಾ, ಆ ಹಂದಿ ಮಲಗಿರುವುದನ್ನು ಕಂಡು, ಅದರ ಸಮೀಪಕ್ಕೆ ಬಂದು, ಆ ಮಣಿಯನ್ನು ತೆಗೆದುಕೊಂಡು, ಅದರ ಪ್ರಭಾವದಿಂದ ಆಕಾಶದಲ್ಲಿ ಎದ್ದು, ಉದುಂಬರ ವೃಕ್ಷದ ಮೇಲೆ ಕುಳಿತನು. ಕುಳಿತು, "ಈ ಹಂದಿ ಈ ಮಣಿಯ ಪ್ರಭಾವದಿಂದ ಆಕಾಶದಲ್ಲಿ ಸಂಚರಿಸಿ ಇಲ್ಲಿ ವಾಸಮಾಡುವುದೆಂದು ಕಾಣುತ್ತದೆ. ನಾನು ಮೊದಲು ಇದನ್ನು ಕೊಂದು, ಇದರ ಮಾಂಸವನ್ನು ತಿಂದು, ಆಮೇಲೆ ಹೊರಡುತ್ತೇನೆ" ಎಂದು ಚಿಂತಿಸಿದನು.

ಹೀಗೆ ಚಿಂತಿಸಿ, ಒಂದು ಕಡ್ಡಿಯನ್ನು ಮುರಿದು ಅದರ ತಲೆಯ ಮೇಲೆ ಬೀಳಿಸಿದನು. ಹಂದಿ ಎಚ್ಚೆತ್ತು, ತನ್ನ ಮಣಿಯನ್ನು ಕಾಣದೆ ಅಲ್ಲಿ ಇಲ್ಲಿ ನಡುಗುತ್ತಾ ಓಡಾಡಿತು. ಮರದಲ್ಲಿ ಕುಳಿತವನು ಅದನ್ನು ಕಂಡು ನಕ್ಕನು. ಹಂದಿ ಸುತ್ತಲೂ ನೋಡಿ, ಅವನನ್ನು ಕಂಡು, ಮರಕ್ಕೆ ತಲೆಯನ್ನು ಹೊಡೆದು ಅಲ್ಲಿಯೇ ಸತ್ತಿತು.

ಆಗ ಆ ಪುರುಷನು ಇಳಿದು, ಬೆಂಕಿಮಾಡಿ, ಅದರ ಮಾಂಸವನ್ನು ಬೇಯಿಸಿ ತಿಂದು ಆಕಾಶದಲ್ಲಿ ಏರಿದನು.

ಹಿಮವಂತದ ತಲೆಯ ಮೇಲೆ ಹೋಗುತ್ತಾ ಅಲ್ಲಿಯ ಆಶ್ರಮ ಪ್ರದೇಶವನ್ನು ಕಂಡು, ಹಿರಿಯ ತಪಸ್ವಿಯ ಆಶ್ರಮದಲ್ಲಿ ಇಳಿದನು. ಅಲ್ಲಿ ಎರಡು ಮೂರು ಹಗಲು ವಾಸಮಾಡಿ, ಆ ಸಂನ್ಯಾಸಿಯ ಕೆಲಸ ಕಾರ್ಯಗಳನ್ನು ತಾನು ಮಾಡಿದನು. ಆಗ ಆ ಕತ್ತಿಗೊಡಲಿಯ ಪ್ರಭಾವವನ್ನು ಕಂಡು, ತಾನು ಅದನ್ನು ತೆಗೆದುಕೊಂಡು ಹೋಗಬೇಕೆಂದು ತನ್ನ ಮಣಿಯ ಪ್ರಭಾವವನ್ನು ಅವನಿಗೆ ತೋರಿಸಿ, "ಸ್ವಾಮಿ,

ಇದನ್ನು ತೆಗೆದುಕೊಂಡು ನಿನ್ನ ಕತ್ತಿಗೊಡಲಿಯನ್ನು ಕೊಡು" ಎಂದನು. ತಪಸ್ವಿಯು, ಆಕಾಶದಲ್ಲಿ ಸಂಚರಿಸಲು ಬಯಸಿ, ಆ ಮಣಿಯನ್ನು ತೆಗೆದುಕೊಂಡು ಕತ್ತಿಗೊಡಲಿಯನ್ನು ಕೊಟ್ಟನು. ಅವನು ಅದನ್ನು ಹಿಡಿದು ಕೊಂಚ ದೂರ ಹೋಗಿ, ಆ ಕತ್ತಿಗೊಡಲಿಯನ್ನು ಕೈಯಿಂದ ಹೊಡೆದು, "ಕತ್ತಿಗೊಡಲಿ! ತಪಸ್ವಿಯ ತಲೆ ಒಡೆದು ನನ್ನ ಮಣಿ ತಾ!" ಎಂದನು. ಅದು ಹೋಗಿ ಆ ತಾಪಸನ ತಲೆ ಒಡೆದು ಮಣಿ ತಂದಿತು.

ಅವನು ಆ ಕತ್ತಿಗೊಡಲಿಯನ್ನು ಬಚ್ಚಿಟ್ಟು, ಮಧ್ಯಮ ತಾಪಸನ ಬಳಿಗೆ ಹೋಗಿ, ಕೆಲವು ಹಗಲು ಅಲ್ಲಿ ವಾಸಿಸಿದನು. ಆಗ ಅವನ ಭೇರಿಯ ಪ್ರಭಾವವನ್ನು ಕಂಡು, ತನ್ನ ಮಣಿಯನ್ನು ಕೊಟ್ಟು ಆ ಭೇರಿಯನ್ನು ಕೊಂಡು, ಮೊದಲಿನಂತೆಯೇ ಅವನ ತಲೆಯನ್ನೂ ಒಡೆಸಿದನು.

ಅನಂತರ ಕಡೆಯವನ ಬಳಿಸಾರಿ, ಅವನ ಮೊಸರಿನ ಪಾತ್ರೆಯ ಪ್ರಭಾವವನ್ನು ಕಂಡು, ಮಣಿಗೆ ಬದಲಾಗಿ ಮೊಸರಿನ ಪಾತ್ರೆಯನ್ನು ಕೊಂಡು, ಮೊದಲಿನಂತೆಯೇ ಅವನ ತಲೆಯನ್ನೂ ಒಡೆಸಿದನು.

ಹೀಗೆ ಮಣಿ ಕತ್ತಿಗೊಡಲಿ ಭೇರಿ ಮತ್ತು ಮೊಸರಿನಪಾತ್ರೆಗಳನ್ನು ಕೊಂಡು, ಆಕಾಶದಲ್ಲಿ ಎದ್ದು, ವಾರಾಣಸಿಗೆ ಸ್ವಲ್ಪ ದೂರದಲ್ಲಿ ನಿಂತು, "ನನ್ನೊಡನೆ ಯುದ್ಧಮಾಡು; ಇಲ್ಲವೆ ರಾಜ್ಯ ಕೊಡು" ಎಂದು ವಾರಾಣಸಿಯ ರಾಜನಿಗೆ ಪತ್ರ ಬರೆದು ಕಳುಹಿದನು.

ರಾಜನು ಆ ಸುದ್ದಿಯನ್ನು ಕೇಳಿ, 'ಕಳ್ಳನನ್ನು ಹಿಡಿಯೋಣ' ವೆಂದು ಹೊರಟನು. ಅವನು ಭೇರಿಯ ಒಂದು ಕಡೆ ಬಡಿಯಲು, ರಾಜನ ಚತುರಂಗ ಸೇನೆ ಅವನನ್ನೇ ಓಲೈಸಿತು. ರಾಜನು ಪರಿವಾರ ಹೀನನಾದುದನ್ನು ತಿಳಿದು ಮೊಸರಿನ ಪಾತ್ರೆಯನ್ನು ಬಗ್ಗಿಸಿದನು. ದೊಡ್ಡ ನದಿ ಹರಿಯಿತು. ಅನೇಕ ಜನರು ಮೊಸರಿನಲ್ಲಿ ಮುಳುಗಿ ಹೊರಗೆ ಬರಲಾರದೆಹೋದರು. ಕತ್ತಿಗೊಡಲಿಯನ್ನು ಕೈಯಿಂದ ಹೊಡೆದು, 'ರಾಜನ ತಲೆ ತಾ' ಎಂದನು. ಕತ್ತಿಗೊಡಲಿಯು ಹೋಗಿ

ರಾಜನ ತಲೆಯನ್ನು ತಂದು ಅವನ ಕಾಲ ಬಳಿ ಇಟ್ಟಿತು. ಒಬ್ಬನಿಗಾದರೂ ಆಯುಧವೆತ್ತಲು ಸಾಧ್ಯವಾಗಲಿಲ್ಲ.

ಹೀಗೆ ದೊಡ್ಡ ಸೈನ್ಯವನ್ನು ಸುತ್ತಾ ಕೂಡಿಸಿಕೊಂಡು ಅವನು ನಗರವನ್ನು ಹೊಕ್ಕು ಅಭಿಷೇಕಮಾಡಿಸಿಕೊಂಡು ದಧಿವಾಹನನೆಂಬ ರಾಜನಾಗಿ ಧರ್ಮದಿಂದ ರಾಜ್ಯವಾಳಿದನು.

ಒಂದು ದಿನ ಅವನು ಮಹಾನದಿಯಲ್ಲಿ ಬಲೆಯಿಂದ ಆಟವಾಡುತ್ತಿದ್ದನು. ಆಗ, ದೇವತೆಗಳು ತಿನ್ನಲು ಯೋಗ್ಯವಾದ ಒಂದು ಪಕ್ವವಾದ ಮಾವಿನಹಣ್ಣು ಕರ್ಣಮುಂಡವೆಂಬ ಕೊಳದಿಂದ ಬಂದು ಆ ಬಲೆಗೆ ಸಿಕ್ಕಿತು. ಬಲೆಯನ್ನು ಎತ್ತಿದವರು ಅದನ್ನು ಕಂಡು ರಾಜನಿಗೆ ತೋರಿಸಿದರು. ಅದು ದೊಡ್ಡದಾಗಿತ್ತು, ಮಡಕೆಯ ಗಾತ್ರವಾಗಿತ್ತು, ಗುಂಡಾಗಿತ್ತು, ಚಿನ್ನದ ಬಣ್ಣವಾಗಿತ್ತು. 'ಇದು ಎಂತಹ ಫಲ?' ಎಂದು ರಾಜನು ವನಚಾರಕರನ್ನು ಕೇಳಿದನು. ಅವರು 'ಇದು ಮಾವಿನ ಹಣ್ಣು' ಎನ್ನಲು, ಅದನ್ನು ತಿಂದು, ಅದರ ಬೀಜವನ್ನು ತನ್ನ ಉದ್ಯಾನದಲ್ಲಿ ನೆಡಿಸಿ, ಹಾಲುನೀರು ಚಿಮುಕಿಸುತ್ತಿದ್ದನು.

ಮರ ಹುಟ್ಟಿ, ಮೂರನೆಯ ವರ್ಷದಲ್ಲಿ ಫಲ ಕಂಡಿತು. ಆ ಮಾವಿಗೆ ಮಾಡುವ ಸತ್ಕಾರ ಬಹಳವಾಯಿತು. ಅದಕ್ಕೆ ಹಾಲುನೀರು ಚಿಮುಕಿಸುವರು, ಐದು ವಾಸನೆಯ ಹೂಗಳ ಮಾಲೆಯನ್ನು ಹಾಕುವರು, ಮಾಲೆಯ ಎಳೆಗಳನ್ನು ಅದರ ಸುತ್ತಾ ಇಡುವರು, ಸುವಾಸನೆಯ ತೈಲದ ದೀಪವನ್ನು ಅದರ ಮುಂದೆ ಉರಿಸುವರು. ಅಲ್ಲದೆ, ಅದರ ಸುತ್ತಾ ಒಂದು ಬಟ್ಟೆಯ ತೆರೆಯೂ ಆಯಿತು. ಹಣ್ಣುಗಳು ಮಧುರವಾದುವು, ಚಿನ್ನದ ಬಣ್ಣವಾದುವು.

ದಧಿವಾಹನ ರಾಜನು ಇತರ ರಾಜರಿಗೆ ಮಾವಿನ ಹಣ್ಣು ಕಳುಹಿಸುವಾಗ, ಅವರ ಬೀಜದಿಂದ ಮರ ಹುಟ್ಟುವುದೆಂದು ಹೆದರಿ, ಮೊಳಕೆ ಹುಟ್ಟುವ ಸ್ಥಳವನ್ನು ಮುಳ್ಳಿನಿಂದ ಮುರಿದು ಕಳಿಸುವನು. ಅವರು ಆ ಮಾವನ್ನು ತಿಂದು ಬೀಜ ನೆಟ್ಟರೆ, ಮೊಳಕೆ ಹುಟ್ಟುತ್ತಿರಲಿಲ್ಲ. ಅದಕ್ಕೇನು ಕಾರಣವೆಂದು ಕೇಳಿ, ಅವರು ಅದಕ್ಕೆ ಕಾರಣವನ್ನು ತಿಳಿದರು.

ಆಗ ಒಬ್ಬ ರಾಜನು ತನ್ನ ತೋಟಗಾರನನ್ನು ಬರಹೇಳಿ, "ದಧಿವಾಹನನ ಮಾವಿನ ಹಣ್ಣುಗಳ ರಸವನ್ನು ಹಾಳುಮಾಡಿ ಕಹಿಯಾಗಿ ಮಾಡಲು ಆಗುವುದೆ?" ಎಂದು ಕೇಳಿದನು. ಅವನು "ಆಗುವುದು, ಎನ್ನಲು, "ಹಾಗಾದರೆ ಹೋಗು" ಎಂದು ಅವನಿಗೆ ಒಂದು ಸಾವಿರ ಕೊಟ್ಟು ಕಳುಹಿದನು.

ಆ ತೋಟಗಾರನು ವಾರಾಣಸಿಗೆ ಹೋಗಿ, ಉದ್ಯಾನಪಾಲಕನೊಬ್ಬನು ಬಂದಿರುವನೆಂದು ರಾಜನಿಗೆ ತಿಳಿಸಿದನು. ರಾಜನು ಅವನನ್ನು ಕರೆಸಿದನು. ಅವನು ಒಳಗೆ ಬಂದು ರಾಜನಿಗೆ ವಂದಿಸಲು, "ನೀನು ತೋಟಗಾರನೆ?" ಎಂದು ರಾಜನು ಕೇಳಿದನು. "ಹೌದು, ದೇವ," ಎಂದು ಅವನು ತನ್ನ ಪ್ರಭಾವವನ್ನು ವರ್ಣಿಸಲು, "ಹೋಗು, ನಮ್ಮ ಉದ್ಯಾನಪಾಲಕನ ಬಳಿ ಹೋಗು" ಎಂದು ರಾಜನು ಅವನನ್ನು ಕಳುಹಿದನು. ಅವರು ಇಬ್ಬರೂ ಆ ಉದ್ಯಾನವನ್ನು ನೋಡಿಕೊಳ್ಳುತ್ತಿದ್ದರು.

ಹೊಸದಾಗಿ ಬಂದ ತೋಟಗಾರನು ಅಕಾಲದ ಹೂಗಳನ್ನೂ ಹಣ್ಣುಗಳನ್ನೂ ಗಿಡಮರಗಳಲ್ಲಿ ಬಿಡಿಸಿ, ಉದ್ಯಾನವನ್ನು ರಮಣೀಯವಾಗಿ ಮಾಡಿದನು. ರಾಜನು ಅದರಿಂದ ಪ್ರಸನ್ನನಾಗಿ ಹಳೆಯ ತೋಟಗಾರನನ್ನು ತೆಗೆದು ತೋಟವನ್ನು ಅವನಿಗೇ ಕೊಟ್ಟನು.

ಉದ್ಯಾನವು ತನ್ನ ಕೈಗೆ ಬಂದುದನ್ನು ತಿಳಿದು, ಅವನು ಆ ಮಾವಿನ ಮರದ ಸುತ್ತಾ ಬೇವಿನ ಮರವನ್ನೂ ಕಹಿ ಬಳ್ಳಿಗಳನ್ನೂ ನೆಟ್ಟನು. ಅವು ಕ್ರಮವಾಗಿ ಬೆಳೆದುವು, ಬುಡಗಳಲ್ಲಿ ಬುಡವೂ ಕೊಂಬೆಗಳಲ್ಲಿ ಕೊಂಬೆಯೂ ಕೆಳಗೂ ಮೇಲೂ ಹೆಣೆದುಕೊಂಡವು. ಹೀಗೆ ಅಸಹ್ಯವಾಗಿ ಕಹಿಯಾದವುಗಳ ಜೊತೆಯಿಂದ ಸಿಹಿಯಾದ ಮಾವಿನ ಹಣ್ಣೂ ಬೇವಿನೆಲೆಯ ರಸದಂತೆ ಕಹಿಯಾಯಿತು. ಮಾವಿನ ಹಣ್ಣು ಕಹಿಯಾದುದನ್ನು ತಿಳಿದು, ತೋಟಗಾರನು ಓಡಿಹೋದನು.

ದಧಿವಾಹನನು ಉದ್ಯಾನಕ್ಕೆ ಹೋಗಿ ಮಾವಿನ ಹಣ್ಣನ್ನು ತಿನ್ನಬೇಕೆಂದು ಬಾಯಲ್ಲಿ ಇಟ್ಟು, ಮಾವಿನ ರುಚಿಯು ಬೇವಿನ ರಸದಂತೆ ಅಸಹ್ಯವಾಗಿರಲು, ಸಹಿಸಲಾರದೆ ಕೆಮ್ಮುತ್ತಾ ಉಗುಳಿದನು.

ಆ ಸಮಯದಲ್ಲಿ ಬೋಧಿಸತ್ತ್ವನು ಅವನಿಗೆ ಧರ್ಮ ಅರ್ಥಗಳನ್ನು ಬೋಧಿಸುತ್ತಿದ್ದನು. ರಾಜನು ಆ ಬೋಧಿಸತ್ತ್ವನನ್ನು ಕರೆದು, "ಪಂಡಿತ! ಈ ಮರವನ್ನು ಮೊದಲಿನಂತೆಯೇ ಕಾಪಾಡುವರು; ಏನೂ ಕಡಮೆಯಾಗಿಲ್ಲ. ಆದರೂ ಇದರ ಹಣ್ಣು ಕಹಿಯಾಗಿಬಿಟ್ಟಿದೆ. ಇದಕ್ಕೆ ಕಾರಣವೇನು?" ಎಂದು ಕೇಳುತ್ತಾ "ಹಿಂದೆ ಈ ಮಾವು ವರ್ಣ ಗಂಧ ರಸಗಳಿಂದ ಕೂಡಿತ್ತು. ಅದೇ ಪೂಜೆ ಈಗಲೂ ಲಭಿಸುತ್ತಿದೆ; ಆದರೂ ಮಾವಿನ ಹಣ್ಣೇಕೆ ಕಹಿ?" ಎಂದು ಕೇಳಿದನು.

ಆಗ ಬೋಧಿಸತ್ತ್ವನು ಆ ಕಾರಣವನ್ನು ಕುರಿತು "ದಧಿವಾಹನ, ನಿನ್ನ ಮಾವಿನ ಸುತ್ತಾ ಬೇವಿನ ಪರಿವಾರ. ಬುಡದೊಡನೆ ಬುಡ, ಕೊಂಬೆಯೊಡನೆ ಕೊಂಬೆ ಬೆರೆತಿದೆ. ಅಸಹ್ಯವಾದುದರ ಸಂಗದಿಂದ ನಿನ್ನ ಮಾವಿನ ಹಣ್ಣು ಕಹಿ" ಎಂದು ಹೇಳಿದನು.

ರಾಜನು ಆ ಮಾತು ಕೇಳಿ, ಆ ಬೇವು ಕಹಿಬಳ್ಳಿ ಎಲ್ಲವನ್ನೂ ಕಡಿಸಿ, ಬೇರುಗಳನ್ನು ಮೇಲಕ್ಕೆ ಎತ್ತಿಸಿ, ಕಹಿಯಾದ ಮಣ್ಣನ್ನು ಚೆನ್ನಾಗಿ ತೆಗೆಯಿಸಿ, ಸಿಹಿಯಾದ ಮಣ್ಣು ಹಾಕಿಸಿ, ಹಾಲುನೀರು ಸಕ್ಕರೆ ನೀರು ಸುವಾಸನೆಯ ನೀರುಗಳಿಂದ ಮಾವಿನ ಮರವನ್ನು ಚೆನ್ನಾಗಿ ತಣಿಸಿದನು. ಆ ಸಿಹಿಯಾದ ರಸಗಳ ಜೊತೆಯಿಂದ ಮಾವು ಪುನಃ ಸಿಹಿಯೇ ಆಯಿತು. ರಾಜನು ಮೊದಲಿನ ತೋಟಗಾರನನ್ನೇ ತೋಟದಲ್ಲಿ ನಿಲ್ಲಿಸಿ, ಆಯುಸ್ಸು ಇರುವವರೆಗೆ ಇದ್ದು, ತನ್ನ ಕರ್ಮಕ್ಕೆ ಅನುಸಾರವಾಗಿ ಹೋದನು.

# ಸರ್ಪದಂಷ್ಟ್ರ

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಅವನ ಪುರೋಹಿತನಾಗಿ, ಮೂರು ವೇದಗಳಲ್ಲೂ ಹದಿನೆಂಟು ವಿದ್ಯೆಗಳಲ್ಲೂ ಪಾರಂಗತನಾಗಿದ್ದನು. ಅವನಿಗೆ ಪೃಥ್ವೀಜಯ ಮಂತ್ರವೆಂಬುದು ಗೊತ್ತಿತ್ತು. ಪೃಥ್ವೀಜಯಮಂತ್ರವನ್ನು ಆವರ್ಜನ ಮಂತ್ರವೆಂದೂ ಹೇಳುವರು.

ಆಗ ಒಂದು ದಿವಸ ಬೋಧಿಸತ್ತ್ವನು "ಆ ಮಂತ್ರವನ್ನು ಅಧ್ಯಯನ ಮಾಡುವೆನು" ಎಂದು ಒಂದು ಏಕಾಂತವಾದ ಕಡೆ ಕಲ್ಲಿನ ಪೀಠದ ಮೇಲೆ ಕುಳಿತು, ಅಧ್ಯಯನಮಾಡಿದನು. ಆ ಮಂತ್ರವನ್ನು ವಿಧಿರಹಿತವಾಗಿ ಅನ್ಯರ ಕಿವಿಗೆ ಕೇಳಿಸುವುದಾಗದು; ಅದರಿಂದ ಅವನು ಅದನ್ನು ಅಂತಹ ಕಡೆ ಅಭ್ಯಾಸಮಾಡುತ್ತಿದ್ದನು.

ಆಗ ಅವನು ಅಭ್ಯಾಸಮಾಡುತ್ತಿದ್ದ ಕಾಲದಲ್ಲಿ ಒಂದು ಸೃಗಾಲವು ಒಂದಾನೊಂದು ಬಿಲದಲ್ಲಿ ಮಲಗಿ ಆ ಮಂತ್ರವನ್ನು ಕೇಳಿಯೇ ಅದನ್ನು ಹೃದ್ಗತ ಮಾಡಿಕೊಂಡಿತು. ಅದು ಹಿಂದಿನ ಜನ್ಮದಲ್ಲಿ ಪೃಥ್ವೀಜಯ ಮಂತ್ರವನ್ನು ಬಲ್ಲ ಒಬ್ಬ ಬ್ರಾಹ್ಮಣನಾಗಿತ್ತು.

ಬೋಧಿಸತ್ತ್ವನು ಅಧ್ಯಯನ ಮಾಡಿ ಎದ್ದು, 'ಮಂತ್ರ ನನಗೆ ಹೃದ್ಗತವಾಯಿತು' ಎಂದನು. ಸೃಗಾಲವೂ ಬಿಲದಿಂದ ಹೊರಗೆ ಬಂದು, "ಓಹೋ ಬ್ರಾಹ್ಮಣ, ಈ ಮಂತ್ರ ನಿನಗಿಂತ ನನಗೇ ಹೆಚ್ಚು ಹೃದ್ಗತ ವಾಗಿದೆ" ಎಂದು ಹೇಳುತ್ತಾ ಓಡಿಹೋಯಿತು. ಬೋಧಿಸತ್ತ್ವನು "ಈ ಸೃಗಾಲ ಮಹಾ ಅಕುಶಲ ಮಾಡುವುದು. ಹಿಡಿಯಿರಿ, ಹಿಡಿಯಿರಿ" ಎಂದು ಸ್ವಲ್ಪದೂರ ಅದನ್ನು ಹಿಂಬಾಲಿಸಿದನು. ಸೃಗಾಲವು ಓಡಿಹೋಗಿ ಕಾಡನ್ನು ಹೊಕ್ಕಿತು.

ಅದು ಹೋಗಿ ಒಂದು ಸೃಗಾಲಿಯ ಮೈಯನ್ನು ಸ್ವಲ್ಪ ಕಚ್ಚಿ, "ಏನು, ಸ್ವಾಮಿ?" ಎನ್ನಲು, "ನನ್ನನ್ನು ಬಲ್ಲೆಯೋ? ಇಲ್ಲವೋ?" ಎಂದಿತು. ಅದು "ಬಲ್ಲೆ" ಎಂದು ಉತ್ತರ ಕೊಟ್ಟಿತು. ಆಗ ಅದು ಪೃಥ್ವೀಜಯ ಮಂತ್ರವನ್ನು ತಿರುಗಿಸಿ ಹೇಳಿ, ಅನೇಕ ನೂರು ಸೃಗಾಲಗಳಿಗೆ ಆಜ್ಞೆ

ಮಾಡಿ, ಎಲ್ಲಾ ಆನೆ ಕುದುರೆ ಸಿಂಹ ಹುಲಿ ಹಂದಿ ಜಿಂಕೆ ಮೊದಲಾದ ಚತುಷ್ಪಾದಗಳನ್ನೂ ತನ್ನ ಬಳಿ ಮಾಡಿಕೊಂಡಿತು. ಮಾಡಿಕೊಂಡು, ಸರ್ವದಂಷ್ಟ್ರನೆಂಬ ರಾಜನಾಗಿ, ಒಂದು ಸೃಗಾಲಿಯನ್ನು ಪಟ್ಟದ ರಾಣಿಯಾಗಿ ಮಾಡಿಕೊಂಡಿತು. ಎರಡು ಆನೆಗಳ ಬೆನ್ನ ಮೇಲೆ ಸಿಂಹ ನಿಲ್ಲುವುದು, ಸಿಂಹದ ಬೆನ್ನ ಮೇಲೆ ಸರ್ವದಂಷ್ಟ್ರ ಸೃಗಾಲ ರಾಜನು ತನ್ನ ಪಟ್ಟದ ರಾಣಿಯೊಡನೆ ಕುಳ್ಳಿರುವುದು. ಹೀಗೆ ಅದಕ್ಕೆ ಮಹಾ ಯಶಸ್ಸಾಯಿತು.

ಯಶಸ್ಸಿನ ಮಹತ್ತ್ವದಿಂದ ಅದು ಪ್ರಮತ್ತವಾಯಿತು, ಅದಕ್ಕೆ ಮಾನವುಂಟಾಯಿತು. 'ವಾರಾಣಸಿ ರಾಜ್ಯವನ್ನು ಹಿಡಿಯುವೆನು' ಎಂದು ಸರ್ವಚತುಷ್ಪಾದ ಪರಿವೃತವಾಗಿ ವಾರಾಣಸಿಗೆ ಸ್ವಲ್ಪ ದೂರದವರೆಗೂ ಹೋಯಿತು. ಅದರ ಪರಿಸೆ ಹನ್ನೆರಡು ಯೋಜನವಾಯಿತು. ಅದು ವಾರಾಣಸಿಗೆ ಸ್ವಲ್ಪ ದೂರದಲ್ಲಿ ನಿಂತುಕೊಂಡೇ "ರಾಜ್ಯ ಕೊಡಲಿ, ಇಲ್ಲವೆ ಯುದ್ಧಮಾಡಲಿ" ಎಂದು ರಾಜನಿಗೆ ಹೇಳಿಕಳಿಸಿತು. ವಾರಾಣಸಿ ವಾಸಿಗಳು ಭಯದಿಂದ ಬೆದರಿ ನಗರದ ಬಾಗಿಲುಗಳನ್ನು ಮುಚ್ಚಿ ನಿಂತರು.

ಬೋಧಿಸತ್ತ್ವನು ರಾಜನ ಬಳಿಸೇರಿ, "ಹೆದರಬೇಡ, ಮಹಾರಾಜ. ಸರ್ವದಂಷ್ಟ್ರ ಸೃಗಾಲದೊಡನೆ ಯುದ್ಧಮಾಡುವುದು ನನ್ನ ಭಾರ. ನನ್ನನ್ನು ಬಿಟ್ಟರೆ ಅದರೊಡನೆ ಯುದ್ಧಮಾಡಲು ಸಮರ್ಥನಾದವನು ಬೇರೊಬ್ಬನಿಲ್ಲ" ಎಂದು ಆ ರಾಜನನ್ನೂ ನಗರದವರನ್ನೂ ಸಂತೈಸಿ, "ಸರ್ವದಂಷ್ಟ್ರನು ಏನು ಮಾಡಿ ಈ ರಾಜ್ಯವನ್ನು ಹಿಡಿಯುವುದೆಂದು ಅದನ್ನು ಕೇಳುವೆನು" ಎಂದು ಬಾಗಿಲ ಅಟ್ಟಳಿಗೆಯ ಮೇಲೇರಿ, "ಸರ್ವದಂಷ್ಟ್ರ, ಏನು ಮಾಡಿ ಈ ರಾಜ್ಯವನ್ನು ಹಿಡಿಯುವೆ?" ಎಂದು ಕೇಳಿದನು.

"ಸಿಂಹನಾದವನ್ನು ಕೂಗಿಸಿ, ಮಹಾಜನರನ್ನು ಶಬ್ದದಿಂದ ಬೆದರಿಸಿ, ಹಿಡಿಯುವೆನು."

ಬೋಧಿಸತ್ತ್ವನು 'ಇದಕ್ಕೆ ಇದೆ' ಎಂದು ತಿಳಿದು, ಅಟ್ಟಳಿಗೆಯಿಂದ ಇಳಿದು, "ಹನ್ನೆರಡು ಯೋಜನಗಳ ವಾರಾಣಸಿ ನಗರದಲ್ಲಿ ವಾಸಿಸುವ

ವರೆಲ್ಲರೂ ಉದ್ದಿನ ಹಿಟ್ಟಿನಿಂದ ತಮ್ಮ ಕಿವಿಯ ತೂತುಗಳಿಗೆ ಲೇಪಹಾಕಿಕೊಳ್ಳಲಿ" ಎಂದು ಭೇರಿ ತಿರುಗಿಸಿದನು.

ಮಹಾಜನರು ಭೇರಿಯ ಆಜ್ಞೆಯನ್ನು ಕೇಳಿ, ಬೆಕ್ಕಿನಿಂದ ಮೊದಲುಗೊಂಡು ಸರ್ವಚತುಷ್ಪಾದಗಳ ಹಾಗೂ ತಮ್ಮ ಕಿವಿಯ ತೂತುಗಳಿಗೆ ಉದ್ದಿನ ಹಿಟ್ಟನ್ನು ಲೇಪಿಸಿದರು. ಒಬ್ಬರು ಇನ್ನೊಬ್ಬರ ಶಬ್ದವನ್ನು ಕೇಳಲು ಕೂಡ ಆಗುತ್ತಿರಲಿಲ್ಲ.

ಆಗ ಬೋಧಿಸತ್ತ್ವನು ಪುನಃ ಅಟ್ಟಳಿಗೆಯನ್ನೇರಿ, "ಸರ್ವದಂಷ್ಟ್ರಾ!" ಎಂದನು.

"ಏನು, ಬ್ರಾಹ್ಮಣ?"

"ಏನು ಮಾಡಿ ಈ ರಾಜ್ಯವನ್ನು ಹಿಡಿಯುವೆ?"

"ಸಿಂಹನಾದವನ್ನು ಕೂಗಿಸಿ, ಮನುಷ್ಯರನ್ನು ಬೆದರಿಸಿ, ಜೀವವನ್ನು ಕೊನೆಗಾಣಿಸಿ, ಹಿಡಿಯುವೆನು."

"ಸಿಂಹನಾದವನ್ನು ನೀನು ಕೂಗಿಸಲಾರೆ. ಉತ್ತಮಜಾತಿಯಲ್ಲಿ ಹುಟ್ಟಿ ಕೆಂಪಾದ ಕೈಕಾಲುಗಳಿರುವ ಈ ಕೇಸರಸಿಂಹರಾಜರು ನಿನ್ನಂತಹ ಮುದಿಸೃಗಾಲದ ಆಜ್ಞೆಯನ್ನು ನಡಸುವುದಿಲ್ಲ."

ಸೃಗಾಲವು ಮಾನದಿಂದ ಸ್ತಬ್ಧವಾಗಿ, "ಇತರ ಸಿಂಹಗಳು ಇರಲಿ, ನಾನು ಯಾವುದರ ಬೆನ್ನ ಮೇಲೆ ಕುಳಿತಿರುವೆನೋ ಅದರಿಂದಲೇ ನಾದ ಮಾಡಿಸುವೆನು" ಎಂದಿತು.

"ಹಾಗಾದರೆ, ನಿನ್ನ ಕೈಲಾದರೆ, ಕೂಗಿಸು."

ಅದು ತಾನು ಕುಳಿತಿದ್ದ ಸಿಂಹವನ್ನು ಕುರಿತು "ಕೂಗು" ಎಂದು ಕಾಲಿನಿಂದ ಸನ್ನೆಮಾಡಿತು.

ಸಿಂಹವು ಆನೆಯ ಕುಂಭದ ಮೇಲೆ ಮುಖವನ್ನು ಒರಗಿಸಿ, ಮೂರುಬಾರಿ ದನಿಯುಡುಗಿಸದೆ ಸಿಂಹನಾದ ಮಾಡಿತು. ಆನೆಗಳು ಬಿರುಬೆದರಿ ಸೃಗಾಲವನ್ನು ಕಾಲಬಳಿ ಬೀಳಿಸಿ, ಕಾಲಿನಿಂದ ಅದರ ತಲೆಯನ್ನು ತುಳಿದು ಚೂರ್ಣ ವಿಚೂರ್ಣಮಾಡಿದುವು. ಸರ್ವದಂಷ್ಟ್ರನ ಜೀವ ಅಲ್ಲಿಯೇ ಕೊನೆಗಂಡಿತು.

ಆನೆಗಳು ಕೂಡ ಸಿಂಹನಾದವನ್ನು ಕೇಳಿ ಮರಣಭಯದಿಂದ ಹೆದರಿ ಒಂದನ್ನೊಂದು ತಿವಿಯುತ್ತಾ ಅಲ್ಲಿಯೇ ಸತ್ತವು. ಸಿಂಹಗಳನ್ನು ಬಿಟ್ಟು, ಉಳಿದ ಜಿಂಕೆ ಹಂದಿಗಳು ಮೊದಲಾಗಿ ಮೊಲ ಬೆಕ್ಕುಗಳ ವರೆಗಿನ ಸರ್ವಚತುಷ್ಪಾದಗಳೂ ಅಲ್ಲಿಯೇ ಜೀವಬಿಟ್ಟವು. ಸಿಂಹಗಳು ಓಡಿಹೋಗಿ ಕಾಡನ್ನು ಹೊಕ್ಕವು. ಮಾಂಸರಾಶಿ ಹನ್ನೆರಡು ಯೋಜನದಷ್ಟಾಯಿತು.

ಬೋಧಿಸತ್ತ್ವನು ಅಟ್ಟಳಿಗೆಯಿಂದ ಇಳಿದು, ನಗರದ್ವಾರಗಳನ್ನು ತೆರೆಸಿ, "ಎಲ್ಲರೂ ತಮ್ಮ ಕಿವಿಗಳಿಂದ ಉದ್ದಿನ ಹಿಟ್ಟನ್ನು ಹೊರತೆಗೆಯಲಿ. ಮಾಂಸ ಬೇಕಾದವರು ಮಾಂಸ ಕೊಳ್ಳಲಿ" ಎಂದು ನಗರದಲ್ಲಿ ಭೇರಿಯನ್ನು ತಿರುಗಿಸಿದನು. ಜನರು ಹಸಿಮಾಂಸವನ್ನು ತಿಂದು, ಉಳಿದುದನ್ನು ಒಣಗಿಸಿ ಇಟ್ಟುಕೊಂಡರು. ಮಾಂಸ ಒಣಗಿಸುವುದು ಆ ಕಾಲದಲ್ಲೇ ಹುಟ್ಟಿತೆಂದು ಹೇಳುವರು.

# ವರ್ಧಕಿಸೂಕರ

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕಾಡಿನಲ್ಲಿ ವೃಕ್ಷದೇವತೆಯಾಗಿ ಜನಿಸಿದನು. ಆಗ ವಾರಾಣಸಿಯ ಬಳಿಯ ಗ್ರಾಮದಲ್ಲಿ ಬಡಗಿಗಳು ವಾಸಿಸುತ್ತಿದ್ದರು.

ಒಬ್ಬ ಬಡಗಿ ಒಂದು ದೋಣ್ಣೆಗಾಗಿ ಕಾಡಿಗೆ ಹೋಗಿ, ಹಳ್ಳದಲ್ಲಿ ಬಿದ್ದಿದ್ದ ಹಂದಿಯಮರಿಯನ್ನು ಕಂಡು, ಮನೆಗೆ ತಂದು ಪಾಲಿಸಿದನು. ಅದು ಬೆಳೆದು ಮಹಾಶರೀರವನ್ನೂ ವಕ್ರದಂಷ್ಟ್ರವನ್ನೂ ಪಡೆಯಿತು. ಅದು ಒಳ್ಳೆಯ ನಡತೆಯನ್ನು ಕಲಿಯಿತು. ಬಡಗಿಯಿಂದ ಪುಷ್ಟಿ ಹೊಂದಿ, ಅದು 'ಬಡಗಿಯ ಹಂದಿ'ಯೆಂದೇ ಎಲ್ಲರಿಗೂ ಪರಿಚಿತ ವಾಯಿತು. ಬಡಗಿ ಮರವನ್ನು ಕೆತ್ತುವಾಗ ಅದು ಮೂತಿಯಿಂದ ಮರ ವನ್ನು ತಿರುಗಿಸುವುದು, ಬಾಚಿಕೊಡಲಿಗಳನ್ನೂ ಉಳಿ ಸುತ್ತಿಗೆಗಳನ್ನೂ ಬಾಯಲ್ಲಿ ಕಚ್ಚಿತರುವುದು, ಅಳೆಯುವ ಕಪ್ಪುದಾರದ ಕೊನೆಯನ್ನು ಹಿಡಿಯುವುದು.

ಆಗ ಆ ಬಡಗಿ "ಯಾರಾದರೂ ಇದನ್ನು ತಿಂದಾರು" ಎಂಬ ಭಯ ದಿಂದ ಅದನ್ನು ಕರೆದುಕೊಂಡು ಹೋಗಿ ಕಾಡಿನಲ್ಲಿ ಬಿಟ್ಟುಬಿಟ್ಟನು.

ಅದಾದರೋ ಕಾಡನ್ನು ಹೊಕ್ಕು, ಕ್ಷೇಮವಾಗಿ ವಾಸಮಾಡಬಹು ದಾದ ಒಳ್ಳೆಯ ಸ್ಥಾನವನ್ನು ನೋಡುತ್ತಾ ಒಂದು ಪರ್ವತದೊಳಗಿನ ಮಹತ್ತಾದ ಗುಹೆಯನ್ನು ಕಂಡಿತು. ಆ ವಾಸಸ್ಥಾನದಲ್ಲಿ ಕಂದಮೂಲ ಫಲಗಳು ಹೇರಳವಾಗಿದ್ದುವು.

ನೂರಾರು ಹಂದಿಗಳು ಅದನ್ನು ಕಂಡು, ಅದರ ಬಳಿಗೆ ಬಂದವು. ಅದು ಅವುಗಳನ್ನು ಕುರಿತು "ನಾನು ನಿಮ್ಮನ್ನೇ ನೋಡಿಕೊಂಡು ತಿರುಗು ತ್ತಿದ್ದೇನೆ. ನಾನು ನಿಮ್ಮನ್ನು ಕಂಡೆ. ಈ ಎಡೆ ರಮಣೀಯವಾಗಿದೆ. ಆದ್ದರಿಂದ ನಾನು ಇಲ್ಲೇ ವಾಸಮಾಡುವೆನು" ಎಂದಿತು.

"ಈ ಸ್ಥಾನ ರಮಣೀಯವೆಂಬುದೇನೋ ಸತ್ಯ. ಆದರೆ ಇಲ್ಲಿ ಅಪಾಯವಿದೆ."

"ನಾನು ನಿಮ್ಮನ್ನು ಕಂಡು ಹಾಗೇ ತಿಳಿದೆ. 'ಇಂತಹ ಆಹಾರ ತುಂಬಿದ ಈ ಎಡೆಯಲ್ಲಿ ವಾಸಿಸುವ ಇವರ ಶರೀರದಲ್ಲಿ ಮಾಂಸರಕ್ತವಿಲ್ಲ. ಇಲ್ಲೇನು ಭಯವಿದ್ದೀತು?' ಎಂದು ನನಗೆನ್ನಿಸಿತು."

"ಒಂದು ಹುಲಿ ಬೆಳಗ್ಗೆಯೇ ಬಂದು ಕಂಡುಕಂಡದ್ದನ್ನು ಹಿಡಿದು ಕೊಂಡು ಹೋಗುವುದು."

"ಅದು ಯಾವಾಗಲೂ ಹಿಡಿಯುವುದೋ? ಅಥವಾ ಆಗಾಗ ಮಾತ್ರವೋ?"

"ಯಾವಾಗಲೂ ಹಿಡಿಯುವುದು."

"ಹಾಗಾದರೆ, ಹುಲಿಗಳು ಎಷ್ಟಿವೆ?"

"ಒಂದೇ ಒಂದು."

"ಒಂದಕ್ಕೆ ನೀವು ಇಷ್ಟು ಮಂದಿ ಸಾಲದೆ?"

"ಇಲ್ಲ, ಸಾಲೆವು."

"ನಾನು ಅದನ್ನು ಹಿಡಿಯುವೆನು. ನೀವು ನನ್ನ ಮಾತಿನಂತೆ ಮಾತ್ರ ಮಾಡಿರಿ. ಆ ಹುಲಿ ಎಲ್ಲಿ ವಾಸಿಸುತ್ತದೆ?"

"ಅದೋ, ಆ ಪರ್ವತದಲ್ಲಿ."

ಅದು ರಾತ್ರಿಯಲ್ಲೇ ಹಂದಿಗಳನ್ನು ನಡೆದಾಡಿಸಿ, ಯುದ್ಧವನ್ನು ವಿಚಾರಮಾಡುತ್ತಾ, 'ಯುದ್ಧವೆಂಬುದು ಪದ್ಮವ್ಯೂಹ, ಚಕ್ರವ್ಯೂಹ, ಶಕಟವ್ಯೂಹಗಳೆಂದು ಮೂರುವಿಧ' ಎಂದು ಹೇಳುತ್ತಾ ಪದ್ಮವ್ಯೂಹ ದಲ್ಲಿ ಅವುಗಳನ್ನು ನಡೆಸಿತು. ಅದಕ್ಕೆ ಯುದ್ಧಭೂಮಿಯ ಅನುಕೂಲ ವಾದ ಎಡೆ ಗೊತ್ತಿತ್ತು. ಅದರಿಂದ 'ಈ ಎಡೆಯಲ್ಲಿ ಯುದ್ಧ ನಡಸುವುದು ಸರಿ' ಎಂದು ಎಳೆಹಂದಿಮರಿಗಳನ್ನೂ ತಾಯಿಗಳನ್ನೂ ಮಧ್ಯಸ್ಥಾನದಲ್ಲಿ ನಿಲ್ಲಿಸಿತು. ಅವುಗಳ ಸುತ್ತಾ ಬಂಜೆಹಂದಿಗಳನ್ನೂ, ಅವುಗಳ ಸುತ್ತಾ ಮರಿಹಂದಿಗಳನ್ನೂ, ಅವುಗಳ ಸುತ್ತಾ ಯುವಕಹಂದಿಗಳನ್ನೂ, ಅವುಗಳ ಸುತ್ತಾ ಉದ್ದಕೋರೆಯ ಹಂದಿಗಳನ್ನೂ, ಅವುಗಳ ಸುತ್ತಾ ಯುದ್ಧ ಸಮರ್ಥವಾಗಿ ಬಲಬಲವಾದ ಸೂಕರಗಳನ್ನೂ ಹತ್ತುಹತ್ತರಂತೆ, ಇಪ್ಪತ್ತುಇಪ್ಪತ್ತರಂತೆ ಸಾಲುಸಾಲಾಗಿ ನಿಲ್ಲಿಸಿತು. ತಾನು ನಿಲ್ಲುವ ಸ್ಥಾನದ ಮುಂದುಗಡೆ ಒಂದು ಗುಂಡಾದ ಹಳ್ಳ ತೋಡಿಸಿತು; ಹಿಂದು

ಗಡೆ ಮೊರದಂತೆ ಕ್ರಮಕ್ರಮವಾಗಿ ಇಳಿಜಾರಾದ ಹಳ್ಳ ತೋಡಿಸಿತು. ಜೊತೆಗೆ ಅರುವತ್ತು ಎಪ್ಪತ್ತು ಸೂಕರಯೋಧರನ್ನು ಕರೆದುಕೊಂಡು ಆಯಾ ಎಡೆಗಳಲ್ಲಿ "ಹೆದರಬೇಡಿ"ರೆಂದು ಹೇಳುತ್ತಾ ತಿರುಗುತ್ತಿರುವಾಗಲೇ ಅರುಣನು ಮೇಲೆದ್ದನು.

ಹುಲಿ ಎದ್ದು, ವೇಳೆಯಾಯಿತೆಂದು ತಿಳಿದು, ಹೋಗಿ, ಹಂದಿಗಳ ಎದುರಿನಲ್ಲಿದ್ದ ಪರ್ವತತಲದಲ್ಲಿ ನಿಂತು, ಕಣ್ಣುಗಳನ್ನು ಅರಳಿಸಿ ಅವುಗಳನ್ನು ನೋಡಿತು. ಬಡಗಿಯ ಹಂದಿ "ನೀವೂ ಅದನ್ನು ಪ್ರತಿಯಾಗಿ ನೋಡಿರಿ" ಎಂದು ಹಂದಿಗಳಿಗೆ ಸನ್ನೆ ಮಾಡಿತು. ಅವು ಪ್ರತಿಯಾಗಿ ದಿಟ್ಟಿಸಿದವು. ಹುಲಿ ಬಾಯಿ ತೆಗೆದು ಉಸಿರು ಒಳಗೆಳೆದುಕೊಂಡಿತು. ಹಂದಿಗಳೂ ಹಾಗೆಯೇ ಮಾಡಿದುವು. ಹುಲಿ ಮೂತ್ರಮಾಡಿತು. ಹಂದಿಗಳೂ ಮಾಡಿದುವು. ಹೀಗೆ, ಅದು ಏನೇನು ಮಾಡಿದರೂ ಅವು ಅದದನ್ನೇ ಪ್ರತಿಮಾಡಿದುವು.

ಹುಲಿ, "ಹಿಂದೆ, ನನ್ನನ್ನು ಕಂಡಾಗ ಹಂದಿಗಳಿಗೆ ಓಡಿಹೋಗಲೂ ಆಗುತ್ತಿರಲಿಲ್ಲ. ಈಗ ಓಡಿಹೋಗದೆ ನನಗೆ ಪ್ರತಿಶತ್ರುಗಳಾಗಿ ನಾನು ಮಾಡಿದುದನ್ನೇ ಪ್ರತಿಮಾಡುತ್ತವೆ. ಒಂದು ಹಂದಿ ಈ ಭೂಮಿಯ ಮುಂದುಗಡೆ ನಿಂತು ಇವುಗಳನ್ನು ನಡಸುತ್ತಿದೆ. ಅದನ್ನು ಇಂದು ನಾನು ಜಯಿಸುವಂತೆ ಕಾಣೆ" ಎಂದು ಹಿಂದಿರುಗಿ ತನ್ನ ವಾಸಸ್ಥಾನಕ್ಕೆ ಹೋಯಿತು.

ಆ ಹುಲಿ ಹಿಡಿದು ತಂದ ಮಾಂಸವನ್ನು ತಿನ್ನುತ್ತಿದ್ದ ಒಬ್ಬ ಕಳ್ಳ ಸನ್ಯಾಸಿಯಿದ್ದನು. ಅವನು ಅದು ಬರಿಗೈಯಲ್ಲೇ ಬಂದುದನ್ನು ಕಂಡು, "ಹಿಂದೆ ನೀನು ಈ ಪ್ರದೇಶದಲ್ಲಿ ಹಂದಿಗಳನ್ನು ಸೋಲಿಸಿ ಒಳ್ಳೆಒಳ್ಳೆಯವನ್ನು ಕೊಲ್ಲುತ್ತಿದ್ದೆ. ಇಂದು ನೀನು ಬರಿಗೈಯಲ್ಲಿ ಬಂದು ಖಿನ್ನನಾಗಿರುವೆ. ಈ ದಿನ ನಿನ್ನ ಶಕ್ತಿ ಕಂಡುಬರುವುದಿಲ್ಲ" ಎಂದನು.

ಅದಕ್ಕೆ ಹುಲಿ "ಹಿಂದೆ ಅವು ಭಯದಿಂದ ದಿಕ್ಕುದಿಕ್ಕಿಗೆ ಓಡಿ ತಮ್ಮ ತಮ್ಮ ಬಿಲಕ್ಕೆ ಸೇರಿಕೊಳ್ಳುತ್ತಿದ್ದುವು. ಇಂದು ಅವು ಒಟ್ಟಾಗಿ ಸೇರಿ ಡುರುಕುಕೂಗುತ್ತವೆ. ಅವು ನಿಂತಿರುವುದನ್ನು ನೋಡಿದರೆ ನಾನು ಅವುಗಳನ್ನು ಎದುರಿಸಲಾರೆ" ಎಂದಿತು.

ಆಗ ಆ ಕಳ್ಳಸನ್ಯಾಸಿ ಅದಕ್ಕೆ ಉತ್ಸಾಹವುಂಟುಮಾಡುತ್ತಾ "ಹೆದರಬೇಡ, ಹೋಗು. ನೀನು ಗರ್ಜಿಸಿ ಹಾರಿದಾಗ ಎಲ್ಲವೂ ಭಯಗೊಂಡು ಚೆದರಿ ಓಡುವುವು" ಎಂದನು.

ಹುಲಿ ಅವನಿಂದ ಉತ್ಸಾಹಗೊಂಡು ಶೂರನಾಗಿ, ಪುನಃ ಹೋಗಿ ಪರ್ವತತಲದಲ್ಲಿ ನಿಂತಿತು. ಬಡಗಿಯ ಹಂದಿ ಎರಡೂ ಹಳ್ಳಗಳ ನಡುವೆ ನಿಂತಿತು.

ಹಂದಿಗಳು "ಸ್ವಾಮಿ, ದೊಡ್ಡ ಕಳ್ಳ ಪುನಃ ಬಂತು" ಎಂದವು.

"ಹೆದರಬೇಡಿ. ಈಗ ಅದನ್ನು ಹಿಡಿಯುವೆನು".

ಹುಲಿ ಗರ್ಜಿಸಿ ವರ್ಧಕಿಸೂಕರದ ಮೇಲೆ ಬಿತ್ತು. ಸೂಕರವು ಹುಲಿ ತನ್ನ ಮೇಲೆ ಬೀಳುವಾಗ ಸರಕ್ಕನೆ ತಿರುಗಿ, ವೇಗದಿಂದ ಎದುರಿಗೆ ಅಗೆದ ಹಳ್ಳದಲ್ಲಿ ಬಿದ್ದಿತು. ಹುಲಿ ವೇಗವನ್ನು ತಡೆಯಲಾರದೆ ಉರುಳುರುಳಿಕೊಂಡು ಹೋಗಿ, ಮೊರದಂತೆ ಅಗೆದಿದ್ದ ಹಳ್ಳದಲ್ಲಿ ಅತಿ ಇಕ್ಕಟ್ಟಾದ ಕಡೆ ಬಿದ್ದು, ರಾಶಿಹಾಕಿದಂತಾಯಿತು. ಹಂದಿಯು ಹಳ್ಳದಿಂದ ಮೇಲೆದ್ದು, ಮಿಂಚಿನ ವೇಗದಿಂದ ಹೋಗಿ, ಹುಲಿಯ ಒಳತೊಡೆಯನ್ನು ಕೋರೆಯಿಂದ ಹೊಡೆದು, ಕರುಳನ್ನು ಬಗೆದು, ಅದರ ಮಧುರವಾದ ಮಾಂಸವನ್ನು ಕೋರೆಗೆ ಸುತ್ತಿಕೊಂಡು, ಹುಲಿಯ ತಲೆಯನ್ನು ಸೀಳಿ, "ಹಿಡಿದುಕೊಳ್ಳಿ ನಿಮ್ಮ ಶತ್ರುವನ್ನು" ಎಂದು ಅದನ್ನು ಹಳ್ಳದಿಂದ ಹೊರಕ್ಕೆ ಎತ್ತಿ ಎಸೆಯಿತು.

ಮೊದಲು ಬಂದವಕ್ಕೆ ಹುಲಿಯಮಾಂಸ ಸಿಕ್ಕಿತು, ಅನಂತರ ಬಂದವು "ಹುಲಿಯಮಾಂಸ ಹೇಗಿರುತ್ತದೆ?" ಎಂದು ಅವುಗಳ ಮುಖವನ್ನು ಮೂಸುತ್ತಾ ತಿರುಗಾಡಿದವು.

ಆದರೂ ಹಂದಿಗಳಿಗೆ ತೃಪ್ತಿಯಾಗಲಿಲ್ಲ. ವರ್ಧಕಿಸೂಕರವು ಅವುಗಳ ಇಂಗಿತವನ್ನು ಕಂಡು, "ನಿಮಗೇಕೆ ತೃಪ್ತಿಯಾಗಿಲ್ಲ?" ಎಂದಿತು.

"ಸ್ವಾಮಿ, ಈ ಹುಲಿಯನ್ನು ಹೊಡೆದುದರಿಂದ ಏನು? ಇತರ ಹತ್ತು ಹುಲಿಗಳನ್ನು ಕರೆತರುವ ಸಾಮರ್ಥ್ಯವಿರುವ ಕಳ್ಳಸನ್ಯಾಸಿಯಿರುವನಲ್ಲ?"

"ಯಾರವನು?"

"ಒಬ್ಬ ಕೆಟ್ಟನಡತೆಯ ತಾಪಸ".

"ಹುಲಿಯನ್ನಾದರೂ ನಾನು ಹೊಡೆದೆ. ನನ್ನನ್ನು ಅವನೇನು ಮಾಡಿಯಾನು? ಈಗ ಅವನನ್ನು ಹಿಡಿಯೋಣ" ಎಂದು ಹಂದಿಗಳ ಗುಂಪಿನೊಡನೆ ವರ್ಧಕಿಸೂಕರ ಹೋಯಿತು.

ಕಳ್ಳಸಂನ್ಯಾಸಿ ಹುಲಿ ಎಷ್ಟು ಹೊತ್ತಾದರೂ ಬರದಿರಲು, "ಏನು, ಹಂದಿಗಳು ಹುಲಿಯನ್ನು ಹಿಡದವೋ?" ಎಂದು ಅಲ್ಲಿಂದಿಲ್ಲಿಗೆ ತಿರುಗುತ್ತಾ, ಹಂದಿಗಳು ಬರುವುದನ್ನು ಕಂಡು, ತನ್ನ ಸಾಮಾನುಗಳನ್ನು ತೆಗೆದುಕೊಂಡು ಓಡಿದನು. ಅವು ಹಿಂಬಾಲಿಸಲು, ಸಾಮಾನುಗಳನ್ನು ಬಿಸುಟು, ಬೇಗನೆ ಉದುಂಬರ ವೃಕ್ಷವನ್ನು ಹತ್ತಿದನು.

ಹಂದಿಗಳು "ನಷ್ಟವಾಯಿತು, ಸ್ವಾಮಿ. ತಪಸ್ವಿ ಓಡಿ ಮರವನ್ನು ಏರಿದನು" ಎಂದವು.

"ಎಂತಹ ವೃಕ್ಷ?"

"ಉದುಂಬರ ವೃಕ್ಷ".

"ಹೆಣ್ಣು ಹಂದಿಗಳು ನೀರು ತರಲಿ. ಹಂದಿಮರಿಗಳು ಅಗೆಯಲಿ. ಉದ್ದಕೋರೆಯ ಹಂದಿಗಳು ಬುಡವನ್ನು ಕತ್ತರಿಸಲಿ. ಉಳಿದವು ಸುತ್ತಲೂ ನಿಂತು ಕಾವಲಿರಲಿ" ಎಂದು ವರ್ಧಕಿಸೂಕರವು ನಿಯಮಿಸಿ, ಅವು ಹಾಗೆಯೇ ಮಾಡಲು, ತಾನು ಉದುಂಬರದ ನೇರವಾಗಿ ಬೆಳೆದ ದಪ್ಪ ಬುಡವನ್ನು ಕೊಡಲಿಯಿಂದ ಕಡಿದಂತೆ ಒಂದೇ ಏಟಿಗೆ ಹೊಡೆದು ಕೆಡವಿತು.

ಸುತ್ತಲೂ ನಿಂತಿದ್ದ ಹಂದಿಗಳು ಕಳ್ಳತಾಪಸನನ್ನು ನೆಲದ ಮೇಲೆ ಕೆಡವಿಕೊಂಡು ಖಂಡಾಖಂಡ ಮಾಡಿ, ಮೂಳೆಯವರೆಗೂ ತಿಂದವು. ವರ್ಧಕಿಸೂಕರವನ್ನು ಉದುಂಬರದ ಮೋಟಿನ ಮೇಲೆ ಕುಳ್ಳಿರಿಸಿ, ಕಳ್ಳ ಸನ್ಯಾಸಿ ಉಪಯೋಗಿಸುತ್ತಿದ್ದ ಶಂಖದಲ್ಲಿ ನೀರು ತಂದು ಅಭಿಷೇಕ ಮಾಡಿ, ರಾಜನನ್ನಾಗಿ ಮಾಡಿದುವು. ಒಂದು ತರುಣಸೂಕರಿಗೆ ಅಭಿಷೇಕ ಮಾಡಿ ಅದರ ಪಟ್ಟದ ರಾಣಿಯಾಗಿಸಿದುವು. ಅಂದಿನಿಂದ ಮೊದಲಾಗಿ

ಇದುವರೆಗೂ ರಾಜರನ್ನು ಉದುಂಬರದ ಭದ್ರಪೀಠದಲ್ಲಿ ಕುಳ್ಳಿರಿಸಿ ನೂರು ಶಂಖಗಳಿಂದ ಅಭಿಷೇಕವಮಾಡುವರು.

ಆ ಕಾಡಿನಲ್ಲಿ ಆಳುತ್ತಿದ್ದ ದೇವತೆ ಆ ಆಶ್ಚರ್ಯವನ್ನು ಕಂಡು, ಒಂದು ಪೊಟರೆಯಲ್ಲಿ ಹಂದಿಗಳಿಗೆ ಎದುರಾಗಿ ನಿಂತು, "ಒಟ್ಟಾಗಿ ಸೇರಿದ ಸೂಕರಸಂಘಕ್ಕೆ ನಮಸ್ಕಾರ. ಅದ್ಭುತವಾದ ಸಖ್ಯವನ್ನು ನಾನು ಇಂದು ಕಂಡೆ. ಕೋರೆಯುಳ್ಳ ಮೃಗಗಳು ಹುಲಿಯನ್ನು ಜಯಿಸಿದವು. ದವಡೆಯ ಬಲದ ಹಂದಿಗಳು ಒಗ್ಗಟ್ಟಾದುದರಿಂದ ಮರಣಭಯವನ್ನು ತಪ್ಪಿಸಿಕೊಂಡವು" ಎಂದಿತು.

# ಆಭ್ಯಂತರ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕಾಶಿಗ್ರಾಮದ ಒಂದು ಬ್ರಾಹ್ಮಣ ಕುಲದಲ್ಲಿ ಜನ್ಮ ತಾಳಿದನು. ವಯಸ್ಸು ಬಂದ ಮೇಲೆ ತಕ್ಷಶಿಲೆಯಲ್ಲಿ ವಿದ್ಯೆಗಳನ್ನು ಕಲಿತು, ಮನೆ ಮಾಡಿಕೊಂಡಿದ್ದು, ತಾಯಿತಂದೆ ಸತ್ತ ಮೇಲೆ ಮನೆ ಬಿಟ್ಟುಹೋಗಿ, ಋಷಿಯಾಗಿ, ಹಿಮವಂತ ಪ್ರದೇಶದಲ್ಲಿ ಅಭಿಜ್ಞೆಗಳನ್ನೂ ಸಮಾಪತ್ತಿಗಳನ್ನೂ ಉಂಟುಮಾಡಿಕೊಂಡು, ಋಷಿಗಣ ಪರಿವೃತನಾಗಿ, ಗಣಕ್ಕೆ ಗುರುವಾಗಿ, ದೀರ್ಘಕಾಲ ಕಳೆದ ಬಳಿಕ ಉಪ್ಪು ಹುಳಿಗಳ ರುಚಿನೋಡುವುದಕ್ಕಾಗಿ ಪರ್ವತಪಾದದಿಂದ ಇಳಿದು ಬಂದು, ಸಂಚಾರ ಮಾಡುತ್ತಾ ವಾರಾಣಸಿಯನ್ನು ಸಮೀಪಿಸಿ, ಉದ್ಯಾನದಲ್ಲಿ ವಾಸ ಕಲ್ಪಿಸಿಕೊಂಡನು.

ಆಗ ಅವನ ಋಷಿಗಣದ ಶೀಲದ ತೇಜಸ್ಸಿನಿಂದ ಶಕ್ರನ ಭವನ ಕಂಪಿಸಿತು. ಶಕ್ರನು ಧ್ಯಾನಿಸುತ್ತಾ ಅದರ ಕಾರಣವನ್ನು ತಿಳಿದು, "ಈ ತಾಪಸರ ಆವಾಸವನ್ನು ಕುರಿತು ಒಂದು ಪ್ರಯೋಗ ನಡಸುವೆನು. ಇವರು ನಿಲ್ಲಲು ಎಡೆಯಿಲ್ಲವೆ ಉಪದ್ರವಗೊಂಡು ಸಂಚರಿಸುವರು. ಇವರಿಗೆ ಆಗ ಚಿತ್ತದ ಏಕಾಗ್ರತೆ ದೊರಕದು. ಹೀಗೆ ನನಗೆ ಹಿತ ವಾಗುವುದು" ಎಂದು ಚಿಂತಿಸಿ, "ಇದಕ್ಕೇನು ಉಪಾಯ?" ಎಂದು ವಿಮರ್ಶೆಮಾಡುತ್ತಾ ಒಂದು ಉಪಾಯವನ್ನು ಕಂಡನು.

"ಮಧ್ಯಮಯಾಮ ಸಮಯದ ನಡುವೆ ರಾಜನ ಪಟ್ಟದ ರಾಣಿಯ ಅಂತಃಪುರವನ್ನು ಪ್ರವೇಶಿಸಿ, ಆಕಾಶದಲ್ಲಿ ನಿಂತು, 'ಭದ್ರೆ, ನೀನು ಪಕ್ವವಾದ ಆಭ್ಯಂತರ ಆಮ್ರವನ್ನು ತಿಂದರೆ ಮಗನನ್ನು ಪಡೆಯುವೆ, ಅವನು ಚಕ್ರವರ್ತಿ ರಾಜನಾಗುವನು' ಎಂದು ಹೇಳುವೆನು. ರಾಜನು ದೇವಿಯು ಹೇಳುವುದನ್ನು ಕೇಳಿ, ಪಕ್ವವಾದ ಮಾವಿಗಾಗಿ ಉದ್ಯಾನಕ್ಕೆ ಕಳಿಸುವನು. ಆಗ ನಾನು ಮಾವುಗಳನ್ನು ಅಂತರ್ಧಾನ ಮಾಡುವೆನು. ಉದ್ಯಾನದಲ್ಲಿ ಆಮ್ರಗಳು ಇಲ್ಲವಾದ್ದನ್ನು ರಾಜನಿಗೆ ತಿಳಿಸುವರು. 'ಅವುಗಳನ್ನು ಯಾರು ತಿನ್ನುವರು?' ಎಂದರೆ, 'ತಾಪಸರು ತಿನ್ನುವರು' ಎಂದು ಹೇಳುವರು. ಅದನ್ನು ಕೇಳಿ ರಾಜನು ತಾಪಸರನ್ನು

ಹೊಡೆದು ಅಟ್ಟಿಸುವನು. ಹೀಗೆ ಅವರಿಗೆ ಉಪದ್ರವವಾಗುವುದು" ಎಂದು ಅವನು ಮಧ್ಯಮಯಾಮ ಸಮಯದ ನಡುವೆ ಅಂತಃಪುರವನ್ನು ಪ್ರವೇಶಿಸಿ, ಆಕಾಶದಲ್ಲಿ ನಿಂತು, ತನ್ನ ದೇವರಾಜಭಾವವನ್ನು ತಿಳಿಯ ಪಡಿಸಿ ಅವಳೊಡನೆ ಮಾತನಾಡುತ್ತಾ "ಆಭ್ಯಂತರವೆಂಬ ಮರವುಂಟು. ಅದರ ದಿವ್ಯವಾದ ಫಲವನ್ನು ಬಯಸಿ ತಿಂದ ಹೆಂಗುಸು ಚಕ್ರವರ್ತಿಯನ್ನು ಹಡೆಯುವಳು. ಭದ್ರೆ, ನೀನು ಪಟ್ಟದ ರಾಣಿ, ನಿನ್ನ ಪತಿಗೆ ನೀನು ಪ್ರಿಯಳಾದವಳು. ಈ ಆಭ್ಯಂತರ ಹಣ್ಣನ್ನು ರಾಜನು ನಿನಗೆ ತರಿಸಿ ಕೊಡುವನು" ಎಂದನು.

ಶಕ್ರನು ಹೀಗೆ ದೇವಿಯೊಡನೆ ಮಾತನಾಡಿ, "ನೀನು ಅಪ್ರಮತ್ತ ಳಾಗು. ಇತರ ವಿಷಯದ ಗೊಡವೆಗೆ ಹೋಗಬೇಡ. ಬೆಳಗ್ಗೆ ರಾಜನಿಗೆ ತಿಳಿಸು" ಎಂದು ಅವಳಿಗೆ ಅನುಶಾಸನೆಮಾಡಿ ತನ್ನ ವಾಸಸ್ಥಾನಕ್ಕೇ ಹೋದನು.

ಅವಳು ಮರುದಿವಸ ಕಾಯಿಲೆಯ ಮನೆಯನ್ನು ಪರಿಚಾರಿಯರಿಗೆ ಕಾಣಿಸಿ ಸನ್ನೆಮಾಡಿ ಮಲಗಿಕೊಂಡಳು.

ರಾಜನು ಎತ್ತಿದ ಬೆಳ್ಗೊಡೆಯ ಕೆಳಗೆ ಸಿಂಹಾಸನದಲ್ಲಿ ಕುಳಿತು ನಾಟಕಗಳನ್ನು ನೋಡುತ್ತಾ, ದೇವಿಯನ್ನು ಕಾಣದೆ, 'ದೇವಿ ಎಲ್ಲಿ?' ಎಂದು ಪರಿಚಾರಿಕೆಯನ್ನು ಕೇಳಿದನು.

" ಕಾಯಿಲೆ, ದೇವ. "

ಅವನು ಅವಳ ಬಳಿಸಾರಿ, ಹಾಸಿಗೆಯ ಪಕ್ಕದಲ್ಲಿ ಕುಳಿತು, ಬೆನ್ನು ಸವರುತ್ತಾ " ಏನು ಭದ್ರೆ, ಸ್ವಸ್ಥವಿಲ್ಲವೆ ? " ಎಂದು ಕೇಳಿದನು.

" ಮಹಾರಾಜ, ಬೇರೆ ಏನೂ ಅಸ್ವಸ್ಥತೆಯಿಲ್ಲ. ನನಗೆ ಬಯಕೆ ಯುಂಟಾಗಿದೆ. "

" ನಿನಗೆ ಏನು ಇಷ್ಟ, ಭದ್ರೆ ? "

" ಆಭ್ಯಂತರ ಆಮ್ರಫಲ, ದೇವ. "

" ಆಭ್ಯಂತರ ಆಮ್ರವೆಂಬುದು ಎಲ್ಲಿ ಇದೆ ? "

“ ಆಭ್ಯಂತರ ಆಮ್ರ ನನಗೆ ತಿಳಿಯದು, ದೇವ. ಅದರ ಹಣ್ಣು ನನಗೆ ದೊರಕಿದರೆ ನಾನು ಬದುಕುವೆನು,ದೊರಕದಿದ್ದರೆ ಬದುಕುವುದಿಲ್ಲ.”

“ ಹಾಗಾದರೆ, ತರಿಸುವೆನು. ಚಿಂತಿಸಬೇಡ” ಎಂದು ರಾಜನು ದೇವಿಯನ್ನು ಸಂತೈಸಿ, ಎದ್ದು ಹೋಗಿ, ರಾಜಪರ್ಯಂಕದಲ್ಲಿ ಕುಳಿತು, ಅಮಾತ್ಯರಿಗೆ ಹೇಳಿಕಳಿಸಿ, “ದೇವಿಗೆ ಆಭ್ಯಂತರ ಆಮ್ರವೆಂಬುದರಲ್ಲಿ ಬಯಕೆಯಾಗಿದೆ. ಏನು ಮಾಡಬೇಕು ? ” ಎಂದು ಕೇಳಿದನು.

“ ದೇವ, ಎರಡು ಆಮ್ರಗಳ ನಡುವಿನ ಅಂತರದಲ್ಲಿ ಇರುವ ಆಮ್ರಕ್ಕೆ ಆಭ್ಯಂತರ ಆಮ್ರವೆಂದು ಹೆಸರು. ಉದ್ಯಾನಕ್ಕೆ ಕಳಿಸಿ, ನಡುವೆ ನಿಂತ ಆಮ್ರಫಲವನ್ನು ತರಿಸಿ ದೇವಿಗೆ ಕೊಡೋಣ. ”

ರಾಜನು ‘ಒಳ್ಳೆಯದು’ ಎಂದು ‘ಇಂತಹ ಆಮ್ರವನ್ನು ತನ್ನಿರಿ’ ಎಂದು ಉದ್ಯಾನಕ್ಕೆ ಕಳಿಸಿದನು.

ಶಕ್ರನು ತನ್ನ ಅನುಭಾವದಿಂದ ಉದ್ಯಾನದಲ್ಲಿ ಆಮ್ರಗಳನ್ನು ತಿಂದಂತೆ ಮಾಡಿ, ಮರೆಯಾಗಿಸಿದನು. ಮಾವಿಗಾಗಿ ಹೋದವರು ಉದ್ಯಾನದಲ್ಲೆಲ್ಲಾ ತಿರುಗಾಡಿ, ಒಂದು ಮಾವೂ ದೊರಕದೆ, ಹೋಗಿ, ಉದ್ಯಾನದಲ್ಲಿ ಆಮ್ರಗಳು ಇಲ್ಲದುದನ್ನು ರಾಜನಿಗೆ ಹೇಳಿದರು.

“ ಮಾವನ್ನು ಯಾರು ತಿನ್ನುವರು ? ”

“ ತಾಪಸರು, ದೇವ. ”

“ ತಾಪಸರನ್ನು ಉದ್ಯಾನದಿಂದ ಹೊಡೆದು ಹೊರಗಟ್ಟಿರಿ. ”

ಜನರು ‘ಒಳ್ಳೆಯದು’ ಎಂದು, ಹೇಳಿ, ಹೊರಗಟ್ಟಿದರು. ಶಕ್ರನ ಮನೋರಥ ಪೂರೈಸಿತು.

ದೇವಿ ಮಾವಿನ ಹಣ್ಣಿಗಾಗಿ ಹಟಮಾಡಿ ಮಲಗಿಯೇ ಇದ್ದಳು. ರಾಜನು ಏನು ಮಾಡಬೇಕೋ ಕಾಣದೆ ಅಮಾತ್ಯರನ್ನೂ ಬ್ರಾಹ್ಮಣರನ್ನೂ “ಆಭ್ಯಂತರ ಆಮ್ರ ಇರುವುದನ್ನು ಬಲ್ಲಿರಾ ?” ಎಂದು ಕೇಳಿದನು.

ಬ್ರಾಹ್ಮಣರು “ ದೇವ, ‘ಆಭ್ಯಂತರ ಆಮ್ರವೆಂಬುದು ದೇವತೆಗಳು ತಿನ್ನುವಂತಹದು. ಹಿಮವಂತದ ಕಾಂಚನಗುಹೆಯ ಒಳಗೆ ಇದೆ’ ಎಂದು ನಾವು ಪರಂಪರೆಯಿಂದ ಕೇಳಿದ್ದೇವೆ” ಎಂದರು.

" ಆ ಮಾವನ್ನು ತರಲು ಯಾರಿಗೆ ಶಕ್ಯ ? "

" ಅಲ್ಲಿಗೆ ಮನುಷ್ಯರು ಹೋಗಲು ಶಕ್ಯವಿಲ್ಲ. ಒಂದು ಗಿಳಿಮರಿಯನ್ನು ಕಳುಹಬಹುದು."

ಆ ಕಾಲದಲ್ಲಿ ರಾಜನ ಮನೆಯಲ್ಲಿ ಒಂದು ಗಿಳಿಮರಿಯಿತ್ತು. ರಾಜಕುಮಾರರ ಗಾಡಿಯ ಚಕ್ರದಷ್ಟು ದೊಡ್ಡ ಶರೀರ ಅದಕ್ಕೆ ಇತ್ತು. ಅದಕ್ಕೆ ಸಾಮರ್ಥ್ಯವೂ ಪ್ರಜ್ಞೆಯೂ ತುಂಬಾ ಇತ್ತು. ಅದಕ್ಕೆ ಉಪಾಯಗಳೆಲ್ಲಾ ಚೆನ್ನಾಗಿ ತಿಳಿದಿತ್ತು.

ರಾಜನು ಅದನ್ನು ತರಿಸಿ " ಅಪ್ಪಾ ಗಿಳಿಮರಿ, ನಾನು ನಿನಗೆ ಬಹು ಉಪಕಾರ ಮಾಡಿದ್ದೇನೆ. ಚಿನ್ನದ ಪಂಜರದಲ್ಲಿ ನಿನಗೆ ವಾಸ. ಚಿನ್ನದ ತಟ್ಟೆಯಲ್ಲಿ ಸಿಹಿ ಅರಳು ತಿನ್ನುವೆ. ಸಕ್ಕರೆ ಪಾನಕ ಕುಡಿಯುವೆ. ನೀನು ನನಗೆ ಒಂದು ಕೆಲಸ ನಡಸಿಕೊಡಬಹುದಲ್ಲ" ಎಂದನು.

" ಹೇಳು, ದೇವ. "

" ಅಪ್ಪಾ, ದೇವಿಗೆ ಆಭ್ಯಂತರ ಆಮ್ರದಲ್ಲಿ ಬಯಕೆಯಾಗಿದೆ. ಆ ಆಮ್ರ ಹಿಮವಂತದ ಕಾಂಚನಗುಹೆಯೊಳಗೆ ಇದೆ. ಅದು ದೇವತೆಗಳು ತಿನ್ನುವಂಥದು. ಅಲ್ಲಿಗೆ ಮನುಷ್ಯರು ಹೋಗಲು ಶಕ್ಯವಿಲ್ಲ. ನೀನು ಅಲ್ಲಿಂದ ಹಣ್ಣನ್ನು ತರಬಹುದು."

" ಒಳ್ಳೆಯದು, ದೇವ. ತರುತ್ತೇನೆ. "

ಆಗ ರಾಜನು ಅದಕ್ಕೆ ಚಿನ್ನದ ತಟ್ಟೆಯಲ್ಲಿ ಸಿಹಿ ಅರಳು ತಿನ್ನಿಸಿ, ಸಕ್ಕರೆನೀರು ಕುಡಿಸಿ, ಶತಪಾಕತೈಲದಿಂದ ಅದರ ರೆಕ್ಕೆಗಳ ಒಳಗನ್ನು ಸವರಿ, ಎರಡು ಕೈಗಳಲ್ಲೂ ಅದನ್ನು ಹಿಡಿದುಕೊಂಡು, ಕಿಟಕಿಯ ಬಳಿ ನಿಂತು, ಆಕಾಶದಲ್ಲಿ ಬಿಟ್ಟನು.

ಅದಾದರೋ ರಾಜನ ಸೇವೆಗಾಗಿ ಆಕಾಶದಲ್ಲಿ ಹಾರುತ್ತಾ ಮನುಷ್ಯಪಥವನ್ನು ಮೀರಿ, ಹಿಮವಂತದ ಮೊದಲ ಪರ್ವತಗಳೊಳಗೆ ವಾಸಿಸುತ್ತಿದ್ದ ಗಿಳಿಗಳ ಬಳಿಗೆ ಹೋಗಿ, " ಆಭ್ಯಂತರ ಆಮ್ರವೆಂಬುದು ಎಲ್ಲಿ ಇದೆ ? ಆ ಎಡೆಯನ್ನು ನನಗೆ ಹೇಳಿ " ಎಂದಿತು.

" ನಮಗೆ ತಿಳಿಯದು. ಎರಡನೆಯ ಪರ್ವತದೊಳಗಣ ಗಿಳಿಗಳಿಗೆ ಗೊತ್ತು. "

ಅದು ಅವುಗಳ ಮಾತು ಕೇಳಿ, ಅಲ್ಲಿಂದ ಎದ್ದು ಎರಡನೆಯ ಪರ್ವತಕ್ಕೆ ಬಂತು. ಹಾಗೆಯೇ ಮೂರು, ನಾಲ್ಕು, ಐದು, ಆರನೆಯದಕ್ಕೂ ಬಂತು. ಅಲ್ಲಿಯ ಗಿಳಿಗಳೂ "ನಮಗೆ ತಿಳಿಯದು. ಏಳನೆಯ ಪರ್ವತದೊಳಗಿನ ಗಿಳಿಗಳಿಗೆ ಗೊತ್ತು " ಎಂದವು.

ಅದು ಅಲ್ಲಿಗೂ ಹೋಗಿ, " ಆಭ್ಯಂತರ ಆಮ್ರವೆಂಬುದು ಎಲ್ಲಿ ಇದೆ ? " ಎಂದು ಕೇಳಿತು.

" ಇಂತಹ ಕಡೆ, ಕಾಂಚನ ಪರ್ವತದೊಳಗೆ. "

" ನಾನು ಅದರ ಹಣ್ಣಿಗಾಗಿ ಬಂದೆ. ನನ್ನನ್ನು ಅಲ್ಲಿಗೆ ಒಯ್ದು, ನನಗೆ ಆ ಹಣ್ಣನ್ನು ಕೊಡಿಸಿರಿ. "

" ಅದು ವೈಶ್ರವಣ ಮಹಾರಾಜನು ತಿನ್ನುವಂತಹದು. ಅದರ ಬಳಿ ಸಾರಲು ಶಕ್ಯವಿಲ್ಲ. ಬುಡದಿಂದ ಹಿಡಿದು ಮರದ ತುಂಬಾ ಏಳು ಲೋಹಜಾಲಗಳನ್ನು ಸುತ್ತುಹಾಕಿದ್ದಾರೆ. ಕೋಟಿಸಹಸ್ರ ಕುಂಭಾಂಡ ರಾಕ್ಷಸರು ಅದಕ್ಕೆ ಕಾವಲಿದ್ದಾರೆ. ಅವರು ಕಂಡರೆ ನಾವು ಬದುಕುವಂತಿಲ್ಲ. ಆ ಸ್ಥಾನ ಕಲ್ಪಾಂತಕಾಲದ ಅಗ್ನಿಯಂತಹದು, ಅವೀಚೀ ಮಹಾನರಕದಂತಹದು. ಅಲ್ಲಿಗೆ ಹೋಗೆಂದು ಪ್ರಾರ್ಥಿಸಬೇಡ."

" ನೀವು ಹೋಗದಿದ್ದರೆ, ನನಗೆ ಆ ಸ್ಥಳವನ್ನು ತಿಳಿಸಿರಿ."

" ಹಾಗಾದರೆ, ಇಂತಹ ಇಂತಹ ಸ್ಥಾನಗಳ ಮೇಲೆ ಹೋಗು."

ಅದು ಅವು ಹೇಳಿದುದನ್ನು ಚೆನ್ನಾಗಿ ನೆನಪಿನಲ್ಲಿಟ್ಟು, ಆ ಸ್ಥಳಕ್ಕೆ ಹೋಗಿ, ಹಗಲು ತನ್ನನ್ನು ಕಾಣಿಸಿಕೊಳ್ಳದೆ, ಮಧ್ಯಮಯಾಮ ಮುಗಿದ ಮೇಲೆ, ರಾಕ್ಷಸರು ನಿದ್ರೆಮಾಡುವ ಸಮಯದಲ್ಲಿ ಆಭ್ಯಂತರ ಆಮ್ರದ ಬಳಿ ಹೋಗಿ, ಒಂದಾನೊಂದು ಬುಡದ ನಡುವೆ ಮೆಲ್ಲಗೆ ಹತ್ತತೊಡಗಿತು. ಲೋಹಜಾಲ ಕಿಳೀ ಎಂದು ಶಬ್ದಮಾಡಿತು. ರಾಕ್ಷಸರು ಎಚ್ಚರಗೊಂಡು, ಗಿಳಿಮರಿಯನ್ನು ಕಂಡು, " ಮಾವಿನ ಕಳ್ಳ " ಎಂದು ಹಿಡಿದು, ಏನು ಮಾಡಬೇಕೆಂದು ವಿಚಾರಮಾಡಿದರು.

ಒಬ್ಬನು "ಬಾಯಿಗೆ ಹಾಕಿಕೊಂಡು ನುಂಗಿಬಿಡುವೆನು" ಎಂದನು. ಇನ್ನೊಬ್ಬನು "ಕೈಯಲ್ಲಿ ಹಿಸುಕಿ ಉಂಡೆಮಾಡಿ ತೂರಿಬಿಡುವೆನು" ಎಂದನು. ಮತ್ತೊಬ್ಬನು "ಎರಡಾಗಿ ಸೀಳಿ, ಬೆಂಕಿಯಲ್ಲಿ ಬೇಯಿಸಿ ತಿನ್ನುವೆನು" ಎಂದನು.

ಅವರು ಏನು ಮಾಡಬೇಕೆಂದು ವಿಚಾರಿಸುವುದನ್ನು ಕೇಳಿಯೂ ಅದು ಹೆದರದೆಯೇ ಆ ರಾಕ್ಷಸರನ್ನು ಕುರಿತು, "ಓ ರಾಕ್ಷಸರೆ, ನೀವು ಯಾರ ಆಳುಗಳು ? " ಎಂದಿತು.

" ವೈಶ್ರವಣ ಮಹಾರಾಜನವರ. "

" ಓಹೋ, ನೀವೂ ಒಬ್ಬ ರಾಜನ ಆಳುಗಳು. ನಾನೂ ಒಬ್ಬ ರಾಜನ ಆಳು. ವಾರಾಣಸಿರಾಜನು ನನ್ನನ್ನು ಆಭ್ಯಂತರ ಅಮಾತ್ಯನನ್ನಾಗಿ ಕಳಿಸಿದನು. ನಾನು ಅಲ್ಲಿಯೇ ರಾಜನಿಗಾಗಿ ನನ್ನ ಜೀವ ಕೊಟ್ಟು ಬಂದೆ. ತಾಯಿತಂದೆಗಾಗಿಯೂ ಒಡೆಯನಿಗಾಗಿಯೂ ಜೀವ ತೊರೆಯುವವನು ದೇವಲೋಕದಲ್ಲಿಯೇ ಹುಟ್ಟುವನು. ಆದ್ದರಿಂದ ನಾನು ಕೂಡ ಈ ಹಕ್ಕಿಯ ದೇಹವನ್ನು ಬಿಟ್ಟು ದೇವಲೋಕದಲ್ಲಿ ಹುಟ್ಟುವೆನು."

ಹೀಗೆ ಅದು ಅವರಿಗೆ ಧರ್ಮವನ್ನು ತೋರಿಸಿತು. ಅವರು ಅದರ ಧರ್ಮವನ್ನು ಕೇಳಿ ಪ್ರಸನ್ನಚಿತ್ತರಾಗಿ, " ಇದಕ್ಕೆ ಧರ್ಮ ಗೊತ್ತು. ಇದನ್ನು ಕೊಲ್ಲಲಾಗದು. ಬಿಟ್ಟುಬಿಡಿ " ಎಂದು ಹೇಳುತ್ತಾ ಗಿಳಿ ಮರಿಯನ್ನು ಬಿಟ್ಟು, " ಓ, ಗಿಳಿಮರಿ, ನಿನ್ನನ್ನು ಬಿಟ್ಟಿರುವೆವು. ನಮ್ಮ ಕೈಯಿಂದ ಪಾರಾಗಿ ನೀನು ಸುಖವಾಗಿ ಹೋಗು " ಎಂದರು.

" ನಾನು ಬಂದುದಕ್ಕೆ ಬರಿಗೈ ಮಾಡಬೇಡಿ. ಒಂದು ಮಾವಿನ ಹಣ್ಣು ನನಗೆ ಕೊಡಿ. "

" ಗಿಳಿಮರಿ, ನಿನಗೆ ಒಂದು ಹಣ್ಣು ಕೊಡುವುದೇನೂ ಭಾರವಲ್ಲ. ಈ ಮರದಲ್ಲಿರುವ ಮಾವುಗಳಿಗೆ ಗುರುತುಮಾಡಿದ್ದಾರೆ. ಒಂದು ಹಣ್ಣು ಕಡಮೆಯಾದರೂ ನಮಗೆ ಉಳಿವಿಲ್ಲ. ವೈಶ್ರವಣನು ಕೋಪಗೊಂಡು ನೋಡಿದರೆ ಸಾಕು, ಕಾದ ಕಾವಲಿಯ ಮೇಲೆ ಹಾಕಿದ ಎಳ್ಳಿನಂತೆ ಸಾವಿರಾರು ಕುಂಭಾಂಡರು ಚೂರುಚೂರಾಗಿ ಸಿಡಿದುಹೋಗುವರು.

ಆದ್ದರಿಂದ ಅದನ್ನು ಕೊಡಲಾರೆವು. ಆದರೆ ದೊರಕುವ ಸ್ಥಳವನ್ನು ತಿಳಿಸುವೆವು."

"ಯಾರಾದರೂ ಕೊಡಲಿ. ನನಗೆ ಬೇಕಾದ್ದು ಹಣ್ಣು. ದೊರಕುವ ಸ್ಥಳ ತಿಳಿಸಿರಿ."

"ಬಲೆಯಂತಿರುವ ಕಾಂಚನಪರ್ವತದಲ್ಲಿ ಜ್ಯೋತಿರಸನೆಂಬ ತಾಪಸನು ಅಗ್ನಿಯನ್ನು ಆರಾಧಿಸುತ್ತಾ ಕಾಂಚನಪತ್ರಿಯೆಂಬ ಪರ್ಣಶಾಲೆಯಲ್ಲಿ ವಾಸಿಸುವನು. ಅವನು ವೈಶ್ರವಣನಿಗೆ ಬೇಕಾದವನು. ವೈಶ್ರವಣನು ಅವನಿಗೆ ಯಾವಾಗಲೂ ನಾಲ್ಕು ಹಣ್ಣು ಕಳುಹುವನು. ಅವನ ಬಳಿ ಹೋಗು."

ಅದು 'ಒಳ್ಳೆಯದು' ಎಂದು ಒಪ್ಪಿ, ತಾಪಸನ ಬಳಿ ಹೋಗಿ, ವಂದಿಸಿ, ಒಂದು ಕಡೆ ಕುಳಿತಿತು.

ಆಗ ಆ ತಾಪಸನು "ಎಲ್ಲಿಂದ ಬಂದೆ?" ಎಂದನು.

"ವಾರಾಣಸಿರಾಜನ ಬಳಿಯಿಂದ."

"ಏತಕ್ಕಾಗಿ ಬಂದೆ?"

"ಸ್ವಾಮಿ, ನಮ್ಮ ರಾಜನ ದೇವಿಗೆ ಆಭ್ಯಂತರ ಆಮ್ರದ ಮೇಲೆ ಬಯಕೆಯುಂಟಾಗಿದೆ. ಅದಕ್ಕಾಗಿ ಬಂದೆ. ರಾಕ್ಷಸರು ತಾವು ನನಗೆ ಪಕ್ವವಾದ ಮಾವನ್ನು ಕೊಡದೆ ನಿಮ್ಮ ಬಳಿಗೆ ಕಳುಹಿದರು."

"ಹಾಗಾದರೆ ಕುಳಿತುಕೊ, ಪಡೆಯುವೆಯಂತೆ."

ಆಗ ವೈಶ್ರವಣನು ನಾಲ್ಕು ಹಣ್ಣು ಕಳುಹಿದನು. ತಾಪಸನು ಅದರಲ್ಲಿ ಎರಡು ತಿಂದನು, ಒಂದನ್ನು ಗಿಳಿಮರಿಗೆ ತಿನ್ನಲು ಕೊಟ್ಟನು. ಅದನ್ನು ಅದು ತಿನ್ನಲು, ಒಂದು ಹಣ್ಣನ್ನು ದಾರದಲ್ಲಿ ಕೋದು ಗಿಳಿಯ ಕತ್ತಿಗೆ ಕಟ್ಟಿ, "ಇನ್ನು ಹೋಗು" ಎಂದು ಗಿಳಿಮರಿಯನ್ನು ಬಿಟ್ಟು ಕಳಿಸಿದನು.

ಅದು ಅದನ್ನು ತಂದು ದೇವಿಗೆ ಕೊಟ್ಟಿತು. ಅವಳು ಅದನ್ನು ತಿಂದು ಬಯಕೆ ತೀರಿಸಿಕೊಂಡಳು. ಆದರೂ ಅವಳಿಗೆ ಮಗನಾಗಲಿಲ್ಲ.

# ಧರ್ಮಧ್ವಜ

ಹಿಂದೆ, ವಾರಾಣಸಿಯಲ್ಲಿ ಯಶಪಾಣಿಯೆಂಬ ರಾಜನು ರಾಜ್ಯ ವಾಳಿದನು. ಕಾಳಕನೆಂಬವನು ಅವನ ಸೇನಾಪತಿಯಾಗಿದ್ದನು. ಆಗ ಬೋಧಿಸತ್ತ್ವನು ಧರ್ಮಧ್ವಜನೆಂಬ ಹೆಸರಿನಿಂದ ಅವನ ಪುರೋಹಿತ ನಾಗಿದ್ದನು. ಛತ್ರಪಾಣಿಯೆಂಬವನು ರಾಜನ ತಲೆಯೊಡವೆಗಳನ್ನು ಮಾಡುವವನಾಗಿದ್ದನು.

ರಾಜನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಸೇನಾಪತಿ ಯಾದರೋ ನ್ಯಾಯವನ್ನು ನಿಶ್ಚಯಿಸುತ್ತಾ ಲಂಚ ತಿನ್ನುವನು, ಇತರರ ಬೆನ್ನುಮಾಂಸದಿಂದ ಬೆಳೆಯುವನು; ಲಂಚ ತೆಗೆದುಕೊಂಡು, ಒಡೆಯ ರಲ್ಲದವರನ್ನು ಒಡೆಯರನ್ನಾಗಿ ಮಾಡುವನು.

ಆಗ ಒಂದು ದಿವಸ ನ್ಯಾಯದಲ್ಲಿ ಸೋತವನೊಬ್ಬನು ತೋಳು ಗಳನ್ನು ನೀಡಿ ಗೋಳಾಡುತ್ತಾ ನ್ಯಾಯಸ್ಥಾನದಿಂದ ಹೊರಗೆ ಬಂದು ರಾಜನ ಸೇವೆಗೆ ಹೋಗುತ್ತಿದ್ದ ಬೋಧಿಸತ್ತ್ವನನ್ನು ಕಂಡು, ಅವನ ಕಾಲಿಗೆ ಬಿದ್ದು, "ಸ್ವಾಮಿ, ನಿನ್ನಂತಹವನು ರಾಜನಿಗೆ ಧರ್ಮಾರ್ಥ ಗಳನ್ನು ಅನುಶಾಸನೆ ಮಾಡುತ್ತಿದ್ದರೂ ಕಾಳಕಸೇನಾಪತಿಯು ಲಂಚ ತೆಗೆದುಕೊಂಡು ಒಡೆಯರಲ್ಲದವರನ್ನು ಒಡೆಯರನ್ನಾಗಿ ಮಾಡುವನು" ಎಂದು ತನ್ನ ಸೋಲನ್ನು ಹೇಳಿಕೊಂಡನು.

ಬೋಧಿಸತ್ತ್ವನು ಕನಿಕರಪಟ್ಟು, "ಬಾ ಅಪ್ಪ, ನಿನ್ನ ನ್ಯಾಯ ವನ್ನು ನಿಶ್ಚೈಸುವೆನು" ಎಂದು ಅವನನ್ನು ಕರೆದುಕೊಂಡು ನ್ಯಾಯ ಸ್ಥಾನಕ್ಕೆ ಬಂದನು. ಮಹಾಜನರು ನೆರೆದರು. ಬೋಧಿಸತ್ತ್ವನು ಅವನ ನ್ಯಾಯವನ್ನು ಪುನಃ ನಿಶ್ಚೈಸಿ, ಒಡೆಯನಾದವನನ್ನೇ ಒಡೆಯ ನನ್ನಾಗಿ ಮಾಡಿದನು. ಮಹಾಜನರು 'ಸಾಧು! ಸಾಧು!' ಎಂದರು. ಅದು ಮಹಾಶಬ್ದವಾಯಿತು.

ರಾಜನು ಅದನ್ನು ಕೇಳಿ, "ಇದೇನು ಶಬ್ದ ?" ಎಂದು ಕೇಳಿದನು.

"ದೇವ, ತಪ್ಪುತೀರ್ಪನ್ನು ಧರ್ಮಧ್ವಜಪಂಡಿತನು ಪುನಃ ನಿಶ್ಚೈಸಿದನು. ಅದಕ್ಕೆ ಇದು ಮೆಚ್ಚಿ ಕೂಗಿದ ಶಬ್ದ."

ರಾಜನು ಸಂತುಷ್ಟನಾಗಿ, ಬೋಧಿಸತ್ತ್ವನಿಗೆ ಹೇಳಿಕಳಿಸಿ, "ಆಚಾರ್ಯ, ನೀನು ನ್ಯಾಯವನ್ನು ತೀರ್ಮಾನಿಸಿದೆಯ ?" ಎಂದನು.

"ಹೌದು, ಮಹಾರಾಜ. ಕಾಳಕನು ತಪ್ಪಾಗಿ ತೀರ್ಪು ಕೊಟ್ಟುದನ್ನು ಪುನಃ ನಿಶ್ಚಯಿಸಿದೆ."

ರಾಜನು "ಆದ್ದರಿಂದ ಇಂದು ಮೊದಲಾಗಿ ನೀನೇ ನ್ಯಾಯ ತೀರಿಸು. ನನಗೂ ಕರ್ಣಸುಖವಾಗುವುದು, ಲೋಕಕ್ಕೆ ವೃದ್ಧಿಯಾಗುವುದು" ಎಂದು ಹೇಳಿ, ಅವನು ಇಷ್ಟಪಡದಿದ್ದರೂ "ಜನರ ಮೇಲಿನ ಅನುದಯೆಯಿಂದ ನೀನು ತೀರ್ಪಿಗೆ ಕುಳಿತುಕೊ" ಎಂದು ಅವನನ್ನು ಬೇಡಿ ಒಪ್ಪಿಸಿದನು.

ಅಂದಿನಿಂದ ಬೋಧಿಸತ್ತ್ವನು ತೀರ್ಪಿಗೆ ಕುಳಿತುಕೊಳ್ಳುವನು, ಒಡೆಯನನ್ನೇ ಒಡೆಯನನ್ನಾಗಿ ಮಾಡುವನು.

ಅಂದಿನಿಂದ ಕಾಳಕನು ಲಂಚ ದೊರಕದೆ, ಲಾಭವನ್ನು ಕಳೆದುಕೊಂಡು, "ಮಹಾರಾಜ, ಧರ್ಮಧ್ವಜಪಂಡಿತನು ನಿನ್ನ ರಾಜ್ಯಕ್ಕೆ ಆಸೆಪಡುವನು" ಎಂದು ಬೋಧಿಸತ್ತ್ವನನ್ನು ರಾಜನಲ್ಲಿ ದೂರಿದನು.

ರಾಜನು ಅದನ್ನು ನಂಬದೆ, "ಹಾಗೆ ಹೇಳಬೇಡ" ಎಂದು ತಳ್ಳಿ, ಪುನಃ ಅವನು "ನನ್ನನ್ನು ನಂಬದಿದ್ದರೆ, ಅವನು ಬರುವಾಗ ಕಿಟಕಿಯಲ್ಲಿ ನೋಡು. ನಗರವೆಲ್ಲವನ್ನೂ ಅವನು ಕೈವಶಮಾಡಿಕೊಂಡಿರುವುದನ್ನು ಆಗ ಕಾಣುವೆ" ಎನ್ನಲು, ತೀರ್ಪನ್ನು ಬಯಸಿ ಅವನ ಸುತ್ತಲೂ ಇದ್ದವರನ್ನು ಕಂಡು, "ಇದೇ ಇವನ ಪರಿಷೆ" ಎಂದು ಮನಸ್ಸು ಮುರಿದು, "ಏನು ಮಾಡೋಣ, ಸೇನಾಪತಿ ?" ಎಂದು ಕೇಳಿದನು.

"ದೇವ, ಇವನನ್ನು ಕೊಲ್ಲಿಸಬಹುದು."

"ದೊಡ್ಡ ದೋಷವನ್ನು ಕಾಣದೆ, ಹೇಗೆ ಕೊಲ್ಲಿಸೋಣ ?"

"ಒಂದು ಉಪಾಯವಿದೆ."

"ಎಂತಹ ಉಪಾಯ ?"

"ಅಸಾಧ್ಯವಾದ ಕಾರ್ಯವನ್ನು ಇವನಿಗೆ ಹೇಳೋಣ. ಅದನ್ನು ಮಾಡಲು ಆಗದ ದೋಷಕ್ಕೆ ಕೊಲ್ಲಿಸೋಣ."

" ಇವನಿಗೆ ಅಸಾಧ್ಯವಾದ ಕಾರ್ಯವಾವುದು ? "

" ಮಹಾರಾಜ, ಉದ್ಯಾನವೆಂಬ ಸಾರವತ್ತಾದ ಭೂಮಿಯಲ್ಲಿ ನೆಟ್ಟು ಪಾಲಿಸಿದುದು ಎರಡೋ ನಾಲ್ಕೋ ವರ್ಷಗಳಿಗೆ ಫಲ ಕೊಡುತ್ತದೆ. ನೀನು ಇವನನ್ನು ಕರೆಕಳುಹಿ, 'ನಾಳೆಯೇ ಉದ್ಯಾನದಲ್ಲಿ ಕ್ರೀಡಿಸಬೇಕು. ನನಗೆ ಉದ್ಯಾನ ರಚಿಸು' ಎಂದು ಹೇಳು. ಇವನು ರಚಿಸಲಾರ. ಆಗ ಆ ದೋಷಕ್ಕಾಗಿ ಇವನನ್ನು ಕೊಲ್ಲಿಸೋಣ. "

ರಾಜನು ಬೋಧಿಸತ್ತ್ವನನ್ನು ಕರೆಸಿ, " ಪಂಡಿತ, ನಾನು ಹಳೆಯ ಉದ್ಯಾನದಲ್ಲಿ ಬಹುಕಾಲ ಕ್ರೀಡಿಸಿದ್ದೇನೆ. ಈಗ ಹೊಸ ಉದ್ಯಾನದಲ್ಲಿ ಕ್ರೀಡಿಸಲು ಆಸೆಯಾಗಿದೆ. ನಾಳೆ ಕ್ರೀಡಿಸುವೆವು, ನಮಗೆ ಉದ್ಯಾನವನ್ನು ರಚಿಸು. ರಚಿಸಲಾಗದಿದ್ದರೆ ನೀನು ಉಳಿಯುವಂತಿಲ್ಲ" ಎಂದನು.

ಬೋಧಿಸತ್ತ್ವನು "ಕಾಳಕನಿಗೆ ಲಂಚ ದೊರಕದುದರಿಂದ ರಾಜನ ಮನಸ್ಸು ಮುರಿದಿರಬೇಕು" ಎಂದು ತಿಳಿದು, "ಕೈಲಾದರೆ ನೋಡುವೆನು, ಮಹಾರಾಜ" ಎಂದು ಹೇಳಿ, ಮನೆಗೆ ಹೋಗಿ, ಒಳ್ಳೆಯ ಊಟ ಉಂಡು, ಚಿಂತಿಸುತ್ತಾ ಹಾಸಿಗೆಯಲ್ಲಿ ಮಲಗಿದನು.

ಶಕ್ರನ ಮನೆ ಬಿಸಿಯಾಯಿತು. ಶಕ್ರನು ಧ್ಯಾನದಿಂದ ಬೋಧಿಸತ್ತ್ವನ ಪೀಡೆಯನ್ನು ತಿಳಿದು, ವೇಗದಿಂದ ಬಂದು, ಮಲಗುವ ಕೋಣೆಯನ್ನು ಪ್ರವೇಶಿಸಿ, ಆಕಾಶದಲ್ಲಿ ನಿಂತು, " ಏನು ಚಿಂತಿಸುವೆ, ಪಂಡಿತ?" ಎಂದನು.

" ನೀನು ಯಾರು ? "

" ನಾನು ಶಕ್ರ. "

" ರಾಜನು ಉದ್ಯಾನವನ್ನು ರಚಿಸೆಂದನು. ಅದನ್ನು ಚಿಂತಿಸುತ್ತಿದ್ದೇನೆ. "

" ಚಿಂತಿಸಬೇಡ, ಪಂಡಿತ. ನಾನು ನಿನಗೆ ನಂದನವನ ಚಿತ್ರಲತಾವನಗಳಿಗೆ ಸಮನಾದ ಉದ್ಯಾನವನ್ನು ರಚಿಸಿಕೊಡುತ್ತೇನೆ. ಯಾವ ಎಡೆಯಲ್ಲಿ ರಚಿಸಲಿ ? "

" ಇಂತಹ ಎಡೆಯಲ್ಲಿ ರಚಿಸು. "

ಶಕ್ರನು ರಚಿಸಿ, ದೇವಪುರಕ್ಕೇ ಹೋದನು.

ಮರುದಿವಸ ಬೋಧಿಸತ್ತ್ವನು ಉದ್ಯಾನವನ್ನು ಪ್ರತ್ಯಕ್ಷವಾಗಿ ಕಂಡು, ಹೋಗಿ, "ಉದ್ಯಾನ ಸಿದ್ಧವಾಗಿದೆ, ಮಹಾರಾಜ, ಕ್ರೀಡಿಸು" ಎಂದು ರಾಜನಿಗೆ ತಿಳಿಸಿದನು.

ರಾಜನು ಹೋಗಿ, ಉದ್ಯಾನವನ್ನು ಕಂಡನು. ಅದರ ಸುತ್ತಲೂ ಹದಿನೆಂಟು ಹಸ್ತಗಳ ಮನೋಶಿಲಾವರ್ಣದ ಪ್ರಾಕಾರವಿತ್ತು, ದ್ವಾರ ಅಟ್ಟಾಲಕಗಳಿತ್ತು. ಪುಷ್ಪಫಲಭಾರದಿಂದ ತುಂಬಿದ ನಾನಾವೃಕ್ಷಗಳಿಂದ ಉದ್ಯಾನ ಅಲಂಕೃತವಾಗಿತ್ತು.

ರಾಜನು ಅದನ್ನು ಕಂಡು, "ಪಂಡಿತನು ನಮ್ಮ ಮಾತು ಮಾಡಿದನು. ಈಗೇನು ಮಾಡೋಣ?" ಎಂದು ಕಾಳಕನನ್ನು ಕೇಳಿದನು.

"ಮಹಾರಾಜ, ಒಂದು ರಾತ್ರಿಯಲ್ಲಿ ಉದ್ಯಾನ ರಚಿಸಲು ಶಕ್ತನಾದವನು ರಾಜ್ಯವನ್ನು ಕೊಳ್ಳಲು ಶಕ್ತನಾಗುವುದಿಲ್ಲವೆ?"

"ಇದಕ್ಕೇನು ಮಾಡೋಣ?"

"ಪುನಃ ಇವನಿಂದ ಅಸಾಧ್ಯಕರ್ಮವನ್ನು ಮಾಡಿಸೋಣ."

"ಎಂತಹ ಕರ್ಮ?"

"ಸಪ್ತರತ್ನಮಯವಾದ ಪುಷ್ಕರಿಣಿಯನ್ನು ಮಾಡಿಸೋಣ."

ರಾಜನು ಒಳ್ಳೆಯದೆಂದು ಬೋಧಿಸತ್ತ್ವನನ್ನು ಕರೆಸಿ, "ಆಚಾರ್ಯ, ನೀನು ಉದ್ಯಾನವನ್ನು ರಚಿಸಿದೆ. ಅದರ ಕಾಂತಿಗೆ ತಕ್ಕ ಸಪ್ತರತ್ನಮಯದ ಪುಷ್ಕರಿಣಿಯನ್ನು ರಚಿಸು. ರಚಿಸಲಾರೆಯಾದರೆ, ನೀನು ಉಳಿಯುವಂತಿಲ್ಲ" ಎಂದನು.

ಬೋಧಿಸತ್ತ್ವನು "ಒಳ್ಳೆಯದು, ಮಹಾರಾಜ. ಕೈಲಾದರೆ ರಚಿಸುವೆನು" ಎಂದನು.

ಆಗ ಶಕ್ರನು ಅವನಿಗೆ ಪುಷ್ಕರಿಣಿಯನ್ನು ರಚಿಸಿದನು. ಅದಕ್ಕೆ ನೂರು ಇಳಿಯುವ ಘಟ್ಟಗಳು, ಸಾವಿರ ಮೂಲೆಗಳು. ಐದು ಬಣ್ಣದ ಪದ್ಮಗಳಿಂದ ಮುಚ್ಚಿಹೋಗಿ, ಅದು ನಂದನಪುಷ್ಕರಿಣಿಗೆ ಸಮಾನವಾಗಿತ್ತು.

ಮರುದಿವಸ ಬೋಧಿಸತ್ತ್ವನು ಅದನ್ನು ಪ್ರತ್ಯಕ್ಷವಾಗಿ ಕಂಡು, "ನಿನ್ನ ಪುಷ್ಕರಿಣಿ ರಚಿಸಿಯಾಯಿತು, ದೇವ" ಎಂದು ರಾಜನಿಗೆ ತಿಳಿಸಿದನು.

ರಾಜನು ಅದನ್ನೂ ಕಂಡು, "ಈಗೇನು ಮಾಡೋಣ?" ಎಂದು ಕಾಳಕನನ್ನು ಕೇಳಿದನು.

"ಉದ್ಯಾನದ ಕಾಂತಿಗೆ ತಕ್ಕ ಮನೆಯನ್ನು ರಚಿಸಲು ಆಜ್ಞೆ ಮಾಡು, ದೇವ."

ರಾಜನು ಬೋಧಿಸತ್ತ್ವನನ್ನು ಕರೆಸಿ, "ಆಚಾರ್ಯ, ಈ ಉದ್ಯಾನಕ್ಕೂ ಪುಷ್ಕರಿಣಿಗೂ ಅನುರೂಪವಾಗಿ ಸರ್ವದಂತಮಯವಾದ ಮನೆಯನ್ನು ರಚಿಸು. ರಚಿಸದಿದ್ದರೆ ನಿನಗೆ ಉಳಿಗಾಲವಿಲ್ಲ" ಎಂದನು.

ಆಗ ಶಕ್ರನು ಅವನಿಗಾಗಿ ಮನೆಯನ್ನೂ ರಚಿಸಿದನು.

ಬೋಧಿಸತ್ತ್ವನು ಮರುದಿವಸ ಅದನ್ನೂ ಪ್ರತ್ಯಕ್ಷವಾಗಿ ಮಾಡಿ ರಾಜನಿಗೆ ತಿಳಿಸಿದನು.

ರಾಜನು ಅದನ್ನು ಕಂಡು, "ಈಗೇನು ಮಾಡೋಣ?" ಎಂದು ಕಾಳಕನನ್ನು ಕೇಳಿದನು.

"ಮನೆಗೆ ಅನುರೂಪವಾದ ಮಣಿಯನ್ನು ರಚಿಸುವಂತೆ ಆಜ್ಞೆ ಮಾಡು, ಮಹಾರಾಜ."

ರಾಜನು ಬೋಧಿಸತ್ತ್ವನನ್ನು ಕರೆಸಿ, "ಪಂಡಿತ, ಈ ದಂತಮಯವಾದ ಮನೆಗೆ ಅನುರೂಪವಾದ ಮಣಿಯನ್ನು ರಚಿಸು. ಮಣಿಯ ಬೆಳಕಿನಲ್ಲಿ ತಿರುಗಾಡುವೆನು. ರಚಿಸಲಾರೆಯಾದರೆ, ನೀನು ಬದುಕುವಂತಿಲ್ಲ" ಎಂದನು.

ಆಗ ಶಕ್ರನು ಅವನಿಗಾಗಿ ಮಣಿಯನ್ನೂ ರಚಿಸಿದನು.

ಬೋಧಿಸತ್ತ್ವನು ಮರುದಿವಸ ಅದನ್ನೂ ಪ್ರತ್ಯಕ್ಷವಾಗಿ ಮಾಡಿ ರಾಜನಿಗೆ ತಿಳಿಸಿದನು.

ರಾಜನು ಅದನ್ನೂ ಕಂಡು, "ಈಗೇನು ಮಾಡೋಣ?" ಎಂದು ಕಾಳಕನನ್ನು ಕೇಳಿದನು.

"ಮಹಾರಾಜ, ಧರ್ಮಧ್ವಜ ಬ್ರಾಹ್ಮಣನಿಗೆ ಬಯಸಿಬಯಸಿ ದುದನ್ನು ಕೊಡುವ ದೇವತೆಯಿದೆಯೆಂದು ಕಾಣುತ್ತದೆ. ಆ ದೇವತೆ ಕೂಡ ರಚಿಸಲಾರದುದನ್ನು ಈಗ ಆಜ್ಞೆಮಾಡು. ಚತುರಂಗಗಳಿಂದ ಕೂಡಿದ ಮನುಷ್ಯನನ್ನು ದೇವತೆಯಾದರೂ ರಚಿಸಲಾರದು. ಆದ್ದರಿಂದ 'ಚತುರಂಗದಿಂದ ಕೂಡಿದಂತಹ ಉದ್ಯಾನಪಾಲನನ್ನು ನನಗೆ ಮಾಡಿ ಕೊಡು' ಎಂದು ಇವನಿಗೆ ಹೇಳು".

ರಾಜನು ಬೋಧಿಸತ್ತ್ವನನ್ನು ಕರೆಸಿ, "ಆಚಾರ್ಯ, ನೀನು ಉದ್ಯಾನವನ್ನೂ ಪುಷ್ಕರಿಣಿಯನ್ನೂ ದಂತಮಯ ಪ್ರಾಸಾದವನ್ನೂ ಅದನ್ನು ಬೆಳಗಲು ಮಣಿರತ್ನವನ್ನೂ ರಚಿಸಿದೆ. ಈಗ ನನ್ನ ಉದ್ಯಾನದ ಕಾವಲಿಗಾಗಿ ಚತುರಂಗಗಳಿಂದ ಕೂಡಿದ ಉದ್ಯಾನಪಾಲನನ್ನು ಮಾಡಿ ಕೊಡು. ಮಾಡಿಕೊಡದಿದ್ದರೆ, ನೀನು ಬದುಕುವಂತಿಲ್ಲ" ಎಂದನು.

ಬೋಧಿಸತ್ತ್ವನು "ಆಗಲಿ, ದೊರಕಿದರೆ ತಿಳಿಸುವೆನು" ಎಂದು ಮನೆಗೆ ಹೋಗಿ, ಒಳ್ಳೆಯ ಊಟ ಉಂಡು, ಮಲಗಿ, ಬೆಳಗಿನಜಾವದಲ್ಲಿ ಎಚ್ಚೆತ್ತು, ಹಾಸಿಗೆಯ ಮೇಲೆ ಕುಳಿತು, "ದೇವರಾಜನಾದ ಶಕ್ರನು ತನ್ನಿಂದ ಮಾಡಲು ಶಕ್ಯವಾದುದನ್ನು ಮಾಡಿದನು. ಆದರೆ ಚತುರಂಗ ಗಳಿಂದ ಕೂಡಿದ ಉದ್ಯಾನಪಾಲನನ್ನು ಮಾಡಲಾರನು. ಹೀಗಿರಲು, ಇತರರ ಕೈಯಲ್ಲಿ ಸಾಯುವುದಕ್ಕಿಂತ ಅರಣ್ಯದಲ್ಲಿ ಅನಾಥಮರಣವೇ ಮೇಲು" ಎಂದು ಚಿಂತಿಸಿ, ಯಾರಿಗೂ ಹೇಳದೆಯೆ ಪ್ರಾಸಾದದಿಂದ ಇಳಿದು, ಮುಖ್ಯದ್ವಾರದಿಂದಲೇ ನಗರವನ್ನು ಬಿಟ್ಟು ಹೊರಟು, ಕಾಡನ್ನು ಹೊಕ್ಕು, ಒಂದಾನೊಂದು ಮರದ ಬುಡದಲ್ಲಿ ಸಜ್ಜನರ ಧರ್ಮವನ್ನು ಧ್ಯಾನಿಸುತ್ತಾ ಕುಳಿತನು.

ಶಕ್ರನು ಆ ಕಾರಣವನ್ನು ತಿಳಿದು, ವನಚಾರಕನಂತಾಗಿ, ಬೋಧಿ ಸತ್ತ್ವನ ಬಳಿಸಾರಿ, "ಬ್ರಾಹ್ಮಣ, ನೀನು ಸುಕುಮಾರ. ಹಿಂದೆ ಎಂದೂ ದುಃಖ ಕಾಣದವನಂತೆ ಈ ಕಾಡನ್ನು ಹೊಕ್ಕು ಏನು ಮಾಡುತ್ತಾ

ಕುಳಿತಿರುವೆ?" ಎಂದು ಕೇಳುತ್ತಾ, "ನೀನು ಸುಖವಾಗಿ ಬದುಕಿದವನು. ಊರು ಬಿಟ್ಟು ಕಾಡಿಗೆ ಬಂದಿರುವೆ. ಏಕಾಕಿಯಾಗಿ ಮರದ ಬುಡದಲ್ಲಿ ಖಿನ್ನನಾಗಿ ಕುಳಿತು ಏನು ಚಿಂತಿಸುವೆ?" ಎಂದನು.

ಬೋಧಿಸತ್ತ್ವನು ಅದನ್ನು ಕೇಳಿ, "ನಾನು ಸುಖವಾಗಿ ಬದುಕಿದವನು. ಊರು ಬಿಟ್ಟು ಕಾಡಿಗೆ ಬಂದಿರುವೆನು. ಏಕಾಕಿಯಾಗಿ ಮರದ ಬುಡದಲ್ಲಿ ಖಿನ್ನನಾಗಿ ಕುಳಿತು ಸಜ್ಜನರ ಧರ್ಮವನ್ನು ನೆನೆಯುತ್ತಿರುವೆನು" ಎಂದನು.

ಆಗ ಶಕ್ರನು "ಹಾಗಾದರೆ, ಬ್ರಾಹ್ಮಣ, ಈ ಸ್ಥಳದಲ್ಲಿ ಏಕೆ ಕುಳಿತಿರುವೆ?" ಎಂದನು.

"ರಾಜನು ಚತುರಂಗಗಳಿಂದ ಕೂಡಿದ ಉದ್ಯಾನಪಾಲನನ್ನು ತರ ಹೇಳುವನು. ಅಂತಹವನನ್ನು ಪಡೆಯುವುದು ಶಕ್ಯವಿಲ್ಲ. ಅದಕ್ಕೆ ನಾನು 'ಇತರರ ಕೈಯಲ್ಲೇಕೆ ಸಾಯಬೇಕು? ಅರಣ್ಯಕ್ಕೆ ಹೋಗಿ ಅನಾಥ ಮರಣ ಸಾಯುವೆನು' ಎಂದು ಚಿಂತಿಸಿ, ಇಲ್ಲಿ ಬಂದು ಕುಳಿತಿರುವೆನು".

"ಬ್ರಾಹ್ಮಣ, ನಾನು ದೇವರಾಜನಾದ ಶಕ್ರ. ನಿನ್ನ ಉದ್ಯಾನ ಮೊದಲಾದವೆಲ್ಲಾ ನನ್ನಿಂದ ಆದವು. ಚತುರಂಗಗಳಿಂದ ಕೂಡಿದ ಉದ್ಯಾನಪಾಲನನ್ನು ಮಾಡುವುದು ಶಕ್ಯವಿಲ್ಲ. ಆದರೆ ನಿಮ್ಮ ರಾಜನ ತಲೆಯೊಡವೆಗಳನ್ನು ಮಾಡುವ ಛತ್ರಪಾಣಿಯೆಂಬವನು ಚತುರಂಗಗಳಿಂದ ಕೂಡಿದವನು. ಉದ್ಯಾನಪಾಲನು ಬೇಕಾಗಿದ್ದರೆ, ಅವನನ್ನು ಉದ್ಯಾನಪಾಲನನ್ನಾಗಿ ಮಾಡಲು ಹೇಳು".

ಶಕ್ರನು ಹೀಗೆಂದು ಬೋಧಿಸತ್ತ್ವನಿಗೆ ಬುದ್ಧಿವಾದ ಹೇಳಿ, "ಹೆದರಬೇಡ" ಎಂದು ಸಂತೈಸಿ, ತಾನು ದೇವಪುರಕ್ಕೇ ಹೋದನು.

ಬೋಧಿಸತ್ತ್ವನು ಮನೆಗೆ ಹೋಗಿ, ಬೆಳಗಿನ ಊಟವನ್ನು ತಿಂದು, ರಾಜದ್ವಾರಕ್ಕೆ ಹೋಗಿ, ಛತ್ರಪಾಣಿಯನ್ನು ಅಲ್ಲೇ ಕಂಡು, ಕೈ ಹಿಡಿದುಕೊಂಡು, "ಅಯ್ಯಾ ಛತ್ರಪಾಣಿ, ನೀನು ಚತುರಂಗಗಳಿಂದ ಕೂಡಿದವನೆ?" ಎಂದು ಕೇಳಿದನು.

"ನಾನು ಚತುರಂಗಗಳಿಂದ ಕೂಡಿದವನೆಂದು ನಿನಗೆ ಯಾರು ತಿಳಿಸಿದರು?"

“ ದೇವರಾಜನಾದ ಶಕ್ರ”.

“ ಏತಕ್ಕೆ ತಿಳಿಸಿದನು ? ”

ಬೋಧಿಸತ್ತ್ವನು “ ಈ ಕಾರಣದಿಂದ ” ಎಂದು ಎಲ್ಲವನ್ನೂ ತಿಳಿಸಿದನು.

ಅವನು “ ಹೌದು. ನಾನು ಚತುರಂಗಗಳಿಂದ ಕೂಡಿದವನು ” ಎಂದನು.

ಆಗ ಬೋಧಿಸತ್ತ್ವನು ಅವನ ಕೈಗಳನ್ನು ಹಿಡಿದುಕೊಂಡು ರಾಜನ ಸಮೀಪಕ್ಕೆ ಹೋಗಿ, “ ಮಹಾರಾಜ, ಈ ಛತ್ರಪಾಣಿ ಚತುರಂಗಗಳಿಂದ ಕೂಡಿದವನು. ಉದ್ಯಾನಪಾಲನು ಬೇಕಾಗಿದ್ದರೆ ಇವನನ್ನು ಉದ್ಯಾನಪಾಲನನ್ನಾಗಿ ಮಾಡು ” ಎಂದನು.

ಆಗ ರಾಜನು ಅವನನ್ನು “ ನೀನು ಚತುರಂಗಗಳಿಂದ ಕೂಡಿದವನೆ ? ” ಎಂದು ಕೇಳಿದನು.

“ ಹೌದು, ಮಹಾರಾಜ ”.

“ ಯಾವ ಚತುರಂಗಗಳಿಂದ ಕೂಡಿದವನು ನೀನು ? ”

“ ದೇವ, ನನಗೆ ಅಸೂಯೆಯಿಲ್ಲ. ನಾನು ಮದ್ಯಪಾನ ಮಾಡುವುದಿಲ್ಲ. ನನಗೆ ಯಾವುದರಲ್ಲೂ ಸ್ನೇಹವಿಲ್ಲ. ನನಗೆ ಯಾವುದರಲ್ಲೂ ಕ್ರೋಧವಿಲ್ಲ”.

ಆಗ ರಾಜನು ಅವನನ್ನು “ ಛತ್ರಪಾಣಿ, ನಿನಗೆ ಅಸೂಯೆಯಿಲ್ಲವೆಂದು ಹೇಳುವೆಯಾ ? ” ಎಂದನು.

“ ಹೌದು, ದೇವ, ನನಗೆ ಅಸೂಯೆಯಿಲ್ಲ ”.

“ ಏನು ಆಧಾರ ಕಂಡು, ನೀನು ಅಸೂಯೆಯಿಲ್ಲದವನಾದೆ ? ”

“ ಕೇಳು, ದೇವ. ನಾನು ಹಿಂದೆ ನಿನ್ನಂತೆಯೇ ರಾಜನಾಗಿದ್ದೆ. ಸ್ತ್ರೀಯ ಕಾರಣದಿಂದ ಪುರೋಹಿತನನ್ನು ಬಂಧನಗೊಳಿಸಿದೆ. ಅವನು ನನಗೆ ಮೇಲ್ಮೆಯನ್ನು ಉಂಟುಮಾಡಿದನು. ಅದರಿಂದ ನಾನು ಅಸೂಯೆಯಿಲ್ಲದವನಾದೆ ” ಎಂದು ತನಗೆ ಅಸೂಯೆಯಿಲ್ಲದುದರ ಕಾರಣವನ್ನು ಅವನು ಹೇಳಿದನು.

ಆಗ ರಾಜನು ಅವನನ್ನು "ಅಯ್ಯಾ ಛತ್ರಪಾಣಿ, ಏನು ಆಧಾರ ಕಂಡು, ನೀನು ಮದ್ಯಪಾನ ಮಾಡದವನಾದೆ?" ಎಂದು ಪ್ರಶ್ನಿಸಿದನು.

ಅವನು ಆ ಕಾರಣವನ್ನು ತಿಳಿಸುತ್ತಾ, "ಮಹಾರಾಜ, ನಾನು ಹಿಂದೆ ಮದ್ಯದ ಮದದಿಂದ ಮಗನ ಮಾಂಸವನ್ನು ತಿಂದೆ. ಆ ಶೋಕ ತಟ್ಟಿದುದರಿಂದ ನಾನು ಮದ್ಯಪಾನವನ್ನು ಬಿಟ್ಟುಬಿಟ್ಟೆ" ಎಂದನು.

ಆಗ ರಾಜನು ಅವನನ್ನು "ಅಯ್ಯಾ, ಮತ್ತೇನು ಆಧಾರವನ್ನು ಕಂಡು ನೀನು ಸ್ನೇಹವಿಲ್ಲದವನಾದೆ" ಎಂದು ಪ್ರಶ್ನಿಸಿದನು.

ಅವನು ಅದರ ಕಾರಣವನ್ನು ತಿಳಿಸುತ್ತಾ, "ರಾಜ, ನಾನು ಹಿಂದೆ ಕೃತವಾಸನೆಂಬ ರಾಜನಾಗಿದ್ದೆ. ನನ್ನ ಮಗನು ಪ್ರತ್ಯೇಕಬುದ್ಧನ ಪಾತ್ರೆಯನ್ನು ಒಡೆದು, ಸತ್ತನು. ಆ ಕಾರಣದಿಂದ ನಾನು ಸ್ನೇಹ ವಿಲ್ಲದವನಾದೆ" ಎಂದನು.

ಆಗ ರಾಜನು ಅವನನ್ನು "ಅಯ್ಯಾ, ಮತ್ತೇನು ಆಧಾರವನ್ನು ಕಂಡು ಕ್ರೋಧವಿಲ್ಲದವನಾದೆ?" ಎಂದು ಪ್ರಶ್ನಿಸಿದನು.

ಅವನು ಅದರ ಕಾರಣವನ್ನು ತಿಳಿಸುತ್ತಾ, "ನಾನು ಹಿಂದೆ ಅರಕ ನೆಂಬವನಾಗಿ ಏಳು ವರ್ಷ ಮೈತ್ರೀಚಿತ್ತವನ್ನು ಬೆಳೆಸಿದೆ, ಏಳು ಕಲ್ಪ ಗಳು ಬ್ರಹ್ಮಲೋಕದಲ್ಲಿದ್ದೆ. ಅದರಿಂದ ನಾನು ಕ್ರೋಧವಿಲ್ಲದವನಾದೆ." ಎಂದನು.

ಹೀಗೆ ಛತ್ರಪಾಣಿ ತನ್ನ ಚತುರಂಗಗಳನ್ನು ಹೇಳಲು, ರಾಜನು ಪರಿಷೆಗೆ ಸನ್ನೆಮಾಡಿದನು. ಅದೇ ಕ್ಷಣದಲ್ಲಿಯೇ ಅಮಾತ್ಯರೂ ಬ್ರಾಹ್ಮಣ ಗೃಹಪತಿಗಳೇ ಮೊದಲಾದವರೂ ಮೇಲೆದ್ದು, "ಎಲವೋ, ಲಂಚ ತಿನ್ನುವವನೆ! ಕೆಟ್ಟ ಕಳ್ಳ! ನಿನಗೆ ಲಂಚ ದೊರಕದೆ, ಪಂಡಿತನನ್ನು ನಿಂದಿಸಿ; ಕೊಲ್ಲಲು ಬಯಸಿದೆಯಾ!" ಎಂದು ಕಾಳಕನನ್ನು ಕೈಕಾಲು ಗಳಿಂದ ಹಿಡಿದು, ರಾಜನ ಮನೆಯಿಂದ ಕೆಳಗಿಳಿಸಿ, ಸಿಕ್ಕಿಸಿಕ್ಕಿದ ಕಲ್ಲು ಕೋಲುಗಳಿಂದಲೇ ತಲೆಯೊಡೆದು ಸಾಯಿಸಿ, ಕಾಲು ಹಿಡಿದು ಎಳೆಯುತ್ತಾ ತಿಪ್ಪೆಯ ಮೇಲೆ ಎಸೆದರು.

ಅಂದಿನಿಂದ ರಾಜನು ಧರ್ಮದಿಂದ ರಾಜ್ಯವಾಳುತ್ತಾ ಕರ್ಮಕ್ಕೆ ಅನುಸಾರವಾಗಿ ಹೋದನು.

# ವಿವರ


| ಜಾತಕಗಳ ಹೆಸರು | ಪುಟ |
|---|---|
| ಮಣಿಕಂಠ ... | ೧ |
| ಅಸದೃಶ ... | ೪ |
| ಗೃಧ್ರ ... | ೯ |
| ತಿಲಮುಷ್ಟಿ ... | ೧೨ |
| ಕಾಮ ನೀತ ... | ೧೭ |
| ಸೃಗಾಲ ... | ೨೧ |
| ಉರಗ ... | ೨೪ |
| ಕೇಳೀಶೀಲ ... | ೨೬ |
| ವೀರಕ ... | ೨೮ |
| ಗೂಢಪ್ರಾಣ ... | ೩೦ |
| ಕಿಂಶುಕೋಪಮ ... | ೩೧ |
| ಶ್ರೀ ... | ೩೨ |
| ಮಣಿಚೋರ ... | ೩೬ |
| ಮತ್ಸ್ಯೋದ್ದಾನ ... | ೪೦ |
| ಬಲಾಹಾಶ್ವ ... | ೪೪ |
| ತಿಂಡುಕ ... | ೪೭ |

| ಜಾತಕಗಳ ಹೆಸರು | ಪುಟ |
|---|---|
| ಇಂದ್ರಸಮಾನಗೋತ್ರ | ೫೦ |
| ಕಲಾಯುಮುಷ್ಟಿ ... | ೫೨ |
| ಭದ್ರಘಟ ... | ೫೪ |
| ಮಹಾ ವಾಣಿಜ ... | ೫೫ |
| ಜವನ ಹಂಸ ... | ೫೮ |
| ಧರ್ಮ ... | ೬೫ |
| ತಂಡುಲನಾಳಿ ... | ೬೭ |
| ಸಂಜೀವ ... | ೭೦ |
| ದೇವಧರ್ಮ ... | ೭೧ |
| ಅನುಶಾಸಿಕಾ ... | ೭೬ |
| ಅಕಾಲರಾವಿ ... | ೭೭ |
| ಮಹಾಶೀಲವಂತ ... | ೭೮ |
| ತ್ರಿಪರ್ಯಸ್ತ ... | ೮೭ |
| ವಾತಮೃಗ ... | ೮೯ |
| ವರ್ತಕ ... | ೯೧ |

# ಮಣಿಕಂಠ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಮಹಾವಿಭವದ ಬ್ರಾಹ್ಮಣಕುಲದಲ್ಲಿ ಜನ್ಮ ತಾಳಿದನು. ಅವನು ಓಡಿಯಾಡುತ್ತಾ ತಿರುಗುವ ವೇಳೆಗೆ ಇನ್ನೊಂದು ಪುಣ್ಯವಂತ ಜೀವ ಅವನ ತಾಯ ಹೊಟ್ಟೆಯಲ್ಲಿ ಜನ್ಮ ತಾಳಿತು.

ಆ ಇಬ್ಬರು ಸೋದರರೂ ವಯಸ್ಸು ಬಂದ ಮೇಲೆ ತಾಯಿತಂದೆ ಕಾಲವಾದುದಕ್ಕೆ ನೊಂದು, ಮನೆಬಿಟ್ಟು ಹೋಗಿ ಋಷಿಗಳಾಗಿ, ಗಂಗಾತೀರದಲ್ಲಿ ಪರ್ಣಶಾಲೆ ಮಾಡಿಕೊಂಡು ವಾಸಿಸಿದರು. ಅವರಲ್ಲಿ ಹಿರಿಯವನ ಪರ್ಣಶಾಲೆ ಮೇಲುಗಂಗೆಯ ಬಳಿ ಇತ್ತು, ಕಿರಿಯವನದು ಕೆಳಗಂಗೆಯ ಬಳಿ ಇತ್ತು.

ಆಗ ಒಂದು ದಿವಸ ಮಣಿಕಂಠನೆಂಬ ನಾಗರಾಜನು ಮನೆಯಿಂದ ಹೊರಗೆಹೊರಟು, ಗಂಗಾತೀರದಲ್ಲಿ ಹುಡುಗನ ವೇಷದಿಂದ ತಿರುಗುತ್ತಾ ಕಿರಿಯವನ ಆಶ್ರಮಕ್ಕೆ ಹೋಗಿ, ವಂದಿಸಿ, ಒಂದು ಕಡೆ ಕುಳಿತನು. ಅವರು ಒಬ್ಬರೊಡನೆ ಒಬ್ಬರು ಸಂತೋಷದ ಮಾತುಗಳನ್ನು ಆಡಿ ವಿಶ್ವಾಸಿಗಳಾದರು, ಒಬ್ಬರನ್ನು ಬಿಟ್ಟು ಒಬ್ಬರು ಇರಲಾರದಾದರು.

ಮಣಿಕಂಠನು ಆಗಾಗ್ಗೆ ಕಿರಿಯತಾಪಸನ ಬಳಿಗೆ ಬಂದು, ಮಾತನಾಡುತ್ತಾ ಕುಳಿತು, ಹೊರಡುವಾಗ ತಾಪಸನ ಮೇಲಿನ ಸ್ನೇಹದಿಂದ ತನ್ನ ರೂಪುಬಿಟ್ಟು ಹಾವಿನ ಸುರುಳಿಗಳಿಂದ ತಾಪಸನನ್ನು ಸುತ್ತಿ ತಬ್ಬಿಕೊಂಡು, ತಲೆಯಮೇಲೆ ದೊಡ್ಡ ಹೆಡೆಯನ್ನು ಧರಿಸಿ, ಸ್ವಲ್ಪ ನಿದ್ರೆ ಮಾಡಿ, ಸ್ನೇಹವನ್ನು ತೃಪ್ತಿಪಡಿಸಿಕೊಂಡು, ಶರೀರವನ್ನು ಸಡಿಲಿಸಿ, ತಾಪಸನಿಗೆ ವಂದಿಸಿ, ತನ್ನ ಮನೆಗೆ ಹೋಗುತ್ತಿದ್ದನು.

ತಾಪಸನು ಹಾವಿನ ಭಯದಿಂದ ಕೃಶವಾದನು, ಮಂಕಾದನು, ಕಾಂತಿಹೀನನಾದನು, ಹಳದಿಯ ಬಣ್ಣವಾದನು. ಅವನ ಮೈಮೇಲೆ ರಕ್ತನಾಳಗಳು ಎದ್ದು ಕಾಣುತ್ತಿದ್ದವು.

ಕಿರಿಯವನು ಒಂದು ದಿನ ಅಣ್ಣನ ಬಳಿಗೆ ಹೋದನು.

ಅವನು "ನೀನು ಏಕೆ ಹೀಗಾದೆ?" ಎಂದು ಕೇಳಿದನು.

ಕಿರಿಯವನು ನಡೆದುದೆಲ್ಲವನ್ನೂ ತಿಳಿಸಲು, "ಏನು? ನೀನು ಆ ನಾಗರಾಜನು ಪುನಃ ಬರಬೇಕೆನ್ನುವೆಯ? ಬೇಡವೆನ್ನುವೆಯ?" ಎಂದನು.

"ಅವನು ಬರುವುದು ನನಗೆ ಇಷ್ಟವಿಲ್ಲ."

"ಆ ನಾಗರಾಜ ನಿನ್ನ ಬಳಿ ಬರುವಾಗ ಏನು ಅಲಂಕಾರ ಧರಿಸಿ ಕೊಂಡು ಬರುವನು?"

"ಒಂದು ಮಣಿರತ್ನವನ್ನು ಧರಿಸಿಕೊಂಡು ಬರುವನು."

"ಹಾಗಾದರೆ, ಆ ನಾಗರಾಜ ನಿನ್ನ ಬಳಿ ಬಂದು ಕುಳಿತು ಕೊಳ್ಳುವುದರೊಳಗೇ 'ಮಣಿಯನ್ನು ನನಗೆ ಕೊಡು' ಎಂದು ಬೇಡು. ಇದರಿಂದ ಆ ನಾಗ ನಿನ್ನ ಸುತ್ತಾ ತನ್ನ ಮೈಯನ್ನು ಬಳಸದೆಯೇ ಹೋಗುವನು. ಮರುದಿವಸ ಆಶ್ರಮದ್ವಾರದಲ್ಲಿ ನಿಂತು, ಅವನು ಬರುವಾಗಲೇ ಅದನ್ನು ಬೇಡು. ಮೂರನೆಯ ದಿವಸ ಗಂಗಾತೀರದಲ್ಲಿ ನಿಂತು, ಅವನು ನೀರಿನಿಂದ ಏಳುವಾಗಲೇ ಅದನ್ನು ಬೇಡು. ಹೀಗೆ ಮಾಡಿದರೆ, ಅವನು ಪುನಃ ನಿನ್ನ ಬಳಿ ಬರುವುದಿಲ್ಲ."

ತಾಪಸನು ಒಳ್ಳೆಯದೆಂದು ಹೇಳಿ, ತನ್ನ ಪರ್ಣಶಾಲೆಗೆ ಹೋದನು.

ಮರುದಿವಸ ಆ ನಾಗರಾಜ ಬಂದು ನಿಂತೊಡನೆಯೇ "ನಿನ್ನ ಅಲಂಕಾರಮಣಿಯನ್ನು ನನಗೆ ಕೊಡು" ಎಂದು ಬೇಡಿದನು. ಅವನು ಕುಳಿತುಕೊಳ್ಳದೆಯೇ ಪಲಾಯನಮಾಡಿದನು.

ಕಿರಿಯವನು ಎರಡನೆಯ ದಿವಸ ಆಶ್ರಮದ್ವಾರದಲ್ಲಿ ನಿಂತು, ಆ ನಾಗರಾಜನು ಬರುತ್ತಿರುವಾಗಲೇ "ನಿನ್ನೆ ಮಣಿರತ್ನವನ್ನು ನನಗೆ ಕೊಡಲಿಲ್ಲ. ಈ ದಿನ ಅದು ನನಗೆ ದೊರಕಬೇಕು" ಎಂದನು. ನಾಗರಾಜನು ಆಶ್ರಮದೊಳಕ್ಕೆ ಬರದೆಯೇ ಓಡಿಹೋದನು.

ಮೂರನೆಯ ದಿವಸ, ನಾಗನು ನೀರಿನಿಂದ ಏಳುತ್ತಿರುವಾಗಲೇ ಕಿರಿಯವನು "ನಾನು ನಿನ್ನನ್ನು ಬೇಡುತ್ತಿರುವುದು ಇದು ಮೂರನೆಯ ದಿವಸ. ಆದ್ದರಿಂದ ನನಗೆ ಈ ಮಣಿರತ್ನ ಕೊಡು" ಎಂದನು.

ನಾಗರಾಜನು ನೀರಿನಲ್ಲಿ ನಿಂತಂತೆಯೇ ತಾಪಸನ ಪ್ರಾರ್ಥನೆಯನ್ನು ತಿರಸ್ಕರಿಸುತ್ತಾ "ಈ ಮಣಿಯಿಂದ ನನಗೆ ಬಹಳ ಅನ್ನಪಾನ ಲಭಿಸುತ್ತಿದೆ. ನಾನು ಇದನ್ನು ನಿನಗೆ ಕೊಡುವುದಿಲ್ಲ. ನೀನು ಅತಿಯಾಗಿ ಬೇಡುವೆ. ನಾನು ಇನ್ನು ನಿನ್ನ ಆಶ್ರಮಕ್ಕೆ ಬರುವುದಿಲ್ಲ. ಹದಗೊಳಿಸಿ ಹರಿತಮಾಡಿದ ಕತ್ತಿಯನ್ನು ಹಿಡಿದು ಹುಡುಗರು ಹೆದರಿಸುವಂತೆ ನೀನು ಮಣಿಯನ್ನು ಬೇಡಿ ನನ್ನನ್ನು ಹೆದರಿಸುತ್ತಿರುವೆ. ನಾನು ಇದನ್ನು ನಿನಗೆ ಕೊಡುವುದಿಲ್ಲ. ನೀನು ಅತಿಯಾಗಿಬೇಡುವೆ. ನಾನು ಇನ್ನು ನಿನ್ನ ಆಶ್ರಮಕ್ಕೆ ಬರುವುದಿಲ್ಲ" ಎಂದನು. ಆ ನಾಗರಾಜನು ಹೀಗೆ ಹೇಳುತ್ತಾ ನೀರಿನಲ್ಲಿ ಮುಳುಗಿ, ತನ್ನ ನಾಗಭವನಕ್ಕೆ ಹೋಗಿ, ಪುನಃ ಹಿಂದಿರುಗಲಿಲ್ಲ.

ಆಗ ಆ ತಾಪಸನು ಕಣ್ಣಿಗೆ ಚೆನ್ನಾದ ಆ ನಾಗರಾಜನನ್ನು ಕಾಣದುದರಿಂದ ಇನ್ನೂ ಕೃಶವಾದನು, ಮಂಕಾದನು, ಕಾಂತಿಹೀನನಾದನು, ಹಳದಿಯ ಬಣ್ಣವಾದನು. ಮೈತುಂಬ ರಕ್ತನಾಳಗಳು ಇನ್ನೂ ಎದ್ದು ಕಂಡವು.

ಆಗ ಹಿರಿಯತಾಪಸನು "ಕಿರಿಯವನು ಹೇಗಿರುವನೋ ನೋಡೋಣ" ಎಂದು ಅವನ ಬಳಿ ಬಂದು, ಅವನು ಇನ್ನೂ ಪಾಂಡುರೋಗಿಯಾದುದನ್ನು ಕಂಡು, "ಇದೇಕೆ? ನೀನು ಇನ್ನೂ ಪಾಂಡುರೋಗಿಯಾದೆ?" ಎಂದನು.

"ದರ್ಶನೀಯನಾದ ಆ ನಾಗರಾಜನನ್ನು ಕಾಣದುದರಿಂದ."

ಆಗ ಹಿರಿಯವನು "ಈ ತಾಪಸನು ಆ ನಾಗರಾಜನನ್ನು ಬಿಟ್ಟಿರಲಾರ" ಎಂದು ಕಂಡುಕೊಂಡು, "ಯಾರ ಪ್ರೀತಿಯನ್ನು ಆಶಿಸುವೆಯೋ ಅವರಲ್ಲಿ ಬೇಡಬೇಡ. ಅತಿಯಾಗಿ ಯಾಚಿಸುವುದರಿಂದ ದ್ವೇಷವುಂಟಾಗುವುದು. ಬ್ರಾಹ್ಮಣನು ನಾಗರಾಜನ ಮಣಿ ಬೇಡಿದನು. ಅಂದಿನಿಂದ ಅವನು ಕಣ್ಣಿಗೆ ಮರೆಯಾದನು" ಎಂದನು.

ಹೀಗೆಂದು ಕಿರಿಯವನಿಗೆ ಹೇಳಿ, "ಅದಕ್ಕಾಗಿ ಇನ್ನು ಶೋಕಪಡಬೇಡ" ಎಂದು ಸಂತೈಸಿ, ಹಿರಿಯಣ್ಣನು ತನ್ನ ಆಶ್ರಮಕ್ಕೆ ಹೋದನು. ಅದಾದ ಅನಂತರ ಆ ಇಬ್ಬರು ಸೋದರರೂ ಅಭಿಜ್ಞೆಗಳನ್ನೂ ಸಮಾಪತ್ತಿಗಳನ್ನೂ ಉಂಟುಮಾಡಿಕೊಂಡು ಬ್ರಹ್ಮಲೋಕ ಪರಾಯಣರಾದರು.

## ಅಸದೃಶ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಅವನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಜನ್ಮ ತಾಳಿದನು. ಅವನು ಸುಖವಾಗಿ ಹುಟ್ಟಿ, ಅವನಿಗೆ ಹೆಸರಿಡುವ ದಿವಸ ಅಸದೃಶ ಕುಮಾರನೆಂದು ಹೆಸರಿಟ್ಟರು. ಅವನು ಓಡಾಡುತ್ತಾ ತಿರುಗುವ ವೇಳೆಗೆ ಇನ್ನೊಬ್ಬ ಪುಣ್ಯವಂತನು ದೇವಿಯ ಹೊಟ್ಟೆಯಲ್ಲಿ ಜನ್ಮತಾಳಿದನು. ಅವನೂ ಸುಖವಾಗಿ ಹುಟ್ಟಿ, ಅವನಿಗೆ ಹೆಸರಿಡುವ ದಿವಸ ಬ್ರಹ್ಮದತ್ತ ಕುಮಾರನೆಂದು ಹೆಸರಿಟ್ಟರು.

ಅವರಲ್ಲಿ ಬೋಧಿಸತ್ತ್ವನು ಹದಿನಾರನೆಯ ವರ್ಷದಲ್ಲಿ ತಕ್ಷಶಿಲೆಗೆ ಹೋಗಿ, ಲೋಕವಿಖ್ಯಾತನಾದ ಆಚಾರ್ಯನ ಬಳಿಯಲ್ಲಿ ಮೂರು ವೇದಗಳನ್ನೂ ಹದಿನೆಂಟು ವಿದ್ಯೆಗಳನ್ನೂ ಕಲಿತು, ಬಾಣಬಿಡುವುದರಲ್ಲಿ ಅಸದೃಶನಾಗಿ ವಾರಾಣಸಿಗೆ ಹಿಂದಿರುಗಿ ಬಂದನು.

ರಾಜನು ಸಾಯುವಾಗ "ಅಸದೃಶಕುಮಾರನಿಗೆ ರಾಜ್ಯ ಕೊಟ್ಟು, ಬ್ರಹ್ಮದತ್ತನಿಗೆ ಉಪರಾಜ್ಯ ಕೊಡಿರಿ" ಎಂದು ಹೇಳಿ, ಕಾಲವಾದನು. ಅವನು ಕಾಲವಾಗಲು, ಬೋಧಿಸತ್ತ್ವನು ತನಗೆ ರಾಜ್ಯವನ್ನು ಕೊಡುವಾಗ "ನನಗೆ ರಾಜ್ಯ ಬೇಕಾಗಿಲ್ಲ" ಎಂದು ಒಲ್ಲದೆಹೋದನು. ಬ್ರಹ್ಮದತ್ತನಿಗೇ ರಾಜ್ಯಾಭಿಷೇಕ ಮಾಡಿದರು. ಬೋಧಿಸತ್ತ್ವನು "ನನಗೆ ಯಶಸ್ಸು ಬೇಕಾಗಿಲ್ಲ" ವೆಂದು ಯಾವುದಕ್ಕೂ ಇಷ್ಟಪಡಲಿಲ್ಲ. ಚಿಕ್ಕವನು ರಾಜ್ಯವಾಳುತ್ತಿರಲು ತಾನು ಸಹಜವಾಗಿ ರಾಜನಂತೆಯೇ ಇದ್ದನು.

ರಾಜನ ಪಾದಸೇವಕರು "ಅಸದೃಶಕುಮಾರನು ರಾಜ್ಯವನ್ನು ಆಶಿಸುವನು" ಎಂದು ಹೇಳುತ್ತಾ ರಾಜನ ಬಳಿ ಬೋಧಿಸತ್ತ್ವನನ್ನು ದೂರಿದರು. ಅವನು ಅವರ ಮಾತನ್ನೇ ಹಿಡಿದು ಮನಸ್ಸು ಮುರಿದವನಾಗಿ, "ನನ್ನ ಅಣ್ಣನನ್ನು ಹಿಡಿಯಿರಿ" ಎಂದು ಜನರನ್ನು ಅಟ್ಟಿದನು.

ಆಗ ಬೋಧಿಸತ್ತ್ವನ ಹಿತಕಾರಿಯೊಬ್ಬನು ಅದನ್ನು ಬೋಧಿಸತ್ತ್ವನಿಗೆ ತಿಳಿಸಿದನು. ಬೋಧಿಸತ್ತ್ವನು ತಮ್ಮನ ಮೇಲೆ ಕೋಪಗೊಂಡು, ಬೇರೆ ರಾಷ್ಟ್ರಕ್ಕೆ ಹೋಗಿ, "ಬಿಲ್ಗಾರನೊಬ್ಬನು ಬಂದು ರಾಜದ್ವಾರದಲ್ಲಿ ನಿಂತಿರುವನು" ಎಂದು ರಾಜನಿಗೆ ಹೇಳಿಕಳಿಸಿದನು.

ರಾಜನು " ಎಷ್ಟು ಸಂಬಳ ಕೇಳುವನು ? " ಎಂದನು.

" ಒಂದು ವರ್ಷಕ್ಕೆ ನೂರು ಸಾವಿರ."

" ಒಳ್ಳೆಯದು. ಬರಲಿ."

ಅವನು ಬಂದು ಸಮೀಪದಲ್ಲಿ ನಿಲ್ಲಲು, " ನೀನು ಬಿಲ್ಗಾರನೋ ?" ಎಂದು ರಾಜನು ಪ್ರಶ್ನಿಸಿದನು.

" ಹೌದು, ದೇವ."

" ಒಳ್ಳೆಯದು. ನನ್ನನ್ನು ಸೇವಿಸು. "

ಅವನು ಅಂದಿನಿಂದ ರಾಜನ ಸೇವೆಗೆ ನಿಂತನು.

ಅವನಿಗೆ ಕೊಡುವ ಸಂಬಳ ಕಂಡು, " ಇವನಿಗೆ ಅತಿ ಹೆಚ್ಚು ದೊರಕುವುದು " ಎಂದು ಹಳೆಯ ಬಿಲ್ಗಾರರು ಗೊಣಗಿದರು.

ಆಗ ಒಂದು ದಿವಸ ರಾಜನು ಉದ್ಯಾನಕ್ಕೆ ಹೋಗಿ, ಮಂಗಲ ಶಿಲಾಪಟ್ಟದ ಸಮೀಪದಲ್ಲಿ ಬಟ್ಟೆಯ ತೆರೆ ಹಾಕಿಸಿ, ಮಾವಿನ ಮರದ ಬುಡದಲ್ಲಿ ದೊಡ್ಡ ಹಾಸಿಗೆಯ ಮೇಲೆ ಮಲಗಿ, ಮೇಲೆ ನೋಡುತ್ತಾ, ಮರದ ತುದಿಯಲ್ಲಿ ಒಂದು ಮಾವಿನ ಗೊಂಚಲನ್ನು ಕಂಡು, " ಇದನ್ನು ಮೇಲೇರಿ ಪಡೆಯುವುದು ಶಕ್ಯವಿಲ್ಲ" ಎಂದು ಬಿಲ್ಗಾರರಿಗೆ ಹೇಳಿಕಳಿಸಿ, " ಈ ಮಾವಿನ ಗೊಂಚಲನ್ನು ಬಾಣದಿಂದ ಕತ್ತರಿಸಿ ಬೀಳಿಸಲು ಆಗುವುದೆ ? " ಎಂದನು.

" ಇದು ನಮಗೆ ದೊಡ್ಡದಲ್ಲ. ದೇವರು ಅನೇಕ ಸಲ ನಮ್ಮ ಕೆಲಸವನ್ನು ಹಿಂದೆ ನೋಡಿಯಾಗಿದೆ. ಈಗ ಬಂದ ಬಿಲ್ಗಾರನು ನಮಗಿಂತ ಹೆಚ್ಚು ಪಡೆಯುವನು. ಅವನಿಂದ ಬೀಳಿಸಬಹುದು."

ರಾಜನು ಬೋಧಿಸತ್ತ್ವನಿಗೆ ಹೇಳಿಕಳಿಸಿ, " ಅಪ್ಪ, ಇದನ್ನು ಬೀಳಿಸಲು ಆಗುವುದೆ ? " ಎಂದು ಪ್ರಶ್ನಿಸಿದನು.

" ಆಗುವುದು, ಮಹಾರಾಜ. ಅವಕಾಶ ದೊರಕಿದರೆ ಆಗುವುದು."

" ಎಂತಹ ಅವಕಾಶ ? "

" ನಿನ್ನ ಹಾಸಿಗೆಯಿರುವ ಅವಕಾಶ."

ರಾಜನು ಹಾಸಿಗೆಯನ್ನು ತೆಗೆಸಿ ಅವಕಾಶ ಮಾಡಿಸಿದನು.

ಬೋಧಿಸತ್ತ್ವನ ಕೈಯಲ್ಲಿ ಬಿಲ್ಲಿರಲಿಲ್ಲ, ಅದನ್ನು ಉಡುಪಿನ ಒಳಗೆ ಸನ್ನಾಹ ಮಾಡಿಕೊಂಡು ತಿರುಗಾಡುತ್ತಿದ್ದನು. ಆದ್ದರಿಂದ "ನನಗೆ ತೆರೆ ದೊರಕಿದರೆ ಒಳ್ಳೆಯದು" ಎಂದನು. ರಾಜನು ಆಗಲೆಂದು ತೆರೆಯನ್ನು ತರಿಸಿ ಸುತ್ತಲೂ ಇಡಿಸಿದನು.

ಬೋಧಿಸತ್ತ್ವನು ತೆರೆಯೊಳಕ್ಕೆ ಪ್ರವೇಶಿಸಿ, ಮೇಲೆ ಹೊದೆದಿದ್ದ ಬಿಳಿಯ ವಸ್ತ್ರವನ್ನು ತೆಗೆದು, ಒಂದು ಕೆಂಪು ಬಟ್ಟೆಯನ್ನು ಉಟ್ಟು, ಕಚ್ಚೆ ಬಿಗಿದು, ಒಂದು ಕೆಂಪು ಬಟ್ಟೆಯನ್ನು ಹೊಟ್ಟೆಗೆ ಕಟ್ಟಿ, ಜೋಡಿಸಿದ್ದ ಖಡ್ಗವನ್ನು ಚೀಲದಿಂದ ಹೊರಗೆಳೆದು ಎಡಗಡೆ ಧರಿಸಿ, ಚಿನ್ನದ ಕಂಚುಕವನ್ನು ತೊಟ್ಟು, ಬಿಲ್ಲಿನ ಕೊಳವೆಯನ್ನು ಬೆನ್ನಿನಲ್ಲಿ ಧರಿಸಿ, ಜೋಡಿಸಿದ ಟಗರಿನ ಮಹಾಧನುಸ್ಸನ್ನು ತೆಗೆದುಕೊಂಡು ಹವಳದ ಬಣ್ಣದ ಹಗ್ಗವನ್ನು ಏರಿಸಿ, ತಲೆಗೆ ರುಮಾಲನ್ನು ಸುತ್ತಿ, ತೀಕ್ಷ್ಣವಾದ ಬಾಣವನ್ನು ಉಗುರುಗಳಲ್ಲಿ ತಿರುಗಿಸುತ್ತಾ, ಅಲಂಕೃತನಾದ ನಾಗ ಕುಮಾರನು ಭೂಮಿಯನ್ನು ಸೀಳಿಕೊಂಡು ಬರುವಂತೆ ತೆರೆಯನ್ನು ಇಬ್ಭಾಗಿಸಿಕೊಂಡು ಹೊರಗೆ ಬಂದು, ಬಾಣ ಬಿಡುವಲ್ಲಿಗೆ ಹೋಗಿ, ಬಾಣವನ್ನು ಹೂಡಿ, ರಾಜನನ್ನು ಕುರಿತು, "ಏನು ಮಹಾರಾಜ? ಈ ಮಾವಿನ ಗೊಂಚಲನ್ನು ಮೇಲೇರುವ ಬಾಣದಿಂದ ಬೀಳಿಸಲೋ? ಅಥವಾ ಕೆಳಗಿಳಿಯುವ ಬಾಣದಿಂದ ಬೀಳಿಸಲೋ?" ಎಂದನು.

"ಅಪ್ಪಾ, ಮೇಲೇರುವ ಬಾಣದಿಂದ ಬೀಳಿಸುವುದನ್ನು ನಾನು ಹಿಂದೆ ಬಹಳ ಕಂಡಿದ್ದೇನೆ. ಕೆಳಗಿಳಿಯುವ ಬಾಣದಿಂದ ಬೀಳಿಸುವುದನ್ನು ನಾನು ಹಿಂದೆ ಕಂಡಿಲ್ಲ. ಕೆಳಗಿಳಿಯುವ ಬಾಣದಿಂದ ಬೀಳಿಸು."

"ಮಹಾರಾಜ, ಈ ಬಾಣ ಬಹುದೂರ ಏರುವುದು, ಚತುರ್ಮಹಾರಾಜಿಕಭವನಗಳ ವರೆಗೂ ಹೋಗಿ ತಾನಾಗಿಯೇ ಇಳಿಯುವುದು. ಅದು ಇಳಿಯುವವರೆಗೆ ತಾವು ತಾಳಬೇಕಾಗುವುದು."

ರಾಜನು ಒಳ್ಳೆಯದೆಂದು ಒಪ್ಪಿದನು.

ಆಗ ಅವನು ಪುನಃ, "ಮಹಾರಾಜ, ಈ ಬಾಣ ಏರುವಾಗ ಮಾವಿನ ಗೊಂಚಲಿನ ತೊಟ್ಟನ್ನು ಮಧ್ಯಕ್ಕೆ ಸರಿಯಾಗಿ ಕತ್ತರಿಸುತ್ತಾ ಏರುವುದು. ಇಳಿಯುವಾಗ ಕೂದಲಿನಷ್ಟು ಕೂಡ ಈಚೆ ಆಚೆ ಹೋಗದೆ,

ಮೊದಲು ಸೀಳಿದ ಕಡೆಯೇ ಬಿದ್ದು, ಮಾವಿನ ಗೊಂಚಲನ್ನು ಹಿಡಿದು ಕೊಂಡು ಇಳಿಯುವುದು. ನೋಡು, ಮಹಾರಾಜ" ಎಂದು ವೇಗವನ್ನು ಹುಟ್ಟಿಸಿ, ಬಾಣಬಿಟ್ಟನು.

ಆ ಬಾಣ ಮಾವಿನ ಗೊಂಚಲನ್ನು ಮಧ್ಯಕ್ಕೆ ಸರಿಯಾಗಿ ಕತ್ತರಿಸುತ್ತಾ ಏರಿತು. ಬೋಧಿಸತ್ತ್ವನು "ಈ ಬಾಣ ಚತುರ್ಮಹಾರಾಜಿಕ ಭವನಗಳ ವರೆಗೂ ಹೋಗಿರಬೇಕು" ಎಂದು ತಿಳಿದು, ಮೊದಲು ಬಿಟ್ಟ ಬಾಣಕ್ಕಿಂತ ಅಧಿಕತರವಾದ ವೇಗವನ್ನು ಹುಟ್ಟಿಸಿ, ಇನ್ನೊಂದು ಬಾಣ ಬಿಟ್ಟನು. ಅದು ಹೋಗಿ, ಮೊದಲ ಬಾಣದ ಗರಿಗೆ ಹೊಡೆದು ಅದನ್ನು ತಿರುಗಿಸಿ, ತಾನು ತ್ರಯಸ್ತ್ರಿಂಶಸ್ ಭವನಕ್ಕೆ ಏರಿತು. ಅಲ್ಲಿ ದೇವತೆಗಳು ಅದನ್ನು ಹಿಡಿದಿಟ್ಟುಕೊಂಡರು.

ಹಿಂದಿರುಗಿದ ಬಾಣ ಗಾಳಿಯನ್ನು ಭೇದಿಸುವ ಶಬ್ದ ಸಿಡಿಲಿನ ಶಬ್ದದಂತಾಯಿತು. ಮಹಾಜನರು "ಏನು ಶಬ್ದ ಇದು?" ಎನ್ನಲು, ಬೋಧಿಸತ್ತ್ವನು "ಹಿಂದಿರುಗುತ್ತಿರುವ ಬಾಣದ ಸದ್ದು" ಎಂದು ಹೇಳಿ, ತಮ್ಮ ತಮ್ಮ ಮೇಲೆ ಬಾಣ ಬೀಳುವುದೆಂದು ಹೆದರಿ ಬೆದರುತ್ತಿರುವ ಮಹಾ ಜನರನ್ನು "ಹೆದರಬೇಡಿ" ಎಂದು ಸಂತೈಸಿ, "ಬಾಣವನ್ನು ಭೂಮಿಯಲ್ಲಿ ಬೀಳಗೊಡುವುದಿಲ್ಲ" ಎಂದನು.

ಬಾಣ ಇಳಿಯುತ್ತಾ ಕೂದಲಿನಷ್ಟು ಕೂಡ ಈಕಡೆ ಆಕಡೆ ಹೋಗದೆ ಸೀಳಿನಲ್ಲಿಯೇ ಬಿದ್ದು ಮಾವಿನ ಗೊಂಚಲನ್ನು ಕತ್ತರಿಸಿತು. ಬೋಧಿಸತ್ತ್ವನು ಮಾವಿನ ಗೊಂಚಲನ್ನೂ ಬಾಣವನ್ನೂ ಭೂಮಿಯಲ್ಲಿ ಬೀಳಗೊಡದೆ, ಆಕಾಶದಲ್ಲಿಯೇ ತಡೆದು, ಒಂದು ಕೈಯಿಂದ ಮಾವಿನ ಗೊಂಚಲನ್ನೂ ಇನ್ನೊಂದರಿಂದ ಬಾಣವನ್ನೂ ಹಿಡಿದನು.

ಮಹಾಜನರು ಆ ಆಶ್ಚರ್ಯವನ್ನು ಕಂಡು, "ನಾವು ಹಿಂದೆ ಇಂತಹವನ್ನು ಕಾಣಲಿಲ್ಲ" ಎಂದು ಮಹಾಪುರುಷನನ್ನು ಹೊಗಳಿದರು, ಹಾಡಿದರು, ಚಪ್ಪಾಳೆ ತಟ್ಟಿದರು, ಬೆರಳು ಹೊಡೆದರು. ಸಾವಿರಾರು ಜನ ಬಟ್ಟೆಗಳನ್ನು ಮೇಲೆಸೆದರು. ರಾಜಪರಿಸೆಯು ಸಂತೋಷದಿಂದ ಹಿಗ್ಗಿ ಬೋಧಿಸತ್ತ್ವನಿಗೆ ಕೊಟ್ಟ ಧನ ಕೋಟಿಯಷ್ಟಾಯಿತು. ರಾಜನು

ಕೂಡ ಧನದ ಮಳೆಗರೆಯುವಂತೆ ಅವನಿಗೆ ಬಹುವಾದ ಧನವನ್ನೂ ಮಹತ್ತಾದ ಯಶಸ್ಸನ್ನೂ ಕೊಟ್ಟನು.

ಹೀಗೆ ಬೋಧಿಸತ್ತ್ವನು ಆ ರಾಜನಿಂದ ಸತ್ಕಾರವನ್ನೂ ಗೌರವವನ್ನೂ ಪಡೆದು ಅಲ್ಲಿ ವಾಸಿಸುತ್ತಿರಲು, "ಅಸದೃಶಕುಮಾರನು ವಾರಾಣಸಿಯಲ್ಲಿ ಇಲ್ಲ" ಎಂದು ಏಳು ಜನ ರಾಜರು ಬಂದು, ವಾರಾಣಸಿಯನ್ನು ಬಳಸಿ, "ರಾಜ್ಯ ಕೊಡು. ಇಲ್ಲವೆ, ಯುದ್ಧ ಮಾಡು" ಎಂದು ರಾಜನಿಗೆ ಓಲೆ ಕಳಿಸಿದರು.

ರಾಜನು ಮರಣಭಯಭೀತನಾಗಿ, "ನನ್ನ ಅಣ್ಣನು ಎಲ್ಲಿ ವಾಸವಾಗಿರುವನು?" ಎಂದು ಪ್ರಶ್ನಿಸಿ, "ಒಬ್ಬ ಸಾಮಂತರಾಜನನ್ನು ಸೇವಿಸುತ್ತಿರುವ"ನೆಂದು ಕೇಳಿ, "ನನ್ನ ಅಣ್ಣ ಬರದಿದ್ದರೆ, ನಾನು ಬದುಕುವಂತಿಲ್ಲ. ಹೋಗಿ, ನನ್ನ ಮಾತುಗಳಿಂದ ಅವನ ಕಾಲಿಗೆ ವಂದಿಸಿ, ಕ್ಷಮೆ ಪಡೆದು, ಕರೆದುಕೊಂಡು ಬನ್ನಿರಿ" ಎಂದು ದೂತರನ್ನು ಕಳಿಸಿದನು.

ಅವರು ಹೋಗಿ, ನಡೆದುದನ್ನು ಬೋಧಿಸತ್ತ್ವನಿಗೆ ತಿಳಿಸಿದರು. ಬೋಧಿಸತ್ತ್ವನು ಆ ರಾಜನನ್ನು ಕೇಳಿಕೊಂಡು, ವಾರಾಣಸಿಗೆ ಹಿಂದಿರುಗಿ ಬಂದು, 'ಹೆದರಬೇಡ'ವೆಂದು ರಾಜನನ್ನು ಸಂತೈಸಿ, "ನಾನು, ಅಸದೃಶಕುಮಾರ, ಬಂದಿದ್ದೇನೆ. ನಾನು ಒಂದು ಬಾಣ ಬಿಟ್ಟು ನಿಮ್ಮ ಎಲ್ಲರ ಜೀವ ತೆಗೆಯುತ್ತೇನೆ. ಬದುಕಬೇಕೆನ್ನುವವರು ಓಡಿಹೋಗಲಿ" ಎಂದು ಬಾಣದಲ್ಲಿ ಅಕ್ಷರ ಕೆತ್ತಿಸಿ, ಅಟ್ಟಳಿಗೆಯಲ್ಲಿ ನಿಂತು, ಏಳು ಜನ ರಾಜರು ಊಟಮಾಡುತ್ತಿದ್ದ ಚಿನ್ನದ ತಟ್ಟೆಯ ಮಧ್ಯದಲ್ಲೇ ಬಾಣ ಬೀಳಿಸಿದನು. ಅವರು ಆ ಅಕ್ಷರಗಳನ್ನು ಕಂಡು, ಮರಣಭಯಭೀತರಾಗಿ ಓಡಿಹೋದರು.

ಹೀಗೆ ಮಹಾಸತ್ತ್ವನು, ಒಂದು ಸಣ್ಣ ನೊಣ ಕುಡಿಯುವಷ್ಟು ಕೂಡ ರಕ್ತ ಚೆಲ್ಲದೆ ಏಳು ಜನ ರಾಜರನ್ನೂ ಓಡಿಸಿ, ತಮ್ಮನನ್ನು ಗಮನಿಸುತ್ತಾ ಕಾಮುಗಳನ್ನು ತೊರೆದು, ಮನೆ ಬಿಟ್ಟುಹೋಗಿ ಋಷಿಯಾಗಿ, ಅಭಿಜ್ಞೆಗಳನ್ನೂ ಸಮಾಪತ್ತಿಗಳನ್ನೂ ಉಂಟುಮಾಡಿಕೊಂಡು, ಬದುಕು ಮುಗಿದ ಮೇಲೆ ಬ್ರಹ್ಮಲೋಕಪರಾಯಣನಾದನು.

# ಗೃಧ್ರ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಗೃಧ್ರಪರ್ವತದಲ್ಲಿ ಗೃಧ್ರದ ಹೊಟ್ಟೆಯಲ್ಲಿ ಜನ್ಮತಾಳಿ, ತಾಯಿತಂದೆಯನ್ನು ಪೋಷಿಸುತ್ತಿದ್ದನು.

ಆಗ ಒಮ್ಮೆ ಬಹಳ ಗಾಳಿ ಮಳೆ ಆಯಿತು. ಗೃಧ್ರಗಳು ಗಾಳಿ ಮಳೆಗಳನ್ನು ಸಹಿಸಲಾರದೆ ಶೀತಭಯದಿಂದ ವಾರಾಣಸಿಗೆ ಹೋಗಿ, ಕೋಟೆಯ ಬಳಿಯೂ ಅಗಳಿನ ಬಳಿಯೂ ಶೀತದಿಂದ ನಡುಗುತ್ತಾ ಕುಳಿತಿದ್ದವು.

ಆಗ ವಾರಾಣಸಿ ಶ್ರೇಷ್ಠಿಯು ನಗರದಿಂದ ಹೊರಟು ಸ್ನಾನಕ್ಕೆ ಹೋಗುತ್ತಾ, ಆ ಗೃಧ್ರಗಳು ಕೋಟಲೆಗೊಳ್ಳುವುದನ್ನು ಕಂಡು, ಮಳೆ ಸೋರದ ಒಂದು ಕಡೆ ಅವುಗಳನ್ನು ಒಟ್ಟುಗೂಡಿಸಿ, ಬೆಂಕಿ ಮಾಡಿಸಿ, ಗೋಶ್ಮಶಾನಕ್ಕೆ ಕಳಿಸಿ ಗೋಮಾಂಸವನ್ನು ತರಿಸಿ, ಅವುಗಳಿಗೆ ಕೊಡಿಸಿ, ಕಾವಲಿರಿಸಿದನು.

ಗೃಧ್ರಗಳು ಗಾಳಿ ಮಳೆ ನಿಂತಮೇಲೆ ಮೈ ತುಂಬಿಕೊಂಡು ಪರ್ವತಕ್ಕೆ ಹೋದವು. ಅಲ್ಲಿ ಒಟ್ಟುಗೂಡಿ "ವಾರಾಣಸಿ ಶ್ರೇಷ್ಠಿ, ನಮಗೆ ಉಪಕಾರ ಮಾಡಿದನು. ಯಾವ ಉಪಕಾರದಿಂದ ನಾವು ಪ್ರತ್ಯುಪಕಾರ ಮಾಡಬಹುದು ? ಒಳ್ಳೆಯದು. ಇಂದಿನಿಂದ ತೊಡಗಿ, ನಮಗೆ ದೊರಕಿದ ವಸ್ತ್ರಗಳನ್ನೂ ಆಭರಣಗಳನ್ನೂ ಆ ವಾರಾಣಸಿ ಶ್ರೇಷ್ಠಿಯ ಮನೆಯ ಬಯಲಂಗಳದಲ್ಲಿ ಬೀಳಿಸೋಣ" ಎಂದು ಆಲೋಚನೆ ಮಾಡಿದವು.

ಅಂದಿನಿಂದ ಗೃಧ್ರಗಳು, ಜನರು ವಸ್ತ್ರಾಭರಣಗಳನ್ನು ಬಿಸಿಲಿನಲ್ಲಿ ಒಣಗಿಸುತ್ತಾ ಎಚ್ಚರ ತಪ್ಪಿದುದನ್ನು ಕಂಡರೆ, ಗಿಡುಗವು ಮಾಂಸದ ತುಂಡನ್ನು ಹಿಡಿಯುವಂತೆ ಎರಗಿ ಹಿಡಿದು, ವಾರಾಣಸಿ ಶ್ರೇಷ್ಠಿಯ ಮನೆಯ ಬಯಲಂಗಳದಲ್ಲಿ ಬೀಳಿಸುವುವು. ಗೃಧ್ರಗಳು ಆಭರಣ ತರುವುದನ್ನು ತಿಳಿದು, ಅವನು ಅವುಗಳೆಲ್ಲವನ್ನೂ ಬೇರೆಯೇ ಇರಿಸಿದನು.

"ಗೃಧ್ರಗಳು ನಗರವನ್ನು ಲೂಟಿಮಾಡುತ್ತಿವೆ" ಎಂದು ರಾಜನಿಗೆ ತಿಳಿಸಿದರು.

ರಾಜನು " ನೀವು ಒಂದು ಗೃಧ್ರವನ್ನು ಮಾತ್ರ ಹಿಡಿಯಿರಿ. ಎಲ್ಲವನ್ನೂ ತರಿಸುವೆನು" ಎಂದು ಅಲ್ಲಲ್ಲೇ ಪಾಶಗಳನ್ನೂ ಜಾಲಗಳನ್ನೂ ಒಡ್ಡಿಸಿದನು.

ತಾಯಿಯನ್ನು ಪೋಷಿಸುತ್ತಿದ್ದ ಆ ಗೃಧ್ರ ಒಂದು ಪಾಶದಲ್ಲಿ ಸಿಕ್ಕಿಬಿತ್ತು. ಅದನ್ನು ಹಿಡಿದು " ರಾಜನಿಗೆ ತೋರಿಸೋಣ " ಎಂದು ಜನರು ಒಯ್ಯುತ್ತಿದ್ದರು.

ವಾರಾಣಸಿಶ್ರೇಷ್ಠಿ ರಾಜನ ಸೇವೆಗೆ ಹೋಗುತ್ತಾ, ಆ ಜನರು ಗೃಧ್ರವನ್ನು ಹಿಡಿದುಕೊಂಡು ಹೋಗುವುದನ್ನು ಕಂಡು, "ಈ ಗೃಧ್ರವನ್ನು ಬಾಧಿಸಬೇಡಿ " ಎಂದು ಅದರ ಜೊತೆಯಲ್ಲಿಯೇ ಹೋದನು.

ಗೃಧ್ರವನ್ನು ರಾಜನಿಗೆ ಕಾಣಿಸಿದರು.

ಆಗ ರಾಜನು " ನೀನು ನಗರದಲ್ಲಿ ಲೂಟಿಮಾಡಿ ವಸ್ತ್ರಾದಿಗಳನ್ನು ತೆಗೆದುಕೊಂಡು ಹೋಗುವೆಯಾ ? " ಎಂದು ಅದನ್ನು ಕೇಳಿದನು.

" ಹೌದು, ಮಹಾರಾಜ. "

" ಯಾರಿಗೆ ಕೊಟ್ಟಿರುವೆ. "

" ವಾರಾಣಸಿ ಶ್ರೇಷ್ಠಿಗೆ. "

" ಏಕೆ ? "

" ನಮ್ಮನ್ನು ಅವನು ಬದುಕಿಸಿದನು. ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು ತಕ್ಕುದು. ಆದ್ದರಿಂದ ಕೊಟ್ಟೆವು."

ಆಗ ರಾಜನು " ಗೃಧ್ರಗಳು ನೂರು ಯೋಜನದ ಮೇಲೆ ನಿಂತು ಕೂಡ ಹೆಣವನ್ನು ಕಾಣುವುವು. ನಿನಗಾಗಿ ಒಡ್ಡಿದ ಪಾಶಗಳು ಬಳಿಯಿದ್ದರೂ ನೀನೇಕೆ ಅವುಗಳನ್ನು ಕಾಣಲಿಲ್ಲ ? " ಎಂದನು.

ಗೃಧ್ರ ಅವನು ನುಡಿದುದನ್ನು ಕೇಳಿ, " ವಿನಾಶವಾಗುವಾಗ, ಬದುಕು ಮುಗಿಯುವಾಗ, ಜಾಲವಾಗಲಿ ಪಾಶವಾಗಲಿ ಬಳಿಯಿದ್ದರೂ ಕಾಣಿಸುವುದಿಲ್ಲ " ಎಂದಿತು.

ರಾಜನು ಗೃಧ್ರದ ಮಾತನ್ನು ಕೇಳಿ, ಶ್ರೇಷ್ಠಿಯನ್ನು ಕುರಿತು, “ ಮಹಾಶ್ರೇಷ್ಠಿ, ಗೃಧ್ರವು ನಿನ್ನ ಮನೆಗೆ ವಸ್ತ್ರಾದಿಗಳನ್ನು ತಂದುದು ಸತ್ಯವೇ ? ” ಎಂದು ಕೇಳಿದನು.

“ ಸತ್ಯ, ದೇವ. ”

“ ಅವು ಎಲ್ಲಿ ? ”

“ ದೇವ, ಎಲ್ಲವನ್ನೂ ಬೇರೆಯೇ ಇರಿಸಿರುವೆನು. ಯಾವುದು ಯಾರದೋ ಅವರಿಗೆ ಅದನ್ನು ಕೊಡುತ್ತೇನೆ. ಈ ಗೃಧ್ರವನ್ನು ಬಿಟ್ಟು ಬಿಡಿ” ಎಂದು ಗೃಧ್ರವನ್ನು ಬಿಡಿಸಿ, ಮಹಾಶ್ರೇಷ್ಠಿ ಅವರವರ ಸ್ವತ್ತುಗಳನ್ನು ಅವರವರಿಗೆ ಕೊಡಿಸಿದನು.

# ತಿಲಮುಷ್ಟಿ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಅವನ ಮಗನು ಬ್ರಹ್ಮದತ್ತಕುಮಾರನೆಂದು ಹೆಸರಾದನು.

ಹಿಂದಿನ ರಾಜರು "ಇದರಿಂದ ಇವರ ಮಾನದರ್ಪಗಳು ಅಡಗುವುವು. ಇದರಿಂದ ಇವರು ಶೀತೋಷ್ಣಗಳನ್ನು ಸಹಿಸುವರು. ಇದರಿಂದ ಇವರು ಲೋಕದ ನಡೆವಳಿಯನ್ನು ತಿಳಿಯುವರು" ಎಂದು, ತಮ್ಮ ನಗರದಲ್ಲಿಯೇ ಲೋಕವಿಖ್ಯಾತನಾದ ಆಚಾರ್ಯನಿದ್ದರೂ, ತಮ್ಮ ಮಕ್ಕಳನ್ನು ವಿದ್ಯೆಕಲಿಯುವುದಕ್ಕಾಗಿ ರಾಷ್ಟ್ರದಿಂದ ಆಚೆ ದೂರ ಕಳಿಸುತ್ತಿದ್ದರು.

ಆ ರಾಜನು ಕೂಡ ಹದಿನಾರು ವಯಸ್ಸಿಗೆ ಬಂದ ತನ್ನ ಮಗನನ್ನು ಕರೆಕಳಿಸಿ, ಒಂದೇ ತಲದ ಪಾದರಕ್ಷೆಯನ್ನೂ ಎಲೆಯ ಕೊಡೆಯನ್ನೂ ಸಾವಿರ ಕಾರ್ಷಾಪಣಗಳನ್ನೂ ಕೊಟ್ಟು, "ಅಪ್ಪಾ, ತಕ್ಷಶಿಲೆಗೆ ಹೋಗಿ, ವಿದ್ಯೆ ಕಲಿ" ಎಂದು ಕಳಿಸಿದನು.

ಅವನು ಒಳ್ಳೆಯದೆಂದು ತಾಯಿತಂದೆಗೆ ವಂದಿಸಿ, ಹೊರಟು, ಕ್ರಮವಾಗಿ ತಕ್ಷಶಿಲೆಯನ್ನು ಸೇರಿ, ಆಚಾರ್ಯನ ಮನೆಯನ್ನು ಕೇಳಿ, ಆಚಾರ್ಯನು ಶಿಷ್ಯರಿಗೆ ಓದಿಸಿಯಾದ ಮೇಲೆ ಎದ್ದು ಮನೆಬಾಗಿಲಲ್ಲಿ ತಿರುಗಾಡುತ್ತಿರುವಾಗ ಮನೆಗೆ ಹೋಗಿ, ಎಲ್ಲಿ ನಿಂತು ಆಚಾರ್ಯನನ್ನು ಕಂಡನೋ ಅಲ್ಲಿಯೇ ಪಾದರಕ್ಷೆಯನ್ನು ಕಳಚಿ, ಕೊಡೆಯನ್ನು ಕೆಳಗಿಳಿಸಿ, ಆಚಾರ್ಯನಿಗೆ ವಂದಿಸಿ, ನಿಂತನು.

ಅವನು ಆಯಾಸಗೊಂಡಿದ್ದುದನ್ನು ತಿಳಿದು, ಆಚಾರ್ಯನು ಅವನನ್ನು ಬರಮಾಡಿಕೊಂಡನು. ಕುಮಾರನು ಊಟ ಉಂಡು, ಕೊಂಚ ವಿಶ್ರಮಿಸಿಕೊಂಡು, ಆಚಾರ್ಯನ ಬಳಿ ಸೇರಿ, ವಂದಿಸಿ, ನಿಂತನು.

"ಎಲ್ಲಿಂದ ಬಂದೆ, ಅಪ್ಪ?" ಎಂದು ಅವನು ಕೇಳಿದನು.

"ವಾರಾಣಸಿಯಿಂದ."

"ಯಾರ ಮಗ ನೀನು?"

"ವಾರಾಣಸಿ ರಾಜನ ಮಗ."

“ ಏತಕ್ಕಾಗಿ ಬಂದೆ ? ”

“ ವಿದ್ಯೆ ಕಲಿಯುವುದಕ್ಕಾಗಿ. ”

“ ಆಚಾರ್ಯಭಾಗವನ್ನು ತಂದಿರುವೆಯೊ ? ಅಥವಾ ಧರ್ಮಶಿಷ್ಯನಾಗಲು ಬಯಸುವೆಯೊ ? ”

“ ನಾನು ಆಚಾರ್ಯಭಾಗ ತಂದಿರುವೆನು ” ಎಂದು ಅವನು ಹೇಳಿ, ಆಚಾರ್ಯನ ಪಾದಮೂಲದಲ್ಲಿ ಸಾವಿರದ ಚೀಲವನ್ನು ಇಟ್ಟು ವಂದಿಸಿದನು.

ಧರ್ಮಶಿಷ್ಯರಾದವರು ಹಗಲು ಆಚಾರ್ಯನ ಕೆಲಸ ಮಾಡಿ, ರಾತ್ರಿ ವಿದ್ಯೆ ಕಲಿಯುವರು. ಆಚಾರ್ಯಭಾಗ ಕೊಟ್ಟವರು ಮನೆಗೆ ಹಿರಿಯ ಮಕ್ಕಳಂತಾಗಿ ವಿದ್ಯೆಯನ್ನು ಮಾತ್ರ ಕಲಿಯುವರು. ಅದರಂತೆ ಆ ಆಚಾರ್ಯನು ಕುಮಾರನಿಗೆ ವಿದ್ಯೆ ಕಲಿಸಿದನು.

ಕುಮಾರನು ವಿದ್ಯೆ ಕಲಿಯುತ್ತಾ, ಒಂದು ದಿನ ಆಚಾರ್ಯನೊಡನೆ ಸ್ನಾನಮಾಡಲು ಹೋದನು. ಆಗ ಒಬ್ಬ ಮುದುಕಿ ಎಳ್ಳನ್ನು ಬೆಳ್ಳಗೆ ಮಾಡಿ, ಹರಡಿ, ಕಾಯುತ್ತಾ ಕುಳಿತಿದ್ದಳು. ಕುಮಾರನು ಬಿಳಿಯ ಎಳ್ಳನ್ನು ಕಂಡು, ತಿನ್ನಲು ಆಸೆಪಟ್ಟು, ಒಂದು ಹಿಡಿ ಎಳ್ಳು ತೆಗೆದು ತಿಂದನು. ಮುದುಕಿ “ ಇವನಿಗೆ ಹಸಿವಾಗಿರಬೇಕು ” ಎಂದು ಏನೂ ಹೇಳದೆ ಸುಮ್ಮನಿದ್ದಳು.

ಅವನು ಮರುದಿವಸ ಅದೇ ವೇಳೆಯಲ್ಲಿ ಹಾಗೇ ಮಾಡಿದನು. ಅವಳೂ ಅವನಿಗೆ ಏನೂ ಹೇಳಲಿಲ್ಲ. ಅವನು ಮೂರನೆಯ ದಿನವೂ ಹಾಗೆಯೇ ಮಾಡಿದನು. ಆಗ ಮುದುಕಿ “ ಲೋಕವಿಖ್ಯಾತನಾದ ಆಚಾರ್ಯನು ತನ್ನ ಶಿಷ್ಯರಿಂದ ನನ್ನನ್ನು ಲೂಟಿಮಾಡಿಸುತ್ತಿದ್ದಾನೆ ” ಎಂದು ತೋಳು ನೀಡಿ ಗೋಳಾಡಿದಳು.

ಆಚಾರ್ಯನು ಹಿಂದಿರುಗಿ, “ ಏನಾಯಿತು, ಅಮ್ಮಾ ” ಎಂದು ಕೇಳಿದನು.

“ ಸ್ವಾಮಿ, ನಿನ್ನ ಶಿಷ್ಯನು ನಾನು ಮಾಡಿದ ಬಿಳಿಯ ಎಳ್ಳಿನಲ್ಲಿ ಈ ಹೊತ್ತು ಒಂದು ಹಿಡಿ ತಿಂದ. ನಿನ್ನೆ ಒಂದು, ಮೊನ್ನೆ ಒಂದು. ಹೀಗೆ ತಿನ್ನುತ್ತಾ ನನ್ನ ಸ್ವತ್ತು ಎಲ್ಲವನ್ನೂ ನಾಶಮಾಡುವನು. ”

" ಅಮ್ಮಾ, ಅಳಬೇಡ. ನಿನಗೆ ಬೆಲೆ ಕೊಡಿಸುವೆನು. "

" ಸ್ವಾಮಿ, ನನಗೆ ಬೆಲೆ ಬೇಕಾಗಿಲ್ಲ. ಆ ಕುಮಾರನು ಪುನಃ ಹಾಗೆ ಮಾಡದಂತೆ ಅವನಿಗೆ ಕಲಿಸಿರಿ. "

ಆಚಾರ್ಯನು " ಹಾಗಾದರೆ, ನೋಡು, ಅಮ್ಮಾ " ಎಂದು ಇಬ್ಬರು ಹುಡುಗರಿಂದ ಆ ಕುಮಾರನನ್ನು ಎರಡು ಕೈಗಳಲ್ಲೂ ಹಿಡಿಸಿ, ಬಿದಿರು ಸೀಳನ್ನು ಹಿಡಿದು, "ಪುನಃ ಹೀಗೆ ಮಾಡಬೇಡ" ಎಂದು ಮೂರು ಸಲ ಬೆನ್ನ ಮೇಲೆ ಹೊಡೆದನು.

ಕುಮಾರನು ಆಚಾರ್ಯನ ಮೇಲೆ ಕ್ರೋಧಗೊಂಡು, ಕೆಂಪು ಕಣ್ಣು ಮಾಡಿಕೊಂಡು, ಕಾಲಿನಿಂದ ತಲೆಯವರೆಗೂ ಅವನನ್ನು ದೃಷ್ಟಿಸಿದನು. ಅವನು ಕ್ರುದ್ಧನಾಗಿ ದೃಷ್ಟಿಸಿದುದು ಅವನಿಗೂ ತಿಳಿಯಿತು.

ಕುಮಾರನು ಮನಸ್ಸು ಕೊಟ್ಟು ವಿದ್ಯೆಯನ್ನು ಮುಗಿಸಿ, "ಇವನು ನನ್ನಿಂದ ಸಾಯಬೇಕು" ಎಂದು ಅವನು ಮಾಡಿದ ದ್ವೇಷವನ್ನು ಹೃದಯದಲ್ಲಿ ಇರಿಸಿ, ಹೊರಡುವಾಗ ಆಚಾರ್ಯನಿಗೆ ವಂದಿಸಿ, " ಆಚಾರ್ಯ, ನಾನು ವಾರಾಣಸಿ ರಾಜ್ಯವನ್ನು ಪಡೆದು, ನಿನ್ನ ಬಳಿಗೆ ಜನ ಕಳಿಸುವೆನು. ನೀನು ಆಗ ಬರಬೇಕು " ಎಂದು ಸ್ನೇಹವಿರುವಂತೆ ಮಾತನಾಡಿ, ಪ್ರತಿಜ್ಞೆಯನ್ನು ತೆಗೆದುಕೊಂಡು ಹೋದನು.

ಅವನು ವಾರಾಣಸಿಗೆ ಹೋಗಿ, ತಾಯಿತಂದೆಗೆ ವಂದಿಸಿ, ಕಲಿತುದನ್ನು ತೋರಿಸಿದನು. ರಾಜನು "ಬದುಕಿರುವಾಗಲೇ ಮಗನನ್ನು ಕಂಡೆ. ಬದುಕಿರುವಾಗಲೇ ಅವನ ರಾಜ್ಯಶ್ರೀಯನ್ನೂ ಕಾಣುವೆನು " ಎಂದು ಮಗನನ್ನು ರಾಜ್ಯದಲ್ಲಿ ಪ್ರತಿಷ್ಠೆ ಮಾಡಿದನು.

ಅವನು ರಾಜ್ಯಶ್ರೀಯನ್ನು ಅನುಭವಿಸುತ್ತಾ, ಆಚಾರ್ಯನಿಂದ ಆದ ದೋಷವನ್ನು ಸ್ಮರಿಸಿ,ಕೋಪಗೊಂಡು,"ಅವನನ್ನು ಸಾಯಿಸುವೆನು" ಎಂದು, ಕರೆಕಳಿಸುವುದಕ್ಕಾಗಿ ಆಚಾರ್ಯನ ಬಳಿಗೆ ದೂತನನ್ನು ಕಳಿಸಿದನು.

ಆಚಾರ್ಯನು " ತರುಣಕಾಲದಲ್ಲಿ ಇವನನ್ನು ಒಪ್ಪಿಸುವುದು ನನಗೆ ಶಕ್ಯವಿಲ್ಲ" ಎಂದು ಹೋಗದೆಯೆ, ಆ ರಾಜನ ಮಧ್ಯಮವಯಸ್ಸಿನ ಕಾಲದಲ್ಲಿ " ಈಗ ಇವನನ್ನು ನಾನು ಒಪ್ಪಿಸಬಲ್ಲೆ " ಎಂದು ಹೋಗಿ,

ರಾಜದ್ವಾರದಲ್ಲಿ ನಿಂತು, " ತಕ್ಷಶಿಲಾಚಾರ್ಯನು ಬಂದನು " ಎಂದು ಹೇಳಿಕಳಿಸಿದನು.

ರಾಜನು ಸಂತುಷ್ಟನಾಗಿ, ಬ್ರಾಹ್ಮಣನನ್ನು ಕರೆಕಳುಹಿ, ಅವನು ತನ್ನ ಬಳಿ ಬರುವುದನ್ನು ಕಂಡ ಮಾತ್ರಕ್ಕೇ ಕೋಪಗೊಂಡು, ಕಣ್ಣು ಕೆಂಪು ಮಾಡಿಕೊಂಡು, ಅಮಾತ್ಯರನ್ನು ಕರೆದು, " ನನ್ನ ಆಚಾರ್ಯನು ಹೊಡೆದ ಸ್ಥಳ ಈ ಹೊತ್ತಿಗೂ ನೋಯುತ್ತಿದೆ. ಆಚಾರ್ಯನು ಹಣೆಯಲ್ಲಿ ಮೃತ್ಯುವನ್ನು ಕೊಂಡು ಸಾಯುವೆನೆಂದು ಬಂದಿರುವನು. ಈ ಹೊತ್ತು ಇವನಿಗೆ ಉಳಿಗಾಲವಿಲ್ಲ " ಎಂದು ಹೇಳುತ್ತಾ, " ಒಂದು ಹಿಡಿ ಎಳ್ಳಿಗಾಗಿ ನೀನು ನನ್ನ ತೋಳು ಹಿಡಿದು ಮೂರುಬಾರಿ ಹೊಡೆದು ಇಲ್ಲಿಗೆ ಬರಲು ನಿನಗೆ ಬದುಕು ಬೇಡವಾಗಿರಬೇಕು, ಬ್ರಾಹ್ಮಣ" ಎಂದನು.

ಹೀಗೆ ಅವನನ್ನು ಮರಣದಿಂದ ಬೆದರಿಸುತ್ತಾ ಅವನು ಹೇಳಿದನು. ಆಚಾರ್ಯನು ಅದನ್ನು ಕೇಳಿ, " ಅನಾರ್ಯವಾದ ಕೆಲಸ ಮಾಡುವವರನ್ನು ಆರ್ಯರು ಹೊಡೆದು ತಡೆದರೆ, ಅದು ಕಲಿಸುವುದಕ್ಕಾಗಿಯಲ್ಲದೆ ವೈರದಿಂದಲ್ಲ. ಪಂಡಿತರು ಹೀಗೆಂದು ತಿಳಿದಿರುವರು " ಎಂದನು.

" ಆದ್ದರಿಂದ, ಮಹಾರಾಜ, ನೀನೂ ಇದನ್ನು ಗಮನಿಸು. ಇಂತಹ ಕಡೆ ವೈರ ಮಾಡುವುದು ಯೋಗ್ಯವಲ್ಲ. ಮಹಾರಾಜ, ನಾನು ನಿನಗೆ ಇದನ್ನು ಕಲಿಸದೆ ಹೋಗಿದ್ದರೆ, ಬರುಬರುತ್ತಾ ಕಜ್ಜಾಯ ಮೊದಲಾದ ಸಿಹಿ ತಿನಿಸುಗಳನ್ನೂ ಫಲಾಫಲಗಳನ್ನೂ ಕದಿಯುತ್ತಾ ಕಳ್ಳಕೆಲಸದಲ್ಲಿ ಮುಳುಗುತ್ತಿದ್ದೆ. ಕ್ರಮವಾಗಿ ಕನ್ನಕೊರೆದು, ದಾರಿಕಾಯ್ದು, ಗ್ರಾಮಗಳಲ್ಲಿ ಕೊಲೆಮಾಡುತ್ತಿದ್ದೆ. ರಾಜಾಪರಾಧಿಕನಾದ ಕಳ್ಳನೆಂದು ನಿನ್ನನ್ನು ಒಡನೆಯೊಡನೆ ಹಿಡಿದುಕೊಂಡು ರಾಜನಿಗೆ ತಂದು ತೋರಿಸುತ್ತಿದ್ದರು. 'ಹೋಗಿ, ಇವನ ದೋಷಕ್ಕೆ ತಕ್ಕ ದಂಡವನ್ನು ವಿಧಿಸಿರಿ' ಎಂಬ ರಾಜದಂಡದ ಭಯ ನಿನಗೆ ಪ್ರಾಪ್ತವಾಗುತ್ತಿತ್ತು. ಇಂತಹ ಸಂಪತ್ತು ನಿನಗೆ ಎಲ್ಲಿ ಉಂಟಾಗುತ್ತಿತ್ತು ? ನನ್ನಿಂದ ಅಲ್ಲವೇ ಈ ಐಶ್ವರ್ಯ ನಿನಗೆ ಲಭಿಸಿದುದು ? "

ಆಚಾರ್ಯನು ಹೀಗೆ ರಾಜನಿಗೆ ತಿಳಿವಳಿಕೆ ಕೊಟ್ಟನು. ಸುತ್ತಲೂ ನಿಂತ ಅಮಾತ್ಯರು ಅವನು ಹೇಳಿದುದನ್ನು ಕೇಳಿ, "ಸತ್ಯ, ದೇವ. ಈ ಐಶ್ವರ್ಯವೆಲ್ಲಾ ಆಚಾರ್ಯನದೇ" ಎಂದರು.

ಅದೇ ಕ್ಷಣದಲ್ಲಿಯೇ ರಾಜನು ಆಚಾರ್ಯನ ಗುಣವನ್ನು ಕಂಡುಕೊಂಡು, "ಆಚಾರ್ಯ, ಈ ಐಶ್ವರ್ಯವನ್ನೆಲ್ಲಾ ನಿನಗೆ ಕೊಡುವೆನು. ರಾಜ್ಯವನ್ನು ಒಪ್ಪಿಸಿಕೊ" ಎಂದನು.

ಆಚಾರ್ಯನು "ನನಗೆ ರಾಜ್ಯ ಬೇಕಾಗಿಲ್ಲ, ಮಹಾರಾಜ" ಎಂದು ಅದನ್ನು ಒಲ್ಲದೆ ಹೋದನು.

ರಾಜನು ತಕ್ಷಶಿಲೆಗೆ ಜನರನ್ನು ಕಳಿಸಿ, ಆಚಾರ್ಯನ ಹೆಂಡತಿ ಮಕ್ಕಳನ್ನು ಕರೆತರಿಸಿ, ಅವರಿಗೆ ಮಹಾ ಐಶ್ವರ್ಯವನ್ನು ಕೊಟ್ಟು, ಆಚಾರ್ಯನನ್ನೇ ಪುರೋಹಿತನನ್ನಾಗಿ ಮಾಡಿ, ತಂದೆಯ ಸ್ಥಾನದಲ್ಲಿ ಇರಿಸಿ, ಅವನ ಬುದ್ಧಿವಾದದಂತೆ ನಡೆದು, ದಾನಾದಿ ಪುಣ್ಯಗಳನ್ನು ಮಾಡಿ ಸ್ವರ್ಗಪರಾಯಣನಾದನು.

# ಕಾಮ ನೀತ

ಹಿಂದೆ ಒಬ್ಬ ರಾಜನಿಗೆ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಹಿರಿಯವನು ಹೋಗಿ, ವಾರಾಣಸಿಗೆ ರಾಜನಾದನು; ಕಿರಿಯವನು ಉಪರಾಜನಾದನು. ಅವರಲ್ಲಿ ರಾಜನಾದ ಹಿರಿಯನಿಗೆ ಅತಿ ಆಸೆ. ಎಷ್ಟು ವಸ್ತುಗಳಾದರೂ ಸಾಲದು, ಏನೇನು ಸುಖಪಟ್ಟರೂ ಸಾಲದು. ಅವನಿಗೆ ತುಂಬಾ ಅತೃಪ್ತಿ. ಎಷ್ಟು ಐಶ್ವರ್ಯವಿದ್ದರೂ ಇನ್ನೂ ಬೇಕು.

ಆಗ ಬೋಧಿಸತ್ತ್ವನು ದೇವರಾಜನಾದ ಶಕ್ರನಾಗಿದ್ದನು. ಅವನು ಜಂಬೂದ್ವೀಪವನ್ನು ಅವಲೋಕಿಸುತ್ತಾ, ಆ ರಾಜನು ವಸ್ತುಗಳಿಗೂ ವಿಷಯುಗಳಿಗೂ ಆಸೆಪಡುತ್ತಾ ಅತೃಪ್ತಿಯಿಂದ ಇದ್ದುದನ್ನು ತಿಳಿದು, "ಈ ರಾಜನನ್ನು ನಿಗ್ರಹಿಸಿ, ಇವನು ಲಜ್ಜೆಪಡುವಂತೆ ಮಾಡುವೆನು" ಎಂದು ಬ್ರಾಹ್ಮಣ ಯುವಕನಂತೆ ಬಂದು, ರಾಜನನ್ನು ಕಂಡನು.

ರಾಜನು "ಏನು ಬಂದೆ, ಅಯ್ಯಾ?" ಎಂದನು.

"ಮಹಾರಾಜ, ಕ್ಷೇಮವೂ ಸುಭಿಕ್ಷವೂ ಆದ ಮೂರು ನಗರಗಳನ್ನು ನೋಡಿರುವೆನು. ಆನೆ, ಕುದುರೆ, ರಥ, ಪದಾತಿಗಳು ಅಲ್ಲಿ ಹೇರಳವಾಗಿವೆ. ಹಿರಣ್ಯ ಮತ್ತು ಸುವರ್ಣಗಳ ಆಭರಣಗಳು ಅಲ್ಲಿ ತುಂಬಿವೆ. ಸಣ್ಣಸೇನೆಯಿಂದ ಕೂಡ ಅವುಗಳನ್ನು ಹಿಡಿಯಲು ಸಾಧ್ಯ. ನಾನು ಅವುಗಳನ್ನು ನಿನಗೆ ಹಿಡಿದುಕೊಡಲು ಬಂದೆ."

"ಯಾವಾಗ ಹೋಗೋಣ, ಅಯ್ಯಾ?"

"ನಾಳೆ, ಮಹಾರಾಜ."

"ಹಾಗಾದರೆ, ಹೋಗು. ಬೆಳಗಾದೊಡನೆ ಬರಬಹುದು."

"ಒಳ್ಳೆಯದು, ಮಹಾರಾಜ. ಬೇಗ ಸೈನ್ಯವನ್ನು ಸಿದ್ಧಗೊಳಿಸು" ಎಂದು ಹೇಳಿ, ಶಕ್ರನು ಸ್ವಸ್ಥಾನಕ್ಕೆ ಹೋದನು.

ರಾಜನು ಮಾರನೆಯ ದಿವಸ ಡಂಗುರ ಹೊಯಿಸಿ, ಸೈನ್ಯವನ್ನು ಸಿದ್ಧಮಾಡಿ, ಅಮಾತ್ಯರನ್ನು ಕರೆಕಳುಹಿ, "ನಿನ್ನೆ ಒಬ್ಬ ಬ್ರಾಹ್ಮಣ ಹುಡುಗನು 'ಉತ್ತರಪಾಂಚಾಲ, ಇಂದ್ರಪ್ರಸ್ಥ, ಕೇಕಕ ಎಂಬ ಮೂರು

ನಗರಗಳ ರಾಜ್ಯವನ್ನು ಹಿಡಿದುಕೊಡುವೆನು' ಎಂದು ಹೇಳಿದನು. ಆ ಹುಡುಗನನ್ನು ಕರೆದುಕೊಂಡು ಮೂರು ನಗರಗಳ ರಾಜ್ಯವನ್ನು ಹಿಡಿಯೋಣ. ಬೇಗ ಅವನನ್ನು ಕರೆಕಳಿಸಿರಿ" ಎಂದನು.

"ದೇವ, ಅವನಿಗೆ ಇರಲು ಮನೆ ಎಲ್ಲಿ ಕೊಡಲಾಯಿತು?"

"ಅವನಿಗೆ ಇರಲು ಮನೆ ನಾನು ಕೊಡಿಸಲಿಲ್ಲ."

"ಹಾಗಾದರೆ, ತಂಗುವ ಮನೆಯು ವೆಚ್ಚಕ್ಕೆ ಕೊಟ್ಟಿತೇನು?"

"ಅದನ್ನೂ ಕೊಡಲಿಲ್ಲ."

"ಹಾಗಾದರೆ ಅವನನ್ನು ಎಲ್ಲಿ ನೋಡೋಣ?"

"ನಗರದ ಬೀದಿಗಳಲ್ಲಿ ಅವನನ್ನು ಹುಡುಕಿರಿ."

ಅವರು ಹುಡುಕಿ, ಕಾಣದೆ, "ಕಾಣಲಿಲ್ಲ, ಮಹಾರಾಜ" ಎಂದರು.

ರಾಜನು ಅವನನ್ನು ಕಾಣದುದರಿಂದ "ಹೀಗೆ ಮಹತ್ತಾದ ಐಶ್ವರ್ಯ ಕಳೆದುಹೋಯಿತು" ಎಂದು ಮಹಾಶೋಕವನ್ನನುಭವಿಸಿದನು. ಅವನ ಹೃದಯ ಬಿಸಿಯಾಯಿತು, ಎದೆಯೊಳಗಿನ ರಕ್ತ ಕೆರಳಿತು, ರಕ್ತಭೇದಿ ತಲೆದೋರಿತು. ವೈದ್ಯರಿಗೆ ಚಿಕಿತ್ಸೆ ಮಾಡಲು ಕೈಲಾಗಲಿಲ್ಲ.

ಮೂರು ನಾಲ್ಕು ಹಗಲಾದ ಮೇಲೆ ಶಕ್ರನು ಧ್ಯಾನಮಾಡುತ್ತಾ ಅವನ ಅಸ್ವಸ್ಥತೆಯನ್ನು ತಿಳಿದು, "ಇವನಿಗೆ ಚಿಕಿತ್ಸೆ ಮಾಡುವೆನು" ಎಂದು ಬ್ರಾಹ್ಮಣಯುವಕನಂತೆ ಬಂದು ಬಾಗಿಲಲ್ಲಿ ನಿಂತು, "ವೈದ್ಯನಾದ ಬ್ರಾಹ್ಮಣನು ನಿನಗೆ ಚಿಕಿತ್ಸೆ ಮಾಡುವುದಕ್ಕಾಗಿ ಬಂದಿರುವನು" ಎಂದು ಹೇಳಿಕಳಿಸಿದನು.

ರಾಜನು ಅದನ್ನು ಕೇಳಿ, "ಮಹಾ ಮಹಾ ರಾಜವೈದ್ಯರು ನನಗೆ ಚಿಕಿತ್ಸೆ ಮಾಡಲಾರದೆಹೋದರು. ಅವನ ವೆಚ್ಚಕ್ಕೆ ಏನಾದರೂ ಕೊಟ್ಟು ಕಳಿಸಿರಿ" ಎಂದನು.

ಶಕ್ರನು ಅದನ್ನು ಕೇಳಿ, "ನನಗೆ ತಂಗುವ ಮನೆಯು ವೆಚ್ಚಕ್ಕೆ ಬೇಕಾಗಿಲ್ಲ. ನಾನು ವೈದ್ಯರ ಲಾಭವನ್ನೂ ತೆಗೆದುಕೊಳ್ಳುವುದಿಲ್ಲ. ಇವನಿಗೆ ಚಿಕಿತ್ಸೆಮಾಡುತ್ತೇನೆ. ರಾಜನು ನನ್ನನ್ನು ನೋಡಲಿ" ಎಂದು ಹೇಳಿದನು.

ರಾಜನು ಅದನ್ನು ಕೇಳಿ, " ಹಾಗಾದರೆ, ಬರಲಿ " ಎಂದನು.

ಶಕ್ರನು ಒಳಕ್ಕೆ ಬಂದು, ಜಯವಾಗಲೆಂದು ಹೇಳಿ, ಒಂದು ಕಡೆ ನಿಂತನು.

ರಾಜನು " ನೀನು ನನಗೆ ಚಿಕಿತ್ಸೆ ಮಾಡುವೆಯ ?" ಎಂದನು.

" ಹೌದು, ದೇವ."

" ಹಾಗಾದರೆ, ಚಿಕಿತ್ಸೆ ಮಾಡು."

" ಒಳ್ಳೆಯದು, ಮಹಾರಾಜ. ವ್ಯಾಧಿಯ ಲಕ್ಷಣಗಳನ್ನು ನನಗೆ ಹೇಳು. ಇದು ಏನು ಕಾರಣದಿಂದ ಉಂಟಾಯಿತು ? ಏನಾದರೂ ತಿಂದು, ಕುಡಿದು, ಹೀಗಾಯಿತೆ? ಅಥವಾ ಕಂಡು, ಕೇಳಿ, ಹೀಗಾಯಿತೆ?"

" ಅಪ್ಪಾ, ಏನೋ ಕೇಳಿದುದರಿಂದ ನನಗೆ ವ್ಯಾಧಿ ಉಂಟಾಯಿತು."

" ನೀನು ಏನು ಕೇಳಿದೆ ?"

"ಅಪ್ಪಾ, ಒಬ್ಬ ಯುವಕನು ಬಂದು, ' ಮೂರು ನಗರಗಳ ರಾಜ್ಯವನ್ನು ನಿನಗೆ ಹಿಡಿದುಕೊಡುವೆನು ' ಎಂದು ನನಗೆ ಹೇಳಿದನು. ನಾನು ಅವನಿಗೆ ತಂಗಲು ಸ್ಥಳವನ್ನಾಗಲಿ, ತಂಗುವ ಸ್ಥಳಕ್ಕಾಗಿ ವೆಚ್ಚವನ್ನಾಗಲಿ ಕೊಡಿಸಲಿಲ್ಲ. ಅವನು ನನ್ನಮೇಲೆ ಕೋಪಗೊಂಡು, ಇನ್ನೊಬ್ಬ ರಾಜನ ಬಳಿ ಹೋಗಿರಬೇಕು. ಆದರಿಂದ, ' ಹೀಗೆ ಮಹೈಶ್ವರ್ಯವನ್ನು ಕಳೆದುಕೊಂಡೆನು ' ಎಂದು ನಾನು ಚಿಂತಿಸಿದುದರಿಂದ, ಈ ವ್ಯಾಧಿ ಉಂಟಾಯಿತು. ಹೀಗೆ ಕಾಮದಿಂದ ಕೂಡಿದ ಚಿತ್ತ ಕಾರಣವಾಗಿ ನನಗೆ ಉಂಟಾಗಿರುವ ಈ ವ್ಯಾಧಿಗೆ ನಿನ್ನ ಕೈಲಾದರೆ ಚಿಕಿತ್ಸೆಮಾಡು. ಬ್ರಾಹ್ಮಣ, ನಾನು ಪಾಂಚಾಲ, ಕುರು, ಕೇಕಕ ಎಂಬ ಮೂರು ನಗರಗಳನ್ನು ಆಶಿಸುತ್ತೇನೆ. ಅದೂ ಅಲ್ಲದೆ, ಹೀಗೆ ಕಾಮದಿಂದ ನಡಸಲ್ಪಟ್ಟ ನನಗೆ ನೀನು ಚಿಕಿತ್ಸೆ ಮಾಡಬೇಕೆಂದೂ ಆಶಿಸುತ್ತೇನೆ."

ಆಗ ಶಕ್ರನು ಅವನನ್ನು ಕುರಿತು, " ಮಹಾರಾಜ, ನಿನಗೆ ಬೇರುಗಳ ಔಷಧದಿಂದ ಚಿಕಿತ್ಸೆಯಾಗುವುದಿಲ್ಲ. ಜ್ಞಾನದ ಔಷಧದಿಂದಲೇ ಚಿಕಿತ್ಸೆಯಾಗತಕ್ಕುದು " ಎಂದು ಹೇಳಿ, " ಕೆಲವರು ಕಾಳಸರ್ಪ ಕಡಿದವರಿಗೆ ಚಿಕಿತ್ಸೆ ಮಾಡುವರು. ಯಕ್ಷರಿಂದ ಗಾಯಗೊಂಡವರಿಗೆ ಕೆಲವರು

ಚಿಕಿತ್ಸೆ ಮಾಡುವರು. ಕಾಮದಿಂದ ನಡಸಲ್ಪಟ್ಟವರಿಗೆ ಯಾರೂ ಚಿಕಿತ್ಸೆ ಮಾಡಲಾರರು. ಸದ್ಧರ್ಮವನ್ನು ಮೀರಿದವನಿಗೆ ಚಿಕಿತ್ಸೆ ಎಲ್ಲಿ ಬಂತು?" ಎಂದನು.

ಹೀಗೆ ಮಹಾಸತ್ತ್ವನು ಅದಕ್ಕೆ ಕಾರಣವನ್ನು ಕಾಣಿಸಿಯಾದ ಮೇಲೆ "ಮಹಾರಾಜ, ಆ ಮೂರು ರಾಜ್ಯಗಳು ನಿನಗೆ ಲಭಿಸಿದರೆ, ನೀನು ಈ ನಾಲ್ಕು ನಗರಗಳಲ್ಲೂ ರಾಜ್ಯವಾಳುತ್ತಾ, ಒಂದೇ ಬಾರಿಗೆ ನಾಲ್ಕು ಜೊತೆ ಬಟ್ಟೆಗಳನ್ನು ಧರಿಸಬಲ್ಲೆಯ? ನಾಲ್ಕು ಚಿನ್ನದ ತಟ್ಟೆಗಳಲ್ಲಿ ಉಣಬಲ್ಲೆಯ? ನಾಲ್ಕು ಶ್ರೀಶಯನಗಳಲ್ಲಿ ಮಲಗಬಲ್ಲೆಯ? ಮಹಾರಾಜ, ಆಸೆಗೆ ವಶನಾಗುವುದು ತಕ್ಕುದಲ್ಲ. ಆಸೆಯೆಂಬುದೇ ವಿಪತ್ತಿಗೆ ಮೂಲ. ಅದನ್ನು ವೃದ್ಧಿಗೊಳಿಸಿದರೆ, ವೃದ್ಧಿಗೊಳಿಸುವವರು ನಾನಾತೆರದ ನರಕಗಳಲ್ಲಿ ಬಿದ್ದು ದುಃಖಪಡುವರು" ಎಂದು ರಾಜನನ್ನು ನರಕಭಯದಿಂದ ಗದರಿಸಿ, ಮಹಾಸತ್ತ್ವನು ಅವನಿಗೆ ಧರ್ಮವನ್ನು ಕಾಣಿಸಿದನು.

ರಾಜನು ಅವನ ಧರ್ಮವನ್ನು ಕೇಳಿ, ಶೋಕ ಹೋದವನಾಗಿ, ಆಗಲೇ ವ್ಯಾಧಿಯಿಲ್ಲದವನಾದನು. ಶಕ್ರನೂ ಅವನಿಗೆ ಉಪದೇಶ ಕೊಟ್ಟು, ಶೀಲಗಳಲ್ಲಿ ಅವನನ್ನು ಪ್ರತಿಸ್ಥಾಪಿಸಿ, ದೇವಲೋಕಕ್ಕೆ ಹೋದನು. ರಾಜನೂ ಅಂದಿನಿಂದ ದಾನಾದಿ ಪುಣ್ಯಗಳನ್ನು ಮಾಡಿ, ತನ್ನ ಕರ್ಮಗಳಿಗೆ ತಕ್ಕಂತೆ ಹೋದನು.

# ಸೃಗಾಲ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಹಿಮವಂತಪ್ರದೇಶದ ಸಿಂಹದ ಹೊಟ್ಟೆಯಲ್ಲಿ ಹುಟ್ಟಿದನು. ಅವನಿಗೆ ಆರು ಜನ ತಮ್ಮಂದಿರೂ ಒಬ್ಬ ತಂಗಿಯೂ ಇದ್ದರು. ಅವರೆಲ್ಲರೂ ಕಾಂಚನಗುಹೆಯಲ್ಲಿ ವಾಸಿಸುತ್ತಿದ್ದರು.

ಆ ಗುಹೆಗೆ ಸ್ವಲ್ಪ ದೂರದಲ್ಲಿ, ರಜತಪರ್ವತದಲ್ಲಿ, ಒಂದು ಸ್ಫಟಿಕ ಗುಹೆಯಿತ್ತು. ಅಲ್ಲಿ ಒಂದು ಸೃಗಾಲ ವಾಸಿಸುತ್ತಿತ್ತು.

ಕೊಂಚ ಕಾಲವಾದ ಬಳಿಕ, ಸಿಂಹದ ತಾಯಿತಂದೆ ಕಾಲವಾದರು. ಅವು, ತಮ್ಮ ತಂಗಿಯಾದ ಸಿಂಹದಮರಿಯನ್ನು ಕಾಂಚನಗುಹೆಯಲ್ಲಿ ಇರಿಸಿ, ಆಹಾರಕ್ಕಾಗಿ ಹೊರಗೆ ಹೊರಟು, ಮಾಂಸವನ್ನು ತಂದು ಅದಕ್ಕೆ ಕೊಡುತ್ತಿದ್ದವು.

ಆ ಸೃಗಾಲವು ಆ ಸಿಂಹದ ಮರಿಯನ್ನು ಕಂಡು, ಅದಕ್ಕೆ ಮನಸ್ಸು ಸೋತಿತು. ಅದರ ತಾಯಿತಂದೆ ಬದುಕಿರುವಾಗ ಅದಕ್ಕೆ ಅವಕಾಶ ಸಿಕ್ಕಿರಲಿಲ್ಲ. ಈಗ ಆ ಏಳು ಸಿಂಹಗಳೂ ಆಹಾರಕ್ಕಾಗಿ ಹೋದ ಕಾಲದಲ್ಲಿ ಸ್ಫಟಿಕಗುಹೆಯಿಂದ ಇಳಿದು, ಕಾಂಚನಗುಹೆಯ ಬಾಗಿಲಿಗೆ ಬಂದು, "ಸಿಂಹದ ಮರಿ, ನನಗೂ ನಾಲ್ಕು ಕಾಲು, ನಿನಗೂ ನಾಲ್ಕು ಕಾಲು. ನೀನು ನನ್ನ ಹೆಂಡತಿಯಾಗು, ನಾನು ನಿನ್ನ ಗಂಡನಾಗುವೆನು. ನಾವಿಬ್ಬರೂ ಒಟ್ಟಾಗಿ ಸಂತೋಷದಿಂದ ವಾಸಿಸೋಣ. ನೀನು ಇಂದಿನಿಂದ ನನ್ನನ್ನು ಅನುರಾಗದಿಂದ ಸ್ವೀಕರಿಸು" ಎಂದು ಆಸೆಹುಟ್ಟಿಸುವಂತೆ ಗುಟ್ಟುಮಾತಾಡಿತು.

ಅದು ಅದರ ಮಾತನ್ನು ಕೇಳಿ, "ಚತುಷ್ಪಾದಗಳಲ್ಲೆಲ್ಲಾ ಈ ಸೃಗಾಲ ಹೀನವಾದದ್ದು, ತುಚ್ಛವಾದದ್ದು, ಚಂಡಾಲನಂತಹದು. ನಾನು ಉತ್ತಮ ರಾಜಕುಲಕ್ಕೆ ಸೇರಿದವಳು. ಇದು ನನ್ನೊಡನೆ ಅಸಭ್ಯವಾಗಿ ಇಂತಹ ಮಾತನಾಡುವುದು. ನಾನು ಇಂತಹ ಮಾತನ್ನು ಕೇಳಿಕೊಂಡು ಬದುಕಿ ಏನು ಮಾಡಲಿ ? ಮೂಗಿನಿಂದ ಉಸಿರಾಡುವುದನ್ನು ತಡೆದು ಸಾಯುವೆನು" ಎಂದು ಚಿಂತಿಸಿತು. ಆಗ ಅದಕ್ಕೆ

"ನಾನು ಹೀಗೆ ಸಾಯುವುದು ತಕ್ಕುದಲ್ಲ. ಇಷ್ಟರಲ್ಲೇ ನನ್ನ ಅಣ್ಣಂದಿರು ಬರುವರು. ಅವರಿಗೆ ಹೇಳಿ ಸಾಯುವೆನು" ಎಂದೆನ್ನಿಸಿತು.

ಸೃಗಾಲವೂ ಅದರೊಡನೆ ಉತ್ತರ ದೊರಕದೆ, "ಈಗ ಇದು ನನ್ನೊಡನೆ ಸಂಭಾಷಿಸುವುದಿಲ್ಲ" ಎಂದು ಮನಸ್ಸು ಕುಗ್ಗಿ, ಸ್ಫಟಿಕಗುಹೆಯೊಳಕ್ಕೆ ಹೋಗಿ, ಮಲಗಿಕೊಂಡಿತು.

ಆಗ ಆ ಸಿಂಹದ ಮರಿಗಳಲ್ಲೊಂದು ಕೋಣ ಆನೆ ಮೊದಲಾದ ಯಾವುದನ್ನೋ ಕೊಂದು, ಮಾಂಸವನ್ನು ತಿಂದು, ತಂಗಿಗೂ ಭಾಗವನ್ನು ತಂದು, "ಅಮ್ಮಾ,ಮಾಂಸ ತಿನ್ನು" ಎಂದಿತು.

"ಅಣ್ಣಾ. ನಾನು ಮಾಂಸ ತಿನ್ನುವುದಿಲ್ಲ. ಸಾಯುತ್ತೇನೆ."

"ಏಕೆ ? ಕಾರಣವೇನು ?"

ಅದು ನಡೆದುದನ್ನೆಲ್ಲಾ ಹೇಳಿತು.

"ಈಗ ಆ ಸೃಗಾಲ ಎಲ್ಲಿ ?"

ಅದು, ಸ್ಫಟಿಕ ಗುಹೆಯಲ್ಲಿ ಮಲಗಿದ್ದ ಸೃಗಾಲವನ್ನು 'ಆಕಾಶದಲ್ಲಿ ಮಲಗಿದೆ' ಎಂದು ತಿಳಿದುಕೊಂಡು, "ಅಣ್ಣಾ, ಕಾಣುವುದಿಲ್ಲವೆ? ಅದು ರಜತಪರ್ವತದ ಬಳಿ ಆಕಾಶದಲ್ಲಿ ಮಲಗಿದೆ" ಎಂದಿತು.

ಸಿಂಹದ ಮರಿ ಅದು ಸ್ಫಟಿಕ ಗುಹೆಯಲ್ಲಿ ಮಲಗಿರುವುದನ್ನು ತಿಳಿಯದೆ, 'ಆಕಾಶದಲ್ಲಿ ಮಲಗಿದೆ'ಯೆಂದು ಎಣಿಸಿಕೊಂಡು, 'ಇದನ್ನು ಸಾಯಿಸುವೆನು' ಎಂದು ಸಿಂಹವೇಗದಿಂದ ನೆಗೆದು, ಸ್ಫಟಿಕಗುಹೆಯನ್ನು ಹೃದಯದಿಂದ ಹೊಡೆಯಿತು. ಅದರ ಹೃದಯ ಒಡೆದು, ಅದು ಅಲ್ಲಿಯೇ ಜೀವಬಿಟ್ಟು, ಪರ್ವತಪಾದದಲ್ಲಿ ಬಿದ್ದಿತು.

ಆಗ ಇನ್ನೊಂದು ಬಂತು. ಅದು ಅದಕ್ಕೂ ಹಾಗೆಯೇ ಹೇಳಿತು. ಅದು ಕೂಡ ಹಾಗೆಯೇ ಮಾಡಿ, ಜೀವ ಬಿಟ್ಟು, ಪರ್ವತ ಪಾದದಲ್ಲಿ ಬಿದ್ದಿತು.

ಹೀಗೆ ಆರು ಜನ ಸಹೋದರರೂ ಸತ್ತ ಮೇಲೆ, ಎಲ್ಲರಿಗೂ ಹಿಂದೆ ಬೋಧಿಸತ್ತ್ವನು ಬಂದನು. ಅವನಿಗೂ ಅದನ್ನು ತಿಳಿಸಿ, 'ಈಗ

ಅದು ಎಲ್ಲಿ?' ಎಂದೆನ್ನಲು, 'ಅದು ರಜತಪರ್ವತದ ನೆತ್ತಿಯಲ್ಲಿ ಆಕಾಶದಲ್ಲಿ ಮಲಗಿದೆ' ಎಂದಿತು.

ಬೋಧಿಸತ್ತ್ವನು "ಸೃಗಾಲಗಳು ಆಕಾಶದಲ್ಲಿ ನಿಲ್ಲುವುವೆಂಬುದು ಇಲ್ಲ. ಸ್ಫಟಿಕಗುಹೆಯಲ್ಲಿ ಮಲಗಿದುದಾಗಿರಬೇಕು" ಎಂದು ಚಿಂತಿಸಿದನು. ಅವನು ಪರ್ವತಪಾದಕ್ಕೆ ಇಳಿದು, ಆರು ಜನ ಸೋದರರು ಸತ್ತಿದ್ದುದನ್ನು ಕಂಡು, "ಇವರು ತಮ್ಮ ಅಜ್ಞಾನದಿಂದ, ತಿಳಿವಳಿಕೆಯಿಲ್ಲದುದರಿಂದ, ಸ್ಫಟಿಕಗುಹೆಯಿರುವುದನ್ನು ತಿಳಿಯದೆ ಹೃದಯದಿಂದ ಹೊಡೆದು ಸತ್ತಿರಬೇಕು. ಸರಿಯಾಗಿ ಕಾಣದೆ ಅತಿತ್ವರೆಯಿಂದ ಮಾಡುವ ಕೆಲಸ ಹೀಗೆಯೇ ಆಗುವುದು" ಎಂದನು.

ಆ ಸಿಂಹವು ಹೀಗೆಂದು ಹೇಳಿ, "ನನ್ನ ತಮ್ಮಂದಿರು ಉಪಾಯ ತಿಳಿಯದವರು. ಸೃಗಾಲವನ್ನು ಹಿಡಿಯೋಣವೆಂದು ಅತಿ ವೇಗದಿಂದ ಹಾರಿ ತಾವೇ ಸತ್ತರು. ನಾನು ಹಾಗೆ ಮಾಡದೆ, ಸ್ಫಟಿಕಗುಹೆಯಲ್ಲಿ ಮಲಗಿರುವ ಸೃಗಾಲದಹೃದಯವೇ ಒಡೆಯುವಂತೆ ಮಾಡುವೆನು" ಎಂದು ಆ ಸೃಗಾಲವು ಹತ್ತಿ ಇಳಿಯುವ ಮಾರ್ಗವನ್ನು ಚೆನ್ನಾಗಿ ಗಮನಿಸಿ, ಅದಕ್ಕೆ ಎದುರಾಗಿ ನಿಂತು, ಮೂರುಬಾರಿ ಸಿಂಹನಾದ ಮಾಡಿತು. ಭೂಮಿಯಿಂದ ಆಕಾಶದವರೆಗೂ ಒಂದೇ ಕೂಗಾಯಿತು. ಸ್ಫಟಿಕಗುಹೆಯಲ್ಲಿ ಮಲಗಿದ್ದಂತೆಯೇ ಸೃಗಾಲದ ಹೃದಯ ಹೆದರಿಕೆಯಿಂದ ಒಡೆದುಹೋಯಿತು. ಅದು ಅಲ್ಲಿಯೇ ಜೀವಬಿಟ್ಟಿತು.

# ಉರಗ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಒಂದಾನೊಂದು ಉತ್ಸವ ನಡೆಯಿತು. ಮಹಾ ಜನಸಂದಣಿ ಸೇರಿತು. ಬಹು ಮನುಷ್ಯರೂ ದೇವ ನಾಗ ಸುಪರ್ಣಾದಿಗಳೂ ಸಂದಣಿಯನ್ನು ನೋಡುವುದಕ್ಕೆ ಸೇರಿದರು.

ಅಲ್ಲಿ ಒಂದು ಕಡೆ ಒಂದು ನಾಗವೂ ಗರುಡವೂ ಸಂದಣಿಯನ್ನು ನೋಡುತ್ತಾ ಒಂದಾಗಿ ನಿಂತಿದ್ದವು. ನಾಗವು ಗರುಡನನ್ನು ಗರುಡನೆಂದು ತಿಳಿಯದೆ ಅದರ ಹೆಗಲ ಮೇಲೆ ಕೈಯಿಟ್ಟಿತು. ಗರುಡನು "ನನ್ನ ಹೆಗಲ ಮೇಲೆ ಕೈಯಿಟ್ಟವರಾರು?" ಎಂದು ಹಿಂದಿರುಗಿ ನೋಡುತ್ತಾ, ಹಾವನ್ನು ಗುರುತಿಸಿತು. ಹಾವೂ ನೋಡುತ್ತಾ ಗರುಡನನ್ನು ಗುರುತುಹಿಡಿದು ಮರಣಭಯದಿಂದ ಹೆದರಿ ನಗರದಿಂದ ಹೊರಗೆ ಹೊರಟು ನದಿಯ ಮೇಲೆ ಓಡಿತು. ಗರುಡನೂ ಅದನ್ನು ಹಿಡಿಯುವೆನೆಂದು ಅದರ ಬೆನ್ನಟ್ಟಿತು.

ಆ ಸಮಯದಲ್ಲಿ ಬೋಧಿಸತ್ತ್ವನು ತಾಪಸನಾಗಿ ನದಿಯತೀರದ ಪರ್ಣಶಾಲೆಯಲ್ಲಿ ವಾಸಮಾಡುತ್ತಾ, ಬಿಸಿಲಿನ ಬೇಗೆಯನ್ನು ಅಡಗಿಸುವುದಕ್ಕಾಗಿ ಸ್ನಾನದ ವಸ್ತ್ರವನ್ನು ತಳೆದು ನಾರುಮಡಿಯನ್ನು ಹೊರಗೆ ಇಟ್ಟು, ನದಿಗೆ ಇಳಿದು ಸ್ನಾನಮಾಡುತ್ತಿದ್ದನು.

ಹಾವು 'ಈ ತಾಪಸನನ್ನು ಆಶ್ರಯಿಸಿ ನಾನು ಬದುಕುವೆನು' ಎಂದು ತನ್ನ ಸ್ವರೂಪವನ್ನು ತೊರೆದು, ಮಣಿಯ ರೂಪವನ್ನು ರಚಿಸಿಕೊಂಡು, ನಾರುಮಡಿಯ ಒಳಗೆ ಪ್ರವೇಶಿಸಿತು. ಗರುಡನು ಬೆನ್ನಟ್ಟುತ್ತಾ ಅದು ಅಲ್ಲಿ ಪ್ರವೇಶಿಸಿದುದನ್ನು ಕಂಡು, ಋಷಿಯ ಮೇಲಿನ ಗೌರವಕ್ಕೋಸ್ಕರ ನಾರುಮಡಿಯನ್ನು ಹಿಡಿದುಕೊಳ್ಳದೆ, ಬೋಧಿಸತ್ತ್ವನನ್ನು ಕರೆದು, "ಸ್ವಾಮಿ, ನನಗೆ ಹಸಿವು. ನಿಮ್ಮ ನಾರುಮಡಿಯನ್ನು ತೆಗೆದುಕೊಳ್ಳಿರಿ. ಈ ಹಾವನ್ನು ತಿನ್ನುವೆನು" ಎಂದು ಅದನ್ನು ಸ್ಪಷ್ಟಪಡಿಸುವುದಕ್ಕಾಗಿ "ದೊಡ್ಡಹಾವು ಈ ನಾರುಮಡಿಯ ಒಳಗೆ ಸೇರಿದೆ. ನನ್ನಿಂದ ತಪ್ಪಿಸಿಕೊಳ್ಳಬೇಕೆಂದು ಮಣಿಯ ರೂಪನ್ನು ತಾಳಿದೆ. ಬ್ರಾಹ್ಮಣನಾದ

ನಿನ್ನ ಮೇಲಿನ ಗೌರವದಿಂದ, ಹಸಿವಾದರೂ ಇದನ್ನು ಹಿಡಿದು ತಿನ್ನಲಾರೆ" ಎಂದಿತು.

ಬೋಧಿಸತ್ತ್ವನು ನೀರಿನಲ್ಲಿ ನಿಂತೇ ಸುಪರ್ಣರಾಜನನ್ನು ಸ್ತುತಿಸಿ, "ನಿನ್ನನ್ನು ಬ್ರಹ್ಮನು ಕಾಪಾಡಲಿ. ನೀನು ಬಹುಕಾಲ ಬದುಕು. ನಿನಗೆ ದಿವ್ಯವಾದ ಆಹಾರ ಲಭಿಸಲಿ. ಬ್ರಾಹ್ಮಣನಾದ ನನ್ನ ಮೇಲಿನ ಗೌರವದಿಂದ, ಹಸಿವಾದರೂ ಇದನ್ನು ತಿನ್ನಬೇಡ" ಎಂದನು.

ಹೀಗೆ ಬೋಧಿಸತ್ತ್ವನು ನೀರಿನಲ್ಲಿ ನಿಂತೇ ಆ ಗರುಡನ ನಡತೆಯನ್ನು ಅನುಮೋದಿಸಿ, ಮೇಲೆ ಬಂದು, ನಾರುಮುಡಿಯನ್ನು ಧರಿಸಿ, ಅವುಗಳೆರಡನ್ನೂ ಕರೆದುಕೊಂಡು ಆಶ್ರಮಪದಕ್ಕೆ ಹೋಗಿ, ಮೈತ್ರೀ ಭಾವನೆಯ ಮಹಿಮೆಯನ್ನು ಅವುಗಳಿಗೆ ತಿಳಿಸಿ, ಎರಡಕ್ಕೂ ಒಗ್ಗಟ್ಟು ಉಂಟುಮಾಡಿದನು. ಅವು ಅಂದಿನಿಂದ ಒಟ್ಟಾಗಿ ಸಂತೋಷ ಸುಖಗಳಿಂದ ವಾಸಿಸಿದುವು.

## ಕೇಳಿಶೀಲ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ದೇವರಾಜನಾದ ಶಕ್ರನಾದನು.

ಆಗ ಬ್ರಹ್ಮದತ್ತನಿಗೆ ವಯಸ್ಸಾಗಿ ಮುದಿಯಾದ ಆನೆಯನ್ನಾಗಲಿ ಕುದುರೆಯನ್ನಾಗಲಿ ಎತ್ತನ್ನಾಗಲಿ ಕಾಣುವುದೆಂದರೆ ಆಗುತ್ತಿರಲಿಲ್ಲ. ಅವನು ಕ್ರೀಡಾಶೀಲನಾಗಿ, ಅಂತಹದನ್ನು ಕಾಣುತ್ತಲೇ ಅದರ ಬೆನ್ನಟ್ಟಿಸುವನು. ಹಳೆಯ ಗಾಡಿಯನ್ನು ಕಂಡು ಅದನ್ನು ಮುರಿದು ಹಾಕಿಸುವನು. ಮುದಿಹೆಂಗಸರನ್ನು ಕಂಡು, ಹೇಳಿಕಳಿಸಿ, ಹೊಟ್ಟೆಯ ಮೇಲೆ ಏಟು ಹೊಡೆಸಿ, ಅವರನ್ನು ಬೀಳಿಸಿ, ಪುನಃ ಏಳಿಸಿ, ಭಯ ಗೊಳಿಸುವನು. ವಯಸ್ಸಾದ ಗಂಡಸರನ್ನು ಕಂಡರೆ, ದೊಂಬರಂತೆ ನೆಲದ ಮೇಲೆ ಲಾಗಹಾಕುವುದೇ ಮೊದಲಾದ ಆಟವಾಡಿಸುವನು. ಕಾಣದೆ, "ಇಂತಹ ಮನೆಯಲ್ಲಿ ವಯಸ್ಸಾದವನು ಇದ್ದಾನೆ" ಎಂದು ಕೇಳಿದರೂ ಹೇಳಿಕಳಿಸಿ ಅವರನ್ನು ಆಡಿಸುವನು.

ಜನರು ಲಜ್ಜೆಗೊಂಡವರಾಗಿ ತಮ್ಮ ತಾಯಿತಂದೆಯರನ್ನು ರಾಷ್ಟ್ರದಿಂದಾಚೆ ಕಳಿಸುವರು. ತಾಯಿಗೂ ತಂದೆಗೂ ಸೇವೆ ಮಾಡುವ ಧರ್ಮ ಮುರಿದುಬಿತ್ತು. ರಾಜನ ಸೇವಕರೂ ಕ್ರೀಡಾಶೀಲರೇ ಆದರು. ಸತ್ತಸತ್ತವರು ನಾಲ್ಕು ನರಕಗಳ ತುಂಬಾ ಆದರು. ದೇವತೆಗಳ ಪರಿಷೆ ಕಡಮೆಯಾಯಿತು.

ಶಕ್ರನು ಹೊಸ ದೇವಪುತ್ರರನ್ನು ಕಾಣದೆ, "ಇದೇನು ಕಾರಣ?" ಎಂದು ಧ್ಯಾನಿಸುತ್ತಾ, ತಿಳಿದನು. "ಇವನನ್ನು ಅಡಗಿಸುವೆನು" ಎಂದು ಮುದುಕನಂತೆ ರೂಪತಾಳಿಕೊಂಡು, ಮುರಿದ ಗಾಡಿಯಲ್ಲಿ ಎರಡು ಮೊಸರಿನ ಮಡಕೆಗಳನ್ನು ಏರಿಸಿ, ಎರಡು ಮುದಿ ಎತ್ತುಗಳನ್ನು ಹೂಡಿಕೊಂಡು, ಒಂದು ಹಬ್ಬದ ದಿವಸ ಬಂದನು. ಬ್ರಹ್ಮದತ್ತನು ಅಲಂಕರಿಸಿದ ಆನೆಯ ಮೇಲೇರಿ, ಅಲಂಕರಿಸಿದ ನಗರವನ್ನು ಪ್ರದಕ್ಷಿಣ ಮಾಡುತ್ತಿರುವಾಗ, ಹರಕುಬಟ್ಟೆ ಹಾಕಿಕೊಂಡು ಆ ಮುರಿದ ಗಾಡಿಯನ್ನು ನಡಸುತ್ತಾ ರಾಜನ ಎದುರಿಗೆ ಬಂದನು.

ರಾಜನು ಹಳೆಯ ಗಾಡಿಯನ್ನು ಕಂಡು, "ಈ ಗಾಡಿಯನ್ನು ಆಚೆ ತೆಗೆಯಿರಿ" ಎಂದನು.

ಜನರು "ಎಲ್ಲಿ, ದೇವ ? ಕಾಣುವುದಿಲ್ಲವಲ್ಲ?" ಎಂದರು.

ಶಕ್ರನು ತನ್ನ ಪ್ರಭಾವದಿಂದ ರಾಜನಿಗೆ ಮಾತ್ರ ಅದನ್ನು ಕಾಣಿಸಿದನು.

ಆಗ ಶಕ್ರನು ಅವನ ಸಮೀಪಕ್ಕೆ ಗಾಡಿಯನ್ನು ಓಡಿಸುತ್ತಾ, ರಾಜನ ತಲೆಯ ಮೇಲೆ ಒಂದು ಗಡಿಗೆಯನ್ನು ಒಡೆದು, ರಾಜನು ತಿರುಗಿ ನೋಡುವಂತೆ ಮಾಡಿ, ಎರಡನೆಯದನ್ನು ಒಡೆದನು. ಆಗ ರಾಜನ ತಲೆಯಿಂದ ಈಚೆಕಡೆಯೂ ಆಚೆಕಡೆಯೂ ಮೊಸರು ಸೋರಿತು. ಹೀಗೆ ಶಕ್ರನು ಅವನನ್ನು ಗೋಳಾಡಿಸಿದನು, ಪೀಡಿಸಿದನು, ಅವನಿಗೆ ಜುಗುಪ್ಸೆಯುಂಟುಮಾಡಿದನು.

ಆಗ, ಅವನು ಉಪದ್ರವಪಟ್ಟುದನ್ನು ತಿಳಿದು, ಶಕ್ರನು ಗಾಡಿಯನ್ನು ಮರೆಮಾಡಿ, ಶಕ್ರನ ರೂಪವನ್ನು ನಿರ್ಮಿಸಿಕೊಂಡು ಕೈಯಲ್ಲಿ ವಜ್ರಾಯುಧವನ್ನು ಹಿಡಿದು ಆಕಾಶದಲ್ಲಿ ನಿಂತು, "ಪಾಪಿ! ಅಧರ್ಮಿಕ ರಾಜ! ನೀನೇನು ಮುದುಕನಾಗುವುದಿಲ್ಲವೆ? ನಿನ್ನ ಶರೀರವನ್ನು ಮುಪ್ಪು ಹೊಡೆಯುವುದಿಲ್ಲವೆ ? ಕ್ರೀಡಾಶೀಲನಾಗಿ ವೃದ್ಧರನ್ನು ಹೊಡೆಯುವ ಕೆಲಸ ಮಾಡುವೆ. ನಿನ್ನೊಬ್ಬನಿಂದಾಗಿ ಈ ಕೆಲಸಮಾಡಿ, ಸತ್ತಸತ್ತವರೆಲ್ಲಾ ನರಕಗಳ ತುಂಬಾ ಆಗುತ್ತಿದ್ದಾರೆ. ಜನರು ತಾಯಿ ತಂದೆಗಳನ್ನು ಕಾಪಾಡುವಂತಿಲ್ಲ. ಇಂತಹ ಕಾರ್ಯದಿಂದ ನೀನು ವಿರಾಮಗೊಳ್ಳದಿದ್ದರೆ, ವಜ್ರಾಯುಧದಿಂದ ನಿನ್ನ ತಲೆಯನ್ನು ಸೀಳಿ ಬಿಡುವೆನು. ಇಂದಿನಿಂದ ಇಂತಹ ಕೆಲಸ ಮಾಡಬೇಡ" ಎಂದು ಗದರಿಸಿ, ತಾಯಿ ತಂದೆಗಳ ಗುಣವನ್ನು ಹೇಳಿತಿಳಿಸಿ, ವೃದ್ಧರನ್ನು ಸೇವಿಸುವುದರಿಂದಾಗುವ ಲಾಭವನ್ನು ಪ್ರಕಾಶಪಡಿಸಿ, ಬುದ್ಧಿ ಹೇಳಿ, ಸ್ವಸ್ಥಾನಕ್ಕೆ ಹೋದನು.

ರಾಜನಿಗೆ ಅಂದಿನಿಂದ ಅಂತಹ ಕೆಲಸ ಮಾಡಲು ಮನಸ್ಸು ಕೂಡ ಬರಲಿಲ್ಲ.

# ವೀರಕ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಹಿಮವಂತ ಪ್ರದೇಶದಲ್ಲಿ ನೀರುಕಾಗೆಯ ಹೊಟ್ಟೆಯಲ್ಲಿ ಹುಟ್ಟಿಬಂದು, ಒಂದು ಸರೋವರದ ಬಳಿ ವಾಸಮಾಡಿದನು. ಅವನಿಗೆ ವೀರಕನೆಂದು ಹೆಸರಾಯಿತು.

ಆಗ ಕಾಶಿರಾಷ್ಟ್ರದಲ್ಲಿ ದುರ್ಭಿಕ್ಷವಾಯಿತು. ಜನರು ಕಾಗೆಗಳಿಗೆ ಅನ್ನ ಹಾಕಲಾರದೆಹೋದರು, ಯಕ್ಷರಿಗೂ ನಾಗರಿಗೂ ಬಲಿಗಳನ್ನು ಒಪ್ಪಿಸಲಾರದೆಹೋದರು. ಆ ಹೊಟ್ಟೆಗಿಲ್ಲದ ರಾಷ್ಟ್ರದಿಂದ ಕಾಗೆಗಳು ಒಂದೊಂದಾಗಿ ಕಾಡನ್ನು ಹೊಕ್ಕವು.

ಆಗ ವಾರಾಣಸಿಯಲ್ಲಿ ವಾಸಿಸುತ್ತಿದ್ದ ಸವಿಷ್ಟಕನೆಂಬ ಒಂದು ಕಾಗೆ ತನ್ನ ಹೆಂಡತಿಯನ್ನು ಕರೆದುಕೊಂಡು ವೀರಕನು ವಾಸಿಸುತ್ತಿದ್ದಲ್ಲಿಗೆ ಹೋಗಿ, ಅದೇ ಸರೋವರದ ಬಳಿ ಒಂದು ಕಡೆ ವಾಸಮಾಡಿಕೊಂಡಿತು.

ಅದು ಒಂದು ದಿವಸ ಆ ಸರೋವರದಲ್ಲಿ ಆಹಾರ ಕೊಳ್ಳುತ್ತಾ, ವೀರಕನು ಸರೋವರಕ್ಕೆ ಇಳಿದು ಮೀನು ತಿಂದು ಪುನಃ ಮೇಲೆ ಬಂದು ಮೈ ಒಣಗಿಸಿಕೊಳ್ಳುವುದನ್ನು ಕಂಡು, "ಈ ಕಾಗೆಯನ್ನು ಆಶ್ರಯಿಸಿ ಅನೇಕ ಮೀನುಗಳನ್ನು ಪಡೆಯಬಹುದು. ಇದರ ಸೇವೆ ಮಾಡುವೆನು" ಎಂದು ಅದರ ಬಳಿ ಸಾರಿ, "ಏನಯ್ಯಾ?" ಎನ್ನಲು, "ಸ್ವಾಮಿ, ನಿನ್ನ ಸೇವೆಮಾಡಲು ಬಯಸುವೆನು" ಎಂದು ಹೇಳಿ, "ಒಳ್ಳೆಯದು" ಎಂದು ಅದು ಒಪ್ಪಿಕೊಳ್ಳಲು, ಅಂದಿನಿಂದ ಅದರ ಸೇವೆಗೆ ತೊಡಗಿತು.

ವೀರಕನೂ ಅಂದಿನಿಂದ ತಾನು ಬದುಕಲು ಸಾಕಷ್ಟು ತಿಂದು, ಮೀನುಗಳನ್ನು ಮೇಲೆತ್ತಿ ಸವಿಷ್ಟಕನಿಗೆ ಕೊಡುವುದು. ಅದು ಕೂಡ ತಾನು ಬದುಕಲು ಸಾಕಷ್ಟು ತಿಂದು, ಉಳಿದುದನ್ನು ಹೆಂಡತಿಗೆ ಕೊಡುವುದು.

ಅದಾದನಂತರ ಅದಕ್ಕೆ "ಇದು ಕಪ್ಪಾದ ನೀರು ಕಾಗೆ, ನಾನೂ ಕಪ್ಪಾದವನು. ಕಣ್ಣು ಕೊಕ್ಕು ಕಾಲುಗಳಲ್ಲಿ ಯಾವುದರಲ್ಲೂ ಇದಕ್ಕೂ ನನಗೂ ಭೇದವಿಲ್ಲ. ಇಂದಿನಿಂದ ಇದು ಹಿಡಿದ ಮೀನುಗಳೊಡನೆ

ನನಗೇನೂ ಕೆಲಸವಿಲ್ಲ. ನಾನೇ ಮೀನು ಹಿಡಿಯುವೆನು" ಎಂದು ಜಂಬ ಬಂತು.

ಅದು ವೀರಕನ ಬಳಿಸಾರಿ, "ಅಯ್ಯಾ, ಇಂದಿನಿಂದ ನಾನೇ ಸರೋವರಕ್ಕೆ ಇಳಿದು ಮೀನು ಹಿಡಿಯುವೆನು" ಎಂದಿತು.

"ಅಯ್ಯಾ, ನೀರಿಗಿಳಿದು ಮೀನು ಹಿಡಿಯುವ ಕಾಕಕುಲದಲ್ಲಿ ನೀನು ಹುಟ್ಟಲಿಲ್ಲ. ನಾಶವಾಗಬೇಡ" ಎಂದು ಅದು ತಡೆಯಿತು.

ಆದರೂ ಸವಿಷ್ಟಕನು ಅದರ ಮಾತನ್ನು ಕೊಳ್ಳದೆ ಸರೋವರಕ್ಕೆ ಇಳಿದು, ನೀರನ್ನು ಹೊಕ್ಕು, ಮುಳುಗಿ, ಶೈವಲಗಳನ್ನು ಕತ್ತರಿಸಿಕೊಂಡು ಮೇಲೆ ಬರಲಾರದೆಹೋಯಿತು. ಶೈವಲಗಳ ಒಳಗೆ ಸಿಕ್ಕಿಕೊಂಡಿತು. ಕೊಕ್ಕಿನ ತುದಿ ಮಾತ್ರ ತಿಳಿದುಬರುತ್ತಿತ್ತು. ಅದು ಉಸಿರಾಡಲಾರದೆ ನೀರಿನ ಒಳಗೇ ಜೀವಬಿಟ್ಟಿತು.

ಆಗ ಅದರ ಹೆಂಡತಿ ಅದು ಬರುವುದನ್ನು ಕಾಣದೆ, ನಡೆದುದನ್ನು ತಿಳಿಯಬೇಕೆಂದು ವೀರಕನ ಬಳಿ ಹೋಗಿ, "ಸ್ವಾಮಿ, ಸವಿಷ್ಟಕನು ಕಂಡುಬರುವುದಿಲ್ಲ. ಅದೆಲ್ಲಿ?" ಎಂದು ಕೇಳುತ್ತಾ, "ವೀರಕ, ಮಂಜುಳವಾಗಿ ಮಾತನಾಡುವ, ನವಿಲಿನಂತೆ ಹೊಳೆಯುವ ಕತ್ತುಳ್ಳ, ನನ್ನ ಪತಿಯಾದ ಸವಿಷ್ಟಕನನ್ನು ನೋಡಿದೆಯ?" ಎಂದಿತು.

ವೀರಕನು ಅದನ್ನು ಕೇಳಿ, "ಹೌದು, ನಿನ್ನ ಗಂಡ ಹೋಗಿರುವ ಸ್ಥಾನ ನನಗೆ ಗೊತ್ತು" ಎಂದು ಹೇಳುತ್ತಾ, "ನೀರಿನಲ್ಲೂ ನೆಲದಲ್ಲೂ ಸಂಚರಿಸುತ್ತಾ ನಿತ್ಯವೂ ಮೀನು ತಿನ್ನುವ ಹಕ್ಕಿಯನ್ನು ಅನುಕರಿಸ ಹೋಗಿ, ಸವಿಷ್ಟಕನು ಶೈವಲಗಳಲ್ಲಿ ಸಿಕ್ಕಿಬಿದ್ದು ಸತ್ತಿತು" ಎಂದಿತು.

ಹೆಣ್ಣುಕಾಗೆ ಅದನ್ನು ಕೇಳಿ ಗೋಳಾಡುತ್ತಾ ವಾರಾಣಸಿಗೇ ಹೋಯಿತು.

# ಗೂಢ ಪ್ರಾಣಿ

ಹಿಂದೆ, ಅಂಗ ಮಾಗಧಗಳ ಜನರು ಒಬ್ಬರೊಬ್ಬರ ರಾಷ್ಟ್ರಗಳಿಗೆ ಹೋಗುತ್ತಿದ್ದರು. ಆಗ ಒಂದು ದಿವಸ ಅವರು ಎರಡೂ ರಾಷ್ಟ್ರಗಳ ಗಡಿಯ ಒಂದು ಮನೆಯಲ್ಲಿ ತಂಗಿ, ಸುರೆಯನ್ನು ಕುಡಿದು, ಮೀನು ಮಾಂಸವನ್ನು ತಿಂದು, ಬೆಳಗ್ಗೆ ಗಾಡಿಗಳನ್ನು ಹೂಡಿಕೊಂಡು ಹೋದರು.

ಅವರು ಹೋದಾಗ, ಸೆಗಣಿಯನ್ನು ತಿಂದು ಜೀವಿಸುವ ಒಂದು ಪ್ರಾಣಿ ಸೆಗಣಿಯ ವಾಸನೆಯಿಂದ ಬಂದಿತು. ಬಂದು, ಅವರು ಕುಡಿದ ಕಡೆ ಚೆಲ್ಲಿದ್ದ ಸುರೆಯನ್ನು ಕಂಡು, ಬಾಯಾರಿಕೆಗಾಗಿ ಅದನ್ನು ಕುಡಿದು, ಮದಹೊಂದಿ, ಸೆಗಣಿಯ ಮುದ್ದೆಯ ಮೇಲೇರಿತು.

ಹಸಿ ಸೆಗಣಿ, ಅದು ಏರಿದುದರಿಂದ ಕೊಂಚ ಕುಸಿಯಿತು. ಆಗ ಅದು "ಭೂಮಿ ನನ್ನ ಭಾರ ತಾಳಲಾರದು" ಎಂದು ಕೂಗಿಕೊಂಡಿತು.

ಅದೇ ಕ್ಷಣದಲ್ಲಿ ಒಂದು ಮದದಾನೆ ಆ ಎಡೆಯನ್ನು ಸೇರಿ, ಸೆಗಣಿಯ ವಾಸನೆಯನ್ನು ಮೂಸಿ, ಜುಗುಪ್ಸೆಪಟ್ಟು ಹೊರಟಿತು. ಅದು ಅದನ್ನು ಕಂಡು, "ಇದು ಭಯಗೊಂಡು ಓಡುತ್ತಿದೆ" ಎಂದು ಎಣಿಸಿ, "ಇದರೊಡನೆ ಕಾದಾಡಬೇಕು" ಎಂದು ಅದನ್ನು ಕಾಳಗಕ್ಕೆ ಕರೆಯುತ್ತಾ "ಶೂರನಾದ ನನ್ನೊಡನೆ ಶೂರನಾದ ನೀನು ವಿಕ್ರಾಂತದಿಂದ ಹೋರಾಡು, ಬಾ. ಬಾ, ಆನೆ, ಹಿಂದಿರುಗು. ಹೆದರಿಕೊಂಡೇಕೆ ಓಡುವೆ? ನನ್ನ ನಿನ್ನ ವಿಕ್ರಮವನ್ನು ಅಂಗ ಮಾಗಧಗಳವರು ನೋಡಲಿ" ಎಂದಿತು.

ಆ ಆನೆ ಕಿವಿಕೊಟ್ಟು, ಅದರ ಮಾತು ಕೇಳಿ, ಹಿಂದಿರುಗಿ, ಅದರ ಬಳಿ ಹೋಗಿ, ಅದನ್ನು ಹೀಯ್ಯಾಳಿಸುತ್ತಾ, "ನಿನ್ನನ್ನು ಕಾಲಿನಿಂದಾಗಲಿ ಕೊಂಬಿನಿಂದಾಗಲಿ ಸೊಂಡಿಲಿನಿಂದಾಗಲಿ ಕೊಲ್ಲುವುದಿಲ್ಲ. ನಿನ್ನನ್ನು ಲದ್ದಿಯಿಂದ ಕೊಲ್ಲುವೆನು. ಸೆಗಣಿ ಸೆಗಣಿಯಿಂದ ಸಾಯಲಿ" ಎಂದು ಅದರ ತಲೆಯ ಮೇಲೆ ದೊಡ್ಡ ಲದ್ದಿಯನ್ನು ಬೀಳಿಸಿ, ನೀರು ಬಿಟ್ಟು, ಅಲ್ಲಿಯೇ ಅದರ ಜೀವವನ್ನು ಕೊನೆಗಾಣಿಸಿ, ಘೀಂಕರಿಸುತ್ತಾ ಕಾಡಿನೊಳಕ್ಕೆ ಹೋಯಿತು.

# ಕಿಂಶುಕೋಪಮ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಅವನಿಗೆ ನಾಲ್ವರು ಮಕ್ಕಳಾದರು.

ಅವರು ಒಂದು ದಿವಸ ಸಾರಥಿಯನ್ನು ಕರೆದು, "ಅಯ್ಯಾ, ನಾವು ಕಿಂಶುಕವನ್ನು ಕಾಣಬಯಸುವೆವು. ನಮಗೆ ಕಿಂಶುಕವೃಕ್ಷವನ್ನು ಕಾಣಿಸು" ಎಂದರು.

ಸಾರಥಿ "ಒಳ್ಳೆಯದು, ಕಾಣಿಸುತ್ತೇನೆ" ಎಂದು ಹೇಳಿ, ನಾಲ್ವರಿಗೂ ಒಟ್ಟಿಗೆ ತೋರಿಸದೆ, ಜ್ಯೇಷ್ಠಪುತ್ರನನ್ನು ಮಾತ್ರ ರಥದಲ್ಲಿ ಕುಳ್ಳಿರಿಸಿ ಕಾಡಿಗೆ ಕರೆದುಕೊಂಡು ಹೋಗಿ, "ಇದು ಕಿಂಶುಕ" ಎಂದು ಕುಡಿಬಿಡುವ ಕಾಲದಲ್ಲಿ ಕಿಂಶುಕವನ್ನು ಕಾಣಿಸಿದನು. ಇನ್ನೊಬ್ಬನಿಗೆ ಚಿಗುರೆಲೆಯ ಕಾಲದಲ್ಲೂ, ಮತ್ತೊಬ್ಬನಿಗೆ ಹೂಬಿಟ್ಟ ಕಾಲದಲ್ಲೂ, ಬೇರೊಬ್ಬನಿಗೆ ಫಲಬಿಟ್ಟ ಕಾಲದಲ್ಲೂ ಕಾಣಿಸಿದನು.

ಅನಂತರ ನಾಲ್ವರು ಸೋದರರೂ ಒಂದಾಗಿ ಕುಳಿತು, "ಕಿಂಶುಕವೆಂಬುದು ಹೇಗಿದೆ?" ಎಂದು ಮಾತನಾಡುತ್ತಿದ್ದರು. ಒಬ್ಬನು "ಸುಟ್ಟ ಕೊರಡಿನಂತಿದೆ" ಎಂದನು. ಎರಡನೆಯವನು "ಆಲದ ಮರದಂತಿದೆ" ಎಂದನು. ಮೂರನೆಯವನು "ಮಾಂಸದ ಮುದ್ದೆಯಂತಿದೆ" ಎಂದನು. ನಾಲ್ಕನೆಯವನು "ಶಿರೀಷ ವೃಕ್ಷದಂತಿದೆ" ಎಂದನು.

ಅವರಲ್ಲಿ ಒಬ್ಬರಿಗೆ ಇನ್ನೊಬ್ಬರ ಮಾತು ಸರಿಬರಲಿಲ್ಲ. ಅವರು ತಂದೆಯ ಬಳಿಹೋಗಿ, "ದೇವ, ಕಿಂಶುಕವೆಂಬುದು ಎಂತಹದು?" ಎಂದು ಕೇಳಿ, "ನೀವೇನು ಹೇಳಿದಿರಿ?" ಎನ್ನಲು, ತಾವು ಮಾತನಾಡಿದ ಬಗೆಯನ್ನು ರಾಜನಿಗೆ ತಿಳಿಸಿದರು.

ರಾಜನು "ನೀವು ನಾಲ್ವರೂ ಕಿಂಶುಕವನ್ನು ಕಂಡಿರಿ. ಆದರೆ ಕಿಂಶುಕವನ್ನು ಕಂಡಾಗ, ನೀವು 'ಇಂತಹ ಕಾಲದಲ್ಲಿ ಕಿಂಶುಕ ಹೇಗಿರುವುದು? ಇಂತಹ ಕಾಲದಲ್ಲಿ ಕಿಂಶುಕ ಹೇಗಿರುವುದು?' ಎಂದು ವಿಭಾಗಮಾಡಿ ಸಾರಥಿಯನ್ನು ಕೇಳಲಿಲ್ಲ. ಅದರಿಂದ ನಿಮಗೆ ಸಂದೇಹ ಹುಟ್ಟಿತು" ಎಂದು ಹೇಳಿದನು.

ಶ್ರೀ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕಾಶಿರಾಷ್ಟ್ರದ ಬ್ರಾಹ್ಮಣಕುಲದಲ್ಲಿ ಹುಟ್ಟಿದನು. ವಯಸ್ಸು ಬಂದ ಮೇಲೆ ತಕ್ಷಶಿಲೆಯಲ್ಲಿ ವಿದ್ಯೆಗಳನ್ನು ಕಲಿತು, ಮನೆಯಲ್ಲಿ ವಾಸಮಾಡುತ್ತಿದ್ದು, ತಾಯಿತಂದೆ ಕಾಲವಾದಾಗ ಖಿನ್ನನಾಗಿ ಮನೆ ಬಿಟ್ಟು ಹೊರಟು, ಹಿಮವಂತ ಪ್ರದೇಶದಲ್ಲಿ ಋಷಿಯಂತೆ ವಾಸಿಸಿ ಸಮಾಪತ್ತಿಗಳನ್ನು ಉಂಟುಮಾಡಿಕೊಂಡನು.

ಅನಂತರ ಬಹುಕಾಲದ ಬಳಿಕ ಉಪ್ಪುಹುಳಿಗಳ ರುಚಿನೋಡುವುದಕ್ಕಾಗಿ ಹೋಗಿ, ವಾರಾಣಸಿರಾಜನ ಉದ್ಯಾನದಲ್ಲಿ ವಾಸಮಾಡಿದನು. ಮರುದಿವಸ ಭಿಕ್ಷೆಗಾಗಿ ತಿರುಗುತ್ತಾ ಹಸ್ತ್ಯಾಚಾರ್ಯನ ಮನೆಬಾಗಿಲಿಗೆ ಬಂದನು. ಅವನು ಅವನ ಸಂಚಾರದಿಂದಲೂ ವಿಹಾರದಿಂದಲೂ ಪ್ರಸನ್ನನಾಗಿ, ಭಿಕ್ಷೆಯನ್ನು ಕೊಟ್ಟು, ಉದ್ಯಾನದಲ್ಲಿ ವಾಸಮಾಡಿಸಿ, ನಿತ್ಯವೂ ಆರೈಕೆಮಾಡುತ್ತಿದ್ದನು.

ಆ ವೇಳೆಯಲ್ಲಿ ಒಬ್ಬ ಕಟ್ಟಿಗೆ ತರುವವನು ಕಾಡಿನಿಂದ ಕಟ್ಟಿಗೆ ತರುತ್ತಾ, ಕಾಲಕ್ಕೆ ಸರಿಯಾಗಿ ನಗರವನ್ನು ಪ್ರವೇಶಿಸಲಾಗಲಿಲ್ಲ. ಸಾಯಂಕಾಲ ಒಂದು ದೇವಾಲಯದಲ್ಲಿ ಕಟ್ಟಿಗೆಯ ಕಂತೆಯನ್ನು ತಲೆಯ ಕೆಳಗೆಮಾಡಿ ಮಲಗಿದನು.

ದೇವಾಲಯದಲ್ಲಿ ಕಟ್ಟಿಹಾಕದೆ ಬಿಟ್ಟ ಬಹು ಕೋಳಿಗಳಿದ್ದುವು. ಅವು ಅಲ್ಲಿಗೆ ಸ್ವಲ್ಪ ದೂರದ ಮರದಲ್ಲಿ ಮಲಗಿದ್ದವು. ಅವುಗಳಲ್ಲಿ ಮೇಲೆ ಮಲಗಿದ್ದ ಕೋಳಿ ಬೆಳಗಿನ ಜಾವದಲ್ಲಿ ಕೆಳಗೆ ಮಲಗಿದ್ದ ಕೋಳಿಯ ಮೈಮೇಲೆ ಅಚ್ಚಿಕ್ಕಿತು. "ನನ್ನ ಮೈಮೇಲೆ ಅಚ್ಚಿಕ್ಕಿದವರಾರು?" ಎಂದು ಅದು ಕೇಳಲು, "ನಾನು" ಎಂದಿತು. "ಏಕೆ?" ಎಂದು ಕೇಳಲು, "ಗಮನಿಸಲಿಲ್ಲ" ಎಂದು ಹೇಳುತ್ತಾ ಪುನಃ ಅಚ್ಚಿಕ್ಕಿತು.

ಆಗ ಎರಡೂ ಒಂದನ್ನೊಂದು ಆಡಿಕೊಳ್ಳುತ್ತಾ "ನಿನ್ನ ಬಲವೇನು? ನಿನ್ನ ಬಲವೇನು?" ಎಂದು ಕಲಹವಾಡಿದವು. ಆಗ ಕೆಳಗೆ ಮಲಗಿದ್ದ ಕೋಳಿ, "ನನ್ನನ್ನು ಕೊಂದು, ಬೆಂಕಿಯಲ್ಲಿ

ಬೇಯಿಸಿದ ನನ್ನ ಮಾಂಸವನ್ನು ತಿಂದರೆ, ಬೆಳಗಾಗುವ ವೇಳೆಗೆ ಸಾವಿರ ಕಾರ್ಷಾಪಣ ದೊರಕುತ್ತದೆ" ಎಂದಿತು.

ಮೇಲೆ ಮಲಗಿದ್ದ ಕೋಳಿ, "ಓವೋ, ನೀನು ಇಷ್ಟಕ್ಕೇ ಗರ್ವ ಪಡಬೇಡ. ನನ್ನ ಮೈಯೊಳಗಿನ ಗಟ್ಟಿಮಾಂಸವನ್ನು ತಿಂದವನು ರಾಜ ನಾಗುವನು. ಹೊರಗಿನ ಮಾಂಸವನ್ನು ತಿಂದ ಪುರುಷನು ಸೇನಾಪತಿ ಯಾಗುವನು, ತಿಂದ ಸ್ತ್ರೀ ಪಟ್ಟದ ರಾಣಿಯಾಗುವಳು. ಮೂಳೆಯ ಬಳಿಯ ಮಾಂಸವನ್ನು ತಿಂದವನು ಸಂಸಾರಿಯಾಗಿದ್ದರೆ ಭಂಡಾರಿ ಯಾಗುವನು, ಸಂನ್ಯಾಸಿಯಾಗಿದ್ದರೆ ರಾಜನಿಗೆ ಹಿತೈಷಿಯಾಗುವನು" ಎಂದಿತು.

ಕಟ್ಟಿಗೆ ತರುವವನು ಅವುಗಳ ಮಾತನ್ನು ಕೇಳಿ, "ರಾಜ್ಯ ದೊರಕಿದರೆ ಸಾವಿರದಿಂದೇನೂ ಕೆಲಸವಿಲ್ಲ" ಎಂದು ಹತ್ತಿ, ಮೇಲೆ ಮಲಗಿದ್ದ ಕೋಳಿಯನ್ನು ಹಿಡಿದು, ಸಾಯಿಸಿ, ಸೆರಗಿನಲ್ಲಿ ಕಟ್ಟಿ, 'ರಾಜ ನಾಗುವೆನು' ಎಂದು ಹೋಗಿ, ತೆರೆದ ಬಾಗಿಲಿನಿಂದ ನಗರದೊಳಕ್ಕೆ ಹೊಕ್ಕು, ಕೋಳಿಯ ಚರ್ಮವನ್ನು ಸುಲಿದು, ಹೊಟ್ಟೆಯನ್ನು ಶೋಧಿಸಿ, "ಕೋಳಿಯ ಮಾಂಸವನ್ನು ಚೆನ್ನಾಗಿ ಅಡುಗೆ ಮಾಡು" ಎಂದು ಹೆಂಡತಿಗೆ ಕೊಟ್ಟನು. ಅವಳು ಕೋಳಿಯ ಮಾಂಸವನ್ನೂ ಅನ್ನವನ್ನೂ ಅಡುಗೆಮಾಡಿ, "ಊಟ ಮಾಡೋಣ" ವೆಂದು ಅವನ ಮುಂದಿಟ್ಟಳು.

ಅವನು "ಭದ್ರೆ, ಈ ಮಾಂಸ ಮಹಾ ಪ್ರಭಾವವುಳ್ಳದ್ದು. ಇದನ್ನು ತಿಂದು ನಾನು ರಾಜನಾಗುವೆನು, ನೀನು ಪಟ್ಟದ ರಾಣಿ ಯಾಗುವೆ" ಎಂದು ಆ ಅನ್ನವನ್ನೂ ಮಾಂಸವನ್ನೂ ತೆಗೆದುಕೊಂಡು ಗಂಗಾತೀರಕ್ಕೆ ಹೋಗಿ, "ಸ್ನಾನಮಾಡಿ ತಿನ್ನುವೆನು" ಎಂದು ಅನ್ನದ ಪಾತ್ರೆಯನ್ನು ತೀರದಲ್ಲಿಟ್ಟು, ಸ್ನಾನಕ್ಕಾಗಿ ಇಳಿದನು.

ಅದೇ ಕ್ಷಣದಲ್ಲಿ ಗಾಳಿಯಿಂದ ನೀರು ಉಕ್ಕಿ ಬಂದು ಅನ್ನದ ಪಾತ್ರೆಯನ್ನು ಕೊಂಡುಹೋಯಿತು. ನದಿಯ ಪ್ರವಾಹ ಅದನ್ನು ಒಯ್ಯುತ್ತಿರಲು, ನದಿಯ ಕೆಳಗಡೆ ಆನೆಗಳಿಗೆ ಸ್ನಾನಮಾಡಿಸುತ್ತಿದ್ದ ಒಬ್ಬ ಹಸ್ತ್ಯಾಚಾರ್ಯನಾದ ಮಹಾಮಾತ್ರನು ಅದನ್ನು ಕಂಡು, ಮೇಲೆತ್ತಿಸಿ, "ಅಲ್ಲಿ ಏನು?" ಎಂದು ಕೇಳಿದನು. ಅವರು "ಅನ್ನ

ಮತ್ತು ಕೋಳಿಯ ಮಾಂಸ, ಸ್ವಾಮಿ", ಎಂದು ಹೇಳಲು, ಅವನು ಅದನ್ನು ಮುಚ್ಚಿಸಿ, ಮುದ್ರೆಮಾಡಿಸಿ, "ನಾನು ಬರುವವರೆಗೆ ಈ ಅನ್ನವನ್ನು ಬಿಚ್ಚಬೇಡ" ಎಂದು ಹೆಂಡತಿಗೆ ಕಳಿಸಿದನು.

ಆ ಕಟ್ಟಿಗೆ ತರುವವನ ಬಾಯಿಗೆ ಮರಳೂ ನೀರೂ ಹೊಕ್ಕು, ಅವನ ಹೊಟ್ಟೆ ಊದಿಕೊಂಡಿತು. ಅವನು ಓಡಿಹೋದನು.

ಆಗ, ಆ ಹಸ್ತ್ಯಾಚಾರ್ಯನ ಹಿತೈಷಿಯಾದ ಒಬ್ಬ ತಪಸ್ವಿಯು "ನನ್ನನ್ನು ಸೇವಿಸುವ ಆ ಹಸ್ತ್ಯಾಚಾರ್ಯನು ಆನೆಯ ಬಳಿಯನ್ನು ಬಿಡುವುದಿಲ್ಲ. ಅವನಿಗೆ ಯಾವಾಗ ಸಂಪತ್ತು ಪ್ರಾಪ್ತವಾಗುತ್ತದೆ?" ಎಂದು ತನ್ನ ದಿವ್ಯಚಕ್ಷುಸ್ಸಿನಿಂದ ಗಮನಿಸುತ್ತಾ, ಅವನನ್ನು ಕಂಡು, ಅವನು ಮಾಡಿದುದನ್ನು ತಿಳಿದು, ಮೊದಲೇ ಹೋಗಿ ಆ ಹಸ್ತ್ಯಾಚಾರ್ಯನ ಮನೆಯಲ್ಲಿ ಕುಳಿತನು.

ಹಸ್ತ್ಯಾಚಾರ್ಯನು ಬಂದು, ವಂದಿಸಿ, ಒಂದು ಕಡೆ ಕುಳಿತು, ಆ ಅನ್ನದ ಪಾತ್ರೆಯನ್ನು ತರಿಸಿ, "ತಾಪಸನಿಗೆ ಮಾಂಸವನ್ನೂ ನೀರನ್ನೂ ತಂದು ನೀಡಿರಿ" ಎಂದನು. ತಾಪಸನು ಅನ್ನವನ್ನು ತೆಗೆದುಕೊಂಡು, ಮಾಂಸ ಕೊಡಲುಬಂದರೆ ತೆಗೆದುಕೊಳ್ಳದೆ, "ಈ ಮಾಂಸವನ್ನು ನಾನು ತಿಳಿದು ಹಂಚುತ್ತೇನೆ" ಎಂದನು. "ಹಾಗೆಯೇ ಮಾಡಿ, ಸ್ವಾಮಿ" ಎನ್ನಲು, ಗಟ್ಟಿಮಾಂಸ ಮೊದಲಾದವುಗಳನ್ನು ಒಂದೊಂದು ಭಾಗ ಮಾಡಿ, ಗಟ್ಟಿಮಾಂಸವನ್ನು ಹಸ್ತ್ಯಾಚಾರ್ಯನಿಗೂ ಹೊರಗಿನ ಮಾಂಸವನ್ನು ಅವನ ಹೆಂಡತಿಗೂ ಕೊಡಿಸಿದನು. ಮೂಳೆಯ ಹತ್ತಿರದ ಮಾಂಸವನ್ನು ತಾನು ಸವಿದನು. ಊಟ ಮುಗಿದ ಮೇಲೆ ಹೋಗುತ್ತಾ "ನೀನು ಇಂದಿನಿಂದ ಮೂರನೆಯ ದಿವಸ ರಾಜನಾಗುವೆ. ಮೈಮರೆಯುದಿರು" ಎಂದು ಹೇಳುತ್ತಾ ಹೊರಟನು.

ಮೂರನೆಯ ದಿವಸ ಒಬ್ಬ ಸಾಮಂತರಾಜನು ಬಂದು ವಾರಾಣಸಿಯನ್ನು ಸುತ್ತಿಮುತ್ತಿದನು. ವಾರಾಣಸಿರಾಜನು ಹಸ್ತ್ಯಾಚಾರ್ಯನಿಗೆ ರಾಜವೇಷ ಹಾಕಿಸಿ, "ಆನೆಯನ್ನು ಏರಿ ಯುದ್ಧಮಾಡು" ಎಂದು ಆಜ್ಞೆಮಾಡಿ, ತಾನು ಅಜ್ಞಾತಕವೇಷದಿಂದ ಸೇನೆಯೊಡನೆ

ತಿರುಗಾಡುತ್ತಾ, ಮಹಾವೇಗದಿಂದ ಬಂದ ಬಾಣವೊಂದು ಚುಚ್ಚಲು ಅದೇ ಕ್ಷಣದಲ್ಲೇ ಸತ್ತನು. ಆ ಹಸ್ತ್ಯಾಚಾರ್ಯನು ಅವನು ಸತ್ತುದನ್ನು ತಿಳಿದು, ಬಹು ಕಾರ್ಷಾಪಣಗಳನ್ನು ತೆಗೆದುಕೊಂಡು ಬರಿಸಿ, "ಧನ ಬೇಕಾದವರು ಮುಂದೆ ಬಂದು ಯುದ್ಧಮಾಡಲಿ" ಎಂದು ಡಂಗುರ ಹೊಯಿಸಿದನು. ಬಲಶಾಲಿಗಳಾದ ಸೈನಿಕರು ಮುಹೂರ್ತದೊಳಗೆ ಪ್ರತಿರಾಜನ ಜೀವವನ್ನು ಕೊನೆಗಾಣಿಸಿದರು.

ಅಮಾತ್ಯರು ರಾಜನ ಶರೀರಕ್ಕೆ ಮಾಡಬೇಕಾದುದನ್ನು ಮಾಡಿ, "ಯಾರನ್ನು ರಾಜನನ್ನಾಗಿ ಮಾಡೋಣ?" ಎಂದು ಎಲ್ಲರೂ ಕೂಡಿ ಆಲೋಚಿಸುತ್ತಾ "ರಾಜನು ಬದುಕಿರುವಾಗ ತನ್ನ ವೇಷವನ್ನು ಹಸ್ತ್ಯಾಚಾರ್ಯನಿಗೆ ಕೊಟ್ಟನು. ಇವನೇ ಯುದ್ಧಮಾಡಿ ರಾಜ್ಯವನ್ನು ಹಿಡಿದನು. ಇವನಿಗೇ ರಾಜ್ಯ ಕೊಡೋಣ" ಎಂದು ಅವನಿಗೆ ರಾಜ್ಯಾಭಿಷೇಕ ಮಾಡಿದರು, ಅವನ ಹೆಂಡತಿಯನ್ನು ಪಟ್ಟದರಾಣಿ ಮಾಡಿದರು. ಬೋಧಿಸತ್ತ್ವನು ರಾಜನ ಹಿತೈಷಿಯಾದನು.

# ಮಣಿಚೋರ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ವಾರಾಣಸಿಗೆ ಬಹುದೂರವಲ್ಲದ· ಗ್ರಾಮದಲ್ಲಿನ ಗೃಹಸ್ಥರ ಮನೆಯಲ್ಲಿ ಬೋಧಿಸತ್ತ್ವನು ಜನ್ಮತಾಳಿದನು.

ಅವನಿಗೆ ವಯಸ್ಸುಬರಲು, ವಾರಾಣಸಿಯಿಂದ ಒಂದು ಒಳ್ಳೆಯ ಕುಲದ ಮಗಳನ್ನು ತಂದರು. ಅವಳು ಪ್ರಿಯಳಾಗಿದ್ದಳು, ಒಳ್ಳೆಯ ರೂಪವತಿಯಾಗಿದ್ದಳು, ದೇವಾಪ್ಸರೆಯಂತೆ ನೋಟಕ್ಕೆ ತಕ್ಕವಳಾಗಿದ್ದಳು, ಪುಷ್ಪಲತೆಯಂತೆ ಲಲಿತೆಯಾಗಿದ್ದಳು, ಮತ್ತಕಿನ್ನರಿಯಂತಿದ್ದಳು. ಅವಳಿಗೆ ಸುಜಾತೆಯೆಂದು ಹೆಸರು. ಅವಳು ಪತಿವ್ರತೆ, ಶೀಲಾಚಾರಸಂಪನ್ನೆ, ವ್ರತಸಂಪನ್ನೆ. ನಿತ್ಯಕಾಲವೂ ಅವಳು ತನ್ನ ಗಂಡನ, ಅತ್ತೆ ಮಾವಂದಿರ ಸೇವೆಯಲ್ಲೇ ಇರುತ್ತಿದ್ದಳು. ಅವಳು ಬೋಧಿಸತ್ತ್ವನಿಗೆ ಪ್ರಿಯೆಯಾದಳು, ಇಷ್ಟೆಯಾದಳು. ಹೀಗೆ ಅವರಿಬ್ಬರೂ ಸಂತೋಷದಿಂದ ಒಂದೇ ಮನಸ್ಸುಳ್ಳವರಾಗಿ ಒಟ್ಟಿಗೆ ವಾಸಿಸುತ್ತಿದ್ದರು.

ಆಗ ಒಂದು ದಿವಸ ಸುಜಾತೆ "ತಾಯಿತಂದೆಯನ್ನು ನೋಡಲು ಆಸೆಯಾಗುವುದು" ಎಂದು ಬೋಧಿಸತ್ತ್ವನಿಗೆ ತಿಳಿಸಿದಳು. ಅವನು "ಒಳ್ಳೆಯದು, ಭದ್ರೆ. ದಾರಿಗೆ ಸಾಕಾಗುವಷ್ಟು ಬುತ್ತಿ ಸಿದ್ಧಪಡಿಸಿಕೊ" ಎಂದು ಬಗೆಬಗೆಯ ಖಾದ್ಯಗಳನ್ನು ಅಡುಗೆ ಮಾಡಿಸಿ, ಖಾದ್ಯವೇ ಮೊದಲಾದವುಗಳನ್ನು ಗಾಡಿಯಲ್ಲಿ ಇಡಿಸಿ, ಗಾಡಿಯನ್ನು ನಡಸಿದನು. ಅವನು ಗಾಡಿಯ ಮುಂದೆ ಇದ್ದನು, ಅವಳು ಹಿಂದೆ ಇದ್ದಳು.

ಅವರು ನಗರದ ಹತ್ತಿರ ಹೋಗಿ, ಗಾಡಿಯನ್ನು ಬಿಚ್ಚಿ, ಸ್ನಾನ ಮಾಡಿ ಉಂಡರು. ಪುನಃ ಬೋಧಿಸತ್ತ್ವನು ಗಾಡಿಯನ್ನು ಕಟ್ಟಿ, ಮುಂದೆ ಕುಳಿತನು. ಸುಜಾತೆ ಬೇರೆ ವಸ್ತ್ರಗಳನ್ನು ಧರಿಸಿ ಅಲಂಕಾರ ಮಾಡಿಕೊಂಡು ಹಿಂದೆ ಕುಳಿತಳು.

ಗಾಡಿ ನಗರದೊಳಕ್ಕೆ ಬರುವಾಗ ವಾರಾಣಸಿರಾಜನು ಆನೆಯ ಮೇಲೆ ಕುಳಿತು ನಗರ ಪ್ರದಕ್ಷಿಣಮಾಡುತ್ತಾ ಆ ಸ್ಥಳಕ್ಕೆ ಬಂದನು. ಸುಜಾತೆ ಕೆಳಗಿಳಿದು ಗಾಡಿಯ ಹಿಂದೆ ನಡೆದು ಹೋಗುತ್ತಿದ್ದಳು.

ರಾಜನು ಅವಳನ್ನು ಕಂಡನು. ಅವನ ಮನಸ್ಸನ್ನೂ ಕಣ್ಣನ್ನೂ ಅವಳ ರೂಪಸಂಪತ್ತಿ ಸೆಳೆಯಿತು. ಅವನಿಗೆ ಅವಳ ಮೇಲೆ ಆಸೆಯಾಯಿತು. ಆಗ ಅವನು "ಹೋಗು. ಇವಳಿಗೆ ಗಂಡನಿರುವನೋ ಇಲ್ಲವೋ ತಿಳಿದು ಬಾ" ಎಂದು ಒಬ್ಬ ಅಮಾತ್ಯನನ್ನು ಕಳಿಸಿದನು. ಅವನು ಹೋಗಿ ಅವಳಿಗೆ ಗಂಡನಿರುವುದನ್ನು ತಿಳಿದು, "ಗಂಡನಿದ್ದಾನೆ, ದೇವ. ಗಾಡಿಯ ಮುಂದೆ ಕುಳಿತವನು ಇವಳ ಗಂಡ" ಎಂದನು. ರಾಜನು ತನ್ನ ಸಿಕ್ಕಿ ಬಿದ್ದ ಮನಸ್ಸನ್ನು ಬಿಡಿಸಿಕೊಳ್ಳಲಾರದೆ ಕಾತರನಾಗಿ, "ಒಂದಾನೊಂದು ಉಪಾಯದಿಂದ ಇವನನ್ನು ಕೊಲ್ಲಿಸಿ, ಇವನ ಹೆಂಡತಿಯನ್ನು ಹಿಡಿಯುವೆನು" ಎಂದು ಚಿಂತಿಸಿ, ಒಬ್ಬನನ್ನು ಕರೆದು, "ಅಯ್ಯಾ, ಹೋಗು. ಬೀದಿಯಲ್ಲಿ ಹೋಗುವವನಂತೆ ಹೋಗಿ, ಈ ಚೂಡಾಮಣಿಯನ್ನು ಆ ಪುರುಷನ ಗಾಡಿಯಲ್ಲಿ ಹಾಕಿ ಬಾ" ಎಂದು ಚೂಡಾಮಣಿಯನ್ನು ಕೊಟ್ಟು ಕಳಿಸಿದನು. ಅವನು 'ಒಳ್ಳೆಯದು' ಎಂದು ಅದನ್ನು ತೆಗೆದುಕೊಂಡು ಹೋಗಿ, ಗಾಡಿಯಲ್ಲಿರಿಸಿ, "ಇರಿಸಿದೆನು, ದೇವ" ಎಂದು ಬಂದು ತಿಳಿಸಿದನು. ರಾಜನು "ನನ್ನ ಚೂಡಾಮಣಿ ಕಳೆದುಹೋಗಿದೆ" ಎಂದನು. ಜನರು ಕೋಲಾಹಲವೋ ಕೋಲಾಹಲ ಮಾಡಿದರು.

ರಾಜನು "ಎಲ್ಲಾ ದ್ವಾರಗಳನ್ನೂ ಮುಚ್ಚಿ, ಸಂಚಾರವನ್ನು ಕತ್ತರಿಸಿ, ಕಳ್ಳನನ್ನು ಹುಡುಕಿರಿ" ಎಂದನು. ರಾಜಪುರುಷರು ಹಾಗೆಯೇ ಮಾಡಿದರು. ನಗರದಲ್ಲಿ ಗಲಭೆಯೋ ಗಲಭೆಯಾಯಿತು.

ಇನ್ನೊಬ್ಬನು ಜನರನ್ನು ಕರೆದುಕೊಂಡು ಬೋಧಿಸತ್ತ್ವನ ಬಳಿ ಹೋಗಿ, "ಓವೋ, ಗಾಡಿ ನಿಲ್ಲಿಸು. ರಾಜನ ಚೂಡಾಮಣಿ ಕಳೆದು ಹೋಗಿದೆ. ಗಾಡಿಯನ್ನು ಹುಡುಕುವೆವು" ಎಂದು ಆ ಗಾಡಿಯನ್ನು ಹುಡುಕುತ್ತಾ, ತಾನು ಇರಿಸಿದ್ದ ಮಣಿಯನ್ನು ತೆಗೆದುಕೊಂಡು, ಬೋಧಿಸತ್ತ್ವನನ್ನೂ ಹಿಡಿದುಕೊಂಡು, "ಮಣಿಚೋರ" ಎಂದು ಕೈ ಕಾಲುಗಳಿಂದ ಹೊಡೆಯುತ್ತಾ, ಬೆನ್ನಹಿಂದೆ ಕೈಗಳನ್ನು ಕಟ್ಟಿ ಒಯ್ದು, "ಇವನು ಮಣಿ ಕದ್ದವನು" ಎಂದು ರಾಜನಿಗೆ ಕಾಣಿಸಿದನು.

ರಾಜನು "ಇವನ ತಲೆ ಕತ್ತರಿಸಿರಿ" ಎಂದು ಆಜ್ಞೆಮಾಡಿದನು. ಆಗ ರಾಜಪುರುಷರು ಅವನನ್ನು ಚೌಕಗಳಲ್ಲಿ ಕಶೆಗಳಿಂದ ಹೊಡೆಯುತ್ತಾ

ದಕ್ಷಿಣದ್ವಾರದ ಮೂಲಕ ನಗರದಿಂದ ಹೊರಗೆ ಕರೆದುಕೊಂಡು ಹೋದರು.

ಸುಜಾತೆಯೂ ಗಾಡಿಯನ್ನು ಬಿಟ್ಟು, ತೋಳುಗಳನ್ನು ನೀಡಿ ಗೋಳಾಡುತ್ತಾ, "ಸ್ವಾಮಿ, ನನ್ನಿಂದ ನಿನಗೆ ಈ ದುಃಖವಾಯಿತು" ಎಂದು ಹಿಂದೆಹಿಂದೆಯೇ ಹೋದಳು.

ರಾಜಪುರುಷರು "ಇವನ ತಲೆ ಕತ್ತರಿಸೋಣ" ಎಂದು ಬೋಧಿಸತ್ತ್ವನನ್ನು ಬೆನ್ನ ಮೇಲೆ ಮಲಗಿಸಿದರು. ಸುಜಾತೆಯು ಅದನ್ನು ಕಂಡು, ತನ್ನ ಶೀಲಗುಣವನ್ನು ಧ್ಯಾನಿಸುತ್ತಾ, "ಶೀಲವಂತರಿಗೆ ಹಿಂಸೆ ಉಂಟುಮಾಡುವ ಪಾಪಸಾಹಸಿಕ ಮನುಷ್ಯರನ್ನು ತಡೆಯಲು ಸಮರ್ಥರಾದ ದೇವತೆಗಳು ಈ ಲೋಕದಲ್ಲಿ ಇಲ್ಲವೆಂದು ಕಾಣುತ್ತದೆ" ಎಂದು ಮೊದಲಾಗಿ ಗೋಳಾಡುತ್ತಾ, "ದೇವತೆಗಳು ಇಲ್ಲ, ಪ್ರವಾಸ ಹೋಗಿದ್ದಾರೆ. ಲೋಕಪಾಲರುಗಳೂ ಇಲ್ಲಿ ಇಲ್ಲ. ಅಸಂಯಮಿಗಳಾಗಿ ಸಹಸಾ ಕಾರ್ಯಮಾಡುವವರನ್ನು ತಡೆದಿಡುವವರು ಯಾರೂ ಇಲ್ಲ" ಎಂದಳು.

ಹೀಗೆ ಆ ಶೀಲಸಂಪನ್ನೆಯ ಗೋಳಾಟದಿಂದ ದೇವರಾಜನಾದ ಶಕ್ರನು ಕುಳಿತಿದ್ದ ಪೀಠವು ಬಿಸಿಯಾಯಿತು. ಶಕ್ರನು "ನನ್ನನ್ನು ಶಕ್ರಪದವಿಯಿಂದ ಚ್ಯುತಿಗೊಳಿಸುವವರು ಯಾರು?" ಎಂದು ಧ್ಯಾನಿಸುತ್ತಾ, ಅಲ್ಲಿ ನಡೆದುದನ್ನು ತಿಳಿದು, "ವಾರಾಣಸಿರಾಜನು ಅತಿ ಕ್ರೂರ ಕಾರ್ಯ ಮಾಡುತ್ತಿದ್ದಾನೆ. ಶೀಲಸಂಪನ್ನೆಯಾದ ಸುಜಾತೆಯನ್ನು ಸಂಕಟಗೊಳಿಸುತ್ತಿದ್ದಾನೆ. ಈಗ ನಾನು ಹೋಗುವುದು ತಕ್ಕುದು" ಎಂದು ದೇವಲೋಕದಿಂದ ಇಳಿದು, ಆನೆಯ ಬೆನ್ನಮೇಲೆ ಕುಳಿತು ಹೋಗುತ್ತಿದ್ದ ಆ ಪಾಪಿರಾಜನನ್ನು ತನ್ನ ಪ್ರಭಾವದಿಂದ ಇಳಿಸಿ, ತಲೆ ಕಡಿಯುವ ಸ್ಥಳದಲ್ಲಿ ಬೆನ್ನಮೇಲೆ ಮಲಗಿಸಿ, ಬೋಧಿಸತ್ತ್ವನನ್ನು ಮೇಲೆಬ್ಬಿಸಿ, ಸರ್ವಾಲಂಕಾರಗಳಿಂದ ಅಲಂಕರಿಸಿ, ರಾಜವೇಷ ಹಾಕಿಸಿ, ಆನೆಯ ಕತ್ತಿನ ಮೇಲೆ ಕುಳ್ಳಿರಿಸಿದನು.

ಕೊಡಲಿಯನ್ನು ಎತ್ತಿ ತಲೆ ಕತ್ತರಿಸುವವರು ರಾಜನ ತಲೆ ಕತ್ತರಿಸಿದರು. ಕತ್ತರಿಸಿದಾಗ ಅವರಿಗೆ ಅದು ರಾಜನ ತಲೆಯೆಂದು ತಿಳಿಯಿತು.

ದೇವರಾಜನಾದ ಶಕ್ರನು ಕಣ್ಣಿಗೆ ಕಾಣುವ ಶರೀರದಿಂದ ಬೋಧಿ ಸತ್ತ್ವನ ಬಳಿಗೆ ಹೋಗಿ, ಬೋಧಿಸತ್ತ್ವನಿಗೆ ರಾಜ್ಯಾಭಿಷೇಕ ಮಾಡಿ, ಸುಜಾತೆಗೆ ಪಟ್ಟದರಾಣಿಯ ಪದವಿಯನ್ನು ಕೊಟ್ಟನು. ಅಮಾತ್ಯರೂ ಬ್ರಾಹ್ಮಣಗೃಹಪತಿಗಳು ಮೊದಲಾದವರೂ ದೇವರಾಜನಾದ ಶಕ್ರನನ್ನು ಕಂಡು, "ಅಧರ್ಮಿಕರಾಜನು ಸಾಯಿಸಲ್ಪಟ್ಟನು. ಈಗ ಶಕ್ರನು ಕೊಟ್ಟ ಧರ್ಮಿಕರಾಜನನ್ನು ಪಡೆದೆವು" ಎಂದು ಸಂತೋಷಪಟ್ಟರು.

ಶಕ್ರನೂ ಆಕಾಶದಲ್ಲಿ ನಿಂತು, "ಶಕ್ರನು ಕೊಟ್ಟಿರುವ ಈ ರಾಜನು ಇಂದು ಮೊದಲಾಗಿ ಧರ್ಮದಿಂದ ರಾಜ್ಯವಾಳುವನು. ರಾಜನು ಅಧರ್ಮಿಕನಾದರೆ, ಮಳೆ ಅಕಾಲದಲ್ಲಿ ಆಗುವುದಲ್ಲದೆ ಕಾಲದಲ್ಲಿ ಆಗದು. ಕ್ಷಾಮಭಯ, ರೋಗಭಯ, ಶಸ್ತ್ರಭಯಗಳೆಂಬ ಈ ಮೂರು ಭಯಗಳು ಬಂದೇ ತೀರುವುವು" ಎಂದು ಬುದ್ಧಿ ಹೇಳಿದನು.

ಹೀಗೆ ಶಕ್ರನು ಮಹಾಜನರಿಗೆ ಬುದ್ಧಿವಾದ ಕೊಟ್ಟು, ತನ್ನ ದೇವ ಸ್ಥಾನಕ್ಕೇ ಹೋದನು. ಬೋಧಿಸತ್ತ್ವನೂ ಧರ್ಮದಿಂದ ರಾಜ್ಯ ವಾಳುತ್ತಾ ಸ್ವರ್ಗಪದವನ್ನು ಪೂರೈಸಿದನು.

# ಮತ್ಸ್ಯೋದ್ದಾನ

## ( ಮೀನಿನ ಕಟ್ಟು )

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಆಸ್ತಿವಂತರ ಮನೆಯಲ್ಲಿ ಹುಟ್ಟಿದನು. ಬುದ್ಧಿ ಬಂದ ಮೇಲೆ ಆಸ್ತಿಯನ್ನು ಒಂದು ಕ್ರಮಕ್ಕೆ ತಂದನು. ಅವನಿಗೆ ಒಬ್ಬ ತಮ್ಮ.

ಅನಂತರ ಅವರ ತಂದೆ ಕಾಲವಾದನು. ಆಗ ಅವರು ಒಂದು ದಿವಸ " ತಂದೆಯ ಸ್ವತ್ತಿನ ವ್ಯವಹಾರ ಸಾಧಿಸೋಣ " ಎಂದು ಒಂದು ಗ್ರಾಮಕ್ಕೆ ಹೋಗಿ, ಸಾವಿರ ಕಾರ್ಷಾಪಣಗಳನ್ನು ಪಡೆದು, ಬರುವಾಗ ನದಿಯ ಹಾಯಿಕಡವಿನಲ್ಲಿ ದೋಣಿ ಹಿಂದಿರುಗುವುದನ್ನು ಕಾಯುತ್ತಾ ಬುತ್ತಿಯನ್ನು ತಿಂದರು. ಬೋಧಿಸತ್ತ್ವನು ಹೆಚ್ಚಾಗಿದ್ದ ಬುತ್ತಿಯನ್ನು ಗಂಗೆಯ ಮೀನುಗಳಿಗೆ ಕೊಟ್ಟು, ಅದರ ಪ್ರಾಪ್ತಿಯನ್ನು ನದಿಯ ದೇವತೆಗೆ ಕೊಟ್ಟನು. ದೇವತೆಯು ಆ ಪ್ರಾಪ್ತಿಯನ್ನು ಅನುಮೋದಿಸಿಯೇ ಅದರ ದಿವ್ಯವಾದ ಯಶಸ್ಸು ವೃದ್ಧಿಹೊಂದಿತು. ಆಗ ದೇವತೆ ತನ್ನ ಯಶೋವೃದ್ಧಿಯನ್ನು ಕುರಿತು ಧ್ಯಾನಿಸುತ್ತಾ ಅದರ ಕಾರಣವನ್ನು ತಿಳಿಯಿತು.

ಬೋಧಿಸತ್ತ್ವನು ತಾನು ಹೊದೆದ ವಸ್ತ್ರವನ್ನು ಮರಳ ಮೇಲೆ ಹರಡಿ, ಮಲಗಿ ನಿದ್ರೆ ಮಾಡಿದನು.

ಅವನ ತಮ್ಮನಿಗೆ ಸ್ವಲ್ಪ ಕಳ್ಳನ ಸ್ವಭಾವ. ಅವನು ಆ ಕಾರ್ಷಾಪಣಗಳನ್ನು ಬೋಧಿಸತ್ತ್ವನಿಗೆ ಕೊಡದೆ ತಾನೇ ತೆಗೆದುಕೊಳ್ಳಬೇಕೆಂದು ಬಯಸಿ, ಆ ಕಾರ್ಷಾಪಣಗಳ ಗಂಟಿನಂತೆಯೇ ನೊರಜು ಮಣ್ಣಿನ ಒಂದು ಗಂಟನ್ನು ಮಾಡಿ, ಎರಡು ಗಂಟುಗಳನ್ನೂ ಒಟ್ಟಾಗಿ ಇರಿಸಿದನು.

ಅವರು ನಾವೆಯನ್ನು ಏರಿ, ಗಂಗೆಯ ನಡುವಿಗೆ ಬರಲು, ತಮ್ಮನು ನಾವೆಯನ್ನು ಎಡವಿ, " ನೊರಜುಮಣ್ಣಿನ ಗಂಟನ್ನು ನೀರಿನಲ್ಲಿ ಎಸೆಯುವೆನು " ಎಂದುಕೊಂಡು ಸಾವಿರದ ಗಂಟನ್ನು ಎಸೆದು, " ಅಣ್ಣಾ, ಸಾವಿರದ ಗಂಟು ನೀರಿನಲ್ಲಿ ಬಿತ್ತು. ಏನು ಮಾಡೋಣ? " ಎಂದನು.

"ನೀರಿನಲ್ಲಿ ಬಿದ್ದುದಕ್ಕೆ ಏನು ಮಾಡೋಣ? ಚಿಂತಿಸಬೇಡ."

ನದಿಯ ದೇವತೆ "ಇವನು ಕೊಟ್ಟ ಪ್ರಾಪ್ತಿಯನ್ನು ಅನುಮೋದಿಸಿ ನಾನು ದಿವ್ಯಯಶಸ್ಸಿನಿಂದ ವೃದ್ಧಿ ಹೊಂದಿದೆನು. ಇವನ ಸ್ವತ್ತನ್ನು ಕಾಪಾಡುವೆನು" ಎಂದು ಚಿಂತಿಸಿ, ತನ್ನ ಪ್ರಭಾವದಿಂದ ಆ ಗಂಟನ್ನು ಒಂದು ಮಹಾಮುಖದ ಮತ್ಸ್ಯ ನುಂಗುವಂತೆ ಮಾಡಿ, ಅದನ್ನು ಕಾಪಾಡುವ ಭಾರವನ್ನು ತಾನು ವಹಿಸಿಕೊಂಡಿತು.

ಆ ಕಳ್ಳನಾದರೋ ಮನೆಗೆ ಹೋಗಿ, "ನಾನು ಅಣ್ಣನಿಗೆ ಮೋಸ ಮಾಡಿದೆ" ಎಂದು, ಗಂಟನ್ನು ಬಿಚ್ಚುತ್ತಾ ನೊರಜುಮಣ್ಣನ್ನು ಕಂಡನು. ಅವನ ಎದೆ ಒಣಗಿತು. ಅವನು ಮಂಚದ ಆಧಾರವನ್ನು ಬಿಗಿಯಾಗಿ ಹಿಡಿದು ಮಲಗಿದನು.

ಆಗ ಬೆಸ್ತರು ಮೀನು ಹಿಡಿಯಬೇಕೆಂದು ಬಲೆಗಳನ್ನು ಎಸೆದರು. ದೇವತೆಯ ಪ್ರಭಾವದಿಂದ ಆ ಮೀನು ಜಾಲದೊಳಗೆ ಹೊಕ್ಕಿತು. ಬೆಸ್ತರು ಅದನ್ನು ಹಿಡಿದು, ಮಾರುವುದಕ್ಕಾಗಿ ನಗರವನ್ನು ಹೊಕ್ಕರು.

ಜನರು ಮಹಾಮತ್ಸ್ಯವನ್ನು ಕಂಡು, ಬೆಲೆ ಕೇಳಿದರು.

ಬೆಸ್ತರು "ಸಾವಿರ ಕಾರ್ಷಾಪಣಗಳ ಜೊತೆಗೆ ಏಳು ಮಾಷ ಕೊಟ್ಟು, ಕೊಳ್ಳಿರಿ" ಎಂದರು.

ಜನರು "ಸಾವಿರ ಬೆಲೆಯ ಮತ್ಸ್ಯವನ್ನು ನಾವು ಕಂಡೆವು" ಎಂದು ಪರಿಹಾಸಮಾಡಿದರು.

ಬೆಸ್ತರು ಮತ್ಸ್ಯವನ್ನು ತೆಗೆದುಕೊಂಡು ಬೋಧಿಸತ್ತ್ವನ ಮನೆ ಬಾಗಿಲಿಗೆ ಹೋಗಿ, "ಈ ಮತ್ಸ್ಯವನ್ನು ಕೊಂಡುಕೊ" ಎಂದರು.

"ಇದಕ್ಕೆ ಬೆಲೆಯೇನು?"

"ಏಳು ಮಾಷ ಕೊಟ್ಟು, ಕೋ."

"ಇನ್ನೊಬ್ಬರಿಗೆ ಕೊಟ್ಟರೆ, ಎಷ್ಟಕ್ಕೆ ಕೊಡುವಿರಿ?"

"ಇನ್ನೊಬ್ಬರಿಗಾದರೆ ಸಾವಿರ ಕಾರ್ಷಾಪಣಗಳ ಮೇಲೆ ಏಳು ಮಾಷಗಳಿಗೆ ಕೊಡುವೆವು. ನೀನಾದರೆ, ಏಳು ಮಾಷ ಮಾತ್ರ ಕೊಟ್ಟು ತೆಗೆದುಕೋ."

ಅವನು ಅವರಿಗೆ ಏಳು ಮಾಷಗಳನ್ನು ಕೊಟ್ಟು, ಮತ್ಸ್ಯವನ್ನು ಹೆಂಡತಿಗೆ ಕಳಿಸಿದನು. ಅವಳು ಮತ್ಸ್ಯದ ಹೊಟ್ಟೆಯನ್ನು ಸೀಳುತ್ತಾ, ಸಾವಿರದ ಗಂಟನ್ನು ಕಂಡು, ಬೋಧಿಸತ್ತ್ವನಿಗೆ ತಿಳಿಸಿದಳು. ಬೋಧಿಸತ್ತ್ವನು ಅದನ್ನು ಗಮನಿಸುತ್ತಾ ತನ್ನ ಮುದ್ರೆಯನ್ನು ಕಂಡು, ಅದು ತನ್ನದೆಂಬುದನ್ನು ತಿಳಿದು, "ಇದಕ್ಕಾಗಿಯೇ ಬೆಸ್ತರು ಈ ಮತ್ಸ್ಯವನ್ನು ಇತರರಿಗೆ ಕೊಡುವಾಗ ಸಾವಿರದ ಮೇಲೆ ಏಳು ಮಾಷ ಕೇಳಿದರು; ನನಗೆ ಕೊಟ್ಟಾಗ ಮಾತ್ರ, ಸಾವಿರ ನನ್ನದಾದುದರಿಂದ ಕೇವಲ ಏಳು ಮಾಷ ತೆಗೆದುಕೊಂಡು ಕೊಟ್ಟರು. ಇದರ ಗುಟ್ಟು ತಿಳಿಯದವನನ್ನು ನಂಬಿಸಲು ಶಕ್ಯವಿಲ್ಲ" ಎಂದು ಚಿಂತಿಸಿ, "ಮೀನಿಗೆ ಸಾವಿರಕ್ಕೂ ಮೀರಿ ಬೆಲೆ ಕಟ್ಟಿದರೆಂದರೆ ಯಾರೂ ನಂಬುವುದಿಲ್ಲ. ನನಗೆ ಅದು ಏಳು ಮಾಷಗಳಿಗಾಯಿತು. ಆ ಮೀನಿನ ಕಟ್ಟು ನನಗೆ ಮಾರಾಟವಾಯಿತು" ಎಂದನು.

ಹೀಗೆ ಹೇಳಿ, "ಯಾರ ಆಶ್ರಯದಿಂದ ನನಗೆ ಈ ಕಾರ್ಷಾಪಣಗಳು ಲಭಿಸಿದವು ?" ಎಂದು ಅವನು ಚಿಂತಿಸಿದನು.

ಅದೇಕ್ಷಣದಲ್ಲಿ ನದಿಯದೇವತೆ ಅದೃಶ್ಯರೂಪದಿಂದ ಆಕಾಶದಲ್ಲಿ ನಿಂತು, "ನಾನು ಗಂಗಾದೇವತೆ. ನೀನು ಹೆಚ್ಚಾದ ಬುತ್ತಿಯನ್ನು ಮೀನುಗಳಿಗೆ ಕೊಟ್ಟು, ಅದರ ಪ್ರಾಪ್ತಿಯನ್ನು ನನಗೆ ದಾನಮಾಡಿದೆ. ಅದಕ್ಕಾಗಿ ನಾನು ನಿನ್ನ ಸ್ವತ್ತನ್ನು ಕಾಪಾಡುತ್ತಾ ಬಂದೆ" ಎಂದು ಪ್ರಕಾಶಪಡಿಸುತ್ತಾ, "ಮೀನುಗಳಿಗೆ ಊಟ ಹಾಕಿ, ನನಗೆ ದಕ್ಷಿಣೆ ಕೊಟ್ಟೆ. ಆ ದಕ್ಷಿಣೆಯನ್ನು ಸ್ಮರಿಸುತ್ತಾ ನಾನು ನಿನ್ನ ಉಪಚಾರ ಮಾಡಿದೆ" ಎಂದಿತು.

ಇದನ್ನು ಹೇಳಿ, ಆ ದೇವತೆ ಅವನ ತಮ್ಮನು ಮಾಡಿದ ಮೋಸದ ಕಾರ್ಯವನ್ನೆಲ್ಲಾ ತಿಳಿಸಿ, "ಅವನು ಎದೆಯೊಣಗಿ ಮಲಗಿರುವನು. ಕೆಟ್ಟ ಮನಸ್ಸಿನವನಿಗೆ ವೃದ್ಧಿಯೆಂಬುದಿಲ್ಲ. ನಾನು ನಿನ್ನ ಸ್ವತ್ತನ್ನು 'ಹಾಳುಮಾಡಬೇಡ'ವೆಂದು ನಿನಗೆ ತಂದುಕೊಟ್ಟಿರುವೆನು. ಇದನ್ನು ನಿನ್ನ ತಮ್ಮನಾದ ಕಳ್ಳನಿಗೆ ಕೊಡದೆ ಎಲ್ಲವನ್ನೂ ನೀನೇ ತೆಗೆದುಕೋ"

ಎಂದು ಹೇಳಿ, "ಪಿತ್ರಾರ್ಜಿತವಾದುದರಲ್ಲಿ ಅಣ್ಣನ ಪಾಲಿಗೆ ಬರಬೇಕಾದುದನ್ನು ವಂಚಿಸುವವನು ದುಷ್ಕೃತಮಾಡುವನು. ಅಂತಹ ಕೆಟ್ಟ ಮನಸ್ಸಿನವನಿಗೆ ಅಭ್ಯುದಯವಾಗುವುದಿಲ್ಲ. ಅವನು ದೇವತೆಗಳನ್ನು ಪೂಜಿಸುವುದಿಲ್ಲ" ಎಂದಿತು.

ಹೀಗೆ ದೇವತೆ, ಮಿತ್ರದ್ರೋಹಿಯಾದ ಕಳ್ಳನಿಗೆ ಕಾರ್ಷಾಪಣಗಳನ್ನು ಕೊಡಲು ಇಷ್ಟಪಡದೆ, ಹೇಳಿತು. ಬೋಧಿಸತ್ತ್ವನಾದರೋ "ಹೀಗೆ ಮಾಡಲು ಶಕ್ಯವಿಲ್ಲ" ಎಂದು ಅವನಿಗೂ ಐದು ನೂರನ್ನು ಕಳಿಸಿಯೇ ಕಳಿಸಿದನು.

# ಬಲಾಹಾಶ್ವ

ಹಿಂದೆ, ತಾಮ್ರಪರ್ಣಿದ್ವೀಪದಲ್ಲಿ ಶಿರೀಷವಸ್ತುವೆಂಬ ಯಕ್ಷನಗರವಿತ್ತು. ಅಲ್ಲಿ ಯಕ್ಷಿಣಿಯರು ವಾಸಿಸುತ್ತಿದ್ದರು. ಮುರಿದ ಹಡಗು ದೋಣಿಗಳು ಬಂದಾಗ, ಅವರು ಅಲಂಕಾರಮಾಡಿಕೊಂಡು, ಖಾದ್ಯ ಭೋಜ್ಯಗಳನ್ನು ತೆಗೆಯಿಸಿಕೊಂಡು, ದಾಸಿಯರ ಗುಂಪನ್ನು ಸುತ್ತಾ ಕರೆದುಕೊಂಡು, ಮಕ್ಕಳನ್ನು ಸೊಂಟದಲ್ಲಿ ಎತ್ತಿಕೊಂಡು, ವಾಣಿಜರ ಬಳಿಸಾರುವರು. ವಾಣಿಜರು "ಮನುಷ್ಯರ ವಾಸಸ್ಥಾನಕ್ಕೆ ಬಂದೆವು" ಎಂದು ತಿಳಿದುಕೊಳ್ಳಬೇಕೆಂದು ಅಲ್ಲಲ್ಲಿ ಕೃಷಿಕರನ್ನೂ ಗೊಲ್ಲರನ್ನೂ ಹಸು ನಾಯಿ ಮೊದಲಾದವುಗಳನ್ನೂ ಕಾಣಿಸುವರು. ವಾಣಿಜರ ಹತ್ತಿರ ಹೋಗಿ, "ಈ ಗಂಜಿ ಕುಡಿಯಿರಿ. ಅನ್ನ ಊಟಮಾಡಿರಿ. ಖಾದ್ಯಗಳನ್ನು ತಿನ್ನಿರಿ" ಎಂದು ಹೇಳುವರು. ವಾಣಿಜರು ತಿಳಿಯದೆಯೇ ಅವರು ಕೊಟ್ಟುದನ್ನು ತಿನ್ನುವರು, ಕುಡಿಯುವರು. ಅವರು ತಿಂದು, ಉಂಡು, ವಿಶ್ರಮಿಸಿಕೊಳ್ಳುತ್ತಿರುವಾಗ ಕುಶಲಪ್ರಶ್ನೆ ಮಾಡುವರು. "ನೀವು ಎಲ್ಲಿ ವಾಸಿಸುವವರು? ಎಲ್ಲಿಂದ ಬಂದವರು? ಎಲ್ಲಿಗೆ ಹೋಗುವವರು? ಏನು ಕೆಲಸಕ್ಕಾಗಿ ಇಲ್ಲಿ ಬಂದಿರಿ?" ಎಂದು ಪ್ರಶ್ನಿಸುವರು. "ಹಡಗು ಒಡೆದು ಇಲ್ಲಿಗೆ ಬಂದಿರುವೆವು" ಎಂದು ಹೇಳಿದರೆ, "ಒಳ್ಳೆಯದು, ನಮ್ಮ ಗಂಡಂದಿರೂ ಹಡಗುಗಳನ್ನೇರಿ ಹೋಗಿ ಮೂರು ವರ್ಷಗಳ ಮೇಲಾಗುತ್ತಾ ಬಂತು. ಅವರು ಸತ್ತು ಹೋಗಿರಬೇಕು. ನೀವೂ ವಾಣಿಜರೇ. ನಾವು ನಿಮ್ಮ ಪಾದಪರಿಚಾರಿಕೆಯರಾಗುವೆವು" ಎಂದು ಹೇಳಿ, ಸ್ತ್ರೀಕೃತ್ಯ ಭಾವ ವಿಲಾಸಗಳಿಂದ ಆ ವಾಣಿಜರಿಗೆ ಆಸೆಹುಟ್ಟಿಸಿ, ಯಕ್ಷನಗರಕ್ಕೆ ಕರೆದೊಯ್ದು, ತಾವು ಮೊದಲೇ ಹಿಡಿದ ಮನುಷ್ಯರಿದ್ದರೆ ಅವರನ್ನು ದೇವಸಂಕಲೆಗಳಿಂದ ಕಟ್ಟಿ, ಕಾರಾಗೃಹಕ್ಕೆ ಎಸೆಯುವರು. ಒಡೆದ ಹಡಗಿನ ಜನರು ತಮ್ಮ ವಾಸಸ್ಥಾನದಲ್ಲಿ ದೊರಕದಿದ್ದರೆ, ಒಂದು ಕಡೆ ಕಲ್ಯಾಣಿ, ಒಂದು ಕಡೆ ನಾಗದ್ವೀಪ—ಹೀಗೆ ಸಮುದ್ರತೀರದಲ್ಲಿ ತಿರುಗುತ್ತಿರುವರು. ಇದು ಅವರ ಧರ್ಮ.

ಆಗ ಒಂದು ದಿವಸ ಐನೂರು ಜನ ವಾಣಿಜರು ಹಡಗು ಒಡೆದು ಆ ನಗರದ ಸಮೀಪದಲ್ಲಿ ಇಳಿದರು. ಅವರು ಅವರ ಹತ್ತಿರ ಹೋಗಿ, ಆಸೆ ಹುಟ್ಟಿಸಿ, ಯಕ್ಷನಗರಕ್ಕೆ ಕರೆತಂದು, ಮೊದಲು ಹಿಡಿದವರನ್ನು ದೇವಸಂಕಲಿಕೆಯಲ್ಲಿ ಬಂಧಿಸಿ ಕಾರಾಗೃಹಕ್ಕೆ ಎಸೆದರು. ಹಿರಿಯ ಯಕ್ಷಿಣಿ ಹಿರಿಯ ವಾಣಿಜನನ್ನೂ ಉಳಿದ ಐನೂರು ಯಕ್ಷಿಣಿಯರು ಉಳಿದ ಐನೂರು ವಾಣಿಜರನ್ನೂ ತಮ್ಮ ಗಂಡರನ್ನಾಗಿ ಮಾಡಿ ಕೊಂಡರು.

ಆಗ ಆ ಹಿರಿಯ ಯಕ್ಷಿಣಿ ರಾತ್ರಿಯ ವೇಳೆ ವಾಣಿಜರು ನಿದ್ರೆ ಹೋಗಲು, ಎದ್ದುಹೋಗಿ, ಕಾರಾಗೃಹದಲ್ಲಿ ಜನರನ್ನು ಕೊಂದು, ಮಾಂಸ ತಿಂದು ಬರುವಳು. ಉಳಿದವರೂ ಹಾಗೆಯೇ ಮಾಡುವರು. ಹಿರಿಯ ಯಕ್ಷಿಣಿ ಮನುಷ್ಯಮಾಂಸ ತಿಂದು ಬರುವಾಗ ಅವಳ ಮೈ ತಣ್ಣಗಿರುತ್ತಿತ್ತು.

ಒಂದು ಸಲ ಹಿರಿಯ ವಾಣಿಜನು ಅವಳನ್ನು ಆಲಿಂಗಿಸಿ, ಅವಳು ಯಕ್ಷಿಣಿಯೆಂಬುದನ್ನು ತಿಳಿದು, "ಇವರು ಐನೂರ್ವರೂ ಯಕ್ಷಿಣಿಯ ರಾಗಿರಬೇಕು. ನಾವು ಓಡಿಹೋಗುವುದು ತಕ್ಕುದು" ಎಂದು ಮರುದಿವಸ ಬೆಳಗ್ಗೆ ಮುಖ ತೊಳೆದುಕೊಳ್ಳುವುದಕ್ಕಾಗಿ ಹೋಗುವಾಗ ಉಳಿದ ವಾಣಿಜರನ್ನು ಕುರಿತು, "ಇವರು ಯಕ್ಷಿಣಿಯರು, ಮನುಷ್ಯಹೆಂಗುಸರಲ್ಲ. ಬೇರೆ ನಾವೆಗಳು ಒಡೆದುಬಂದಾಗ, ಅವರನ್ನು ಗಂಡರನ್ನಾಗಿ ಮಾಡಿ ಕೊಂಡು ನಮ್ಮನ್ನು ತಿನ್ನುವರು. ಈಗ ನಾವು ಓಡಿಹೋಗೋಣ" ಎಂದನು. ಅವರಲ್ಲಿ ಇನ್ನೂರೈವತ್ತು ಜನ "ನಾವು ಅವರನ್ನು ಬಿಡಲಾರೆವು. ನೀವು ಹೋಗಿರಿ. ನಾವು ಓಡಿಹೋಗುವುದಿಲ್ಲ" ಎಂದರು.

ಹಿರಿಯ ವಾಣಿಜನು ತನ್ನ ಮಾತನ್ನು ನಡಸುವ ಇನ್ನೂರೈವತ್ತು ಜನರನ್ನು ಕರೆದುಕೊಂಡು, ಯಕ್ಷಿಣಿಯರಿಗೆ ಹೆದರಿ ಓಡಿದನು.

ಆ ಕಾಲದಲ್ಲಿ ಬೋಧಿಸತ್ತ್ವನು ಬಲಾಹಾಶ್ವದ ಹೊಟ್ಟೆಯಲ್ಲಿ ಜನ್ಮ ತಾಳಿದನು. ಅವನ ಮೈಯೆಲ್ಲಾ ಬಿಳುಪಾಗಿತ್ತು, ತಲೆ ಕಾಗೆ ಯಂತಿತ್ತು, ಕೂದಲು ಮುಂಜವೆಂಬ ಹುಲ್ಲಿನಂತಿತ್ತು, ಅವನು

ಋದ್ಧಿಗಳಿಂದ ಕೂಡಿ ಗಾಳಿಯಲ್ಲಿ ಹೋಗುವವನಾಗಿದ್ದನು. ಅವನು ಹಿಮವಂತದಿಂದ ಆಕಾಶದಲ್ಲಿ ಏರಿ ತಾಮ್ರಪರ್ಣಿ ದ್ವೀಪಕ್ಕೆ ಹೋಗಿ, ಅಲ್ಲಿ ತಾಮ್ರಪರ್ಣಿಯ ಕೊಳಗಳಲ್ಲೂ ಕುಂಟೆಗಳಲ್ಲೂ ತಾನಾಗಿಯೇ ಹುಟ್ಟಿದ ಬತ್ತವನ್ನು ತಿನ್ನುತ್ತಾ ಹೋಗುವನು. ಹಾಗೆ ಹೋಗುತ್ತಾ "ತಮ್ಮ ದೇಶಕ್ಕೆ ಹೋಗಬಯಸುವವರು ಉಂಟೆ? ತಮ್ಮ ದೇಶಕ್ಕೆ ಹೋಗಬಯಸುವವರು ಉಂಟೆ?" ಎಂದು ಮೂರು ಸಲ ಕರುಣೆಯಿಂದ ಕೂಡಿ ಮನುಷ್ಯರಂತೆ ಮಾತನಾಡಿದನು.

ಅವರು ಅವನ ಮಾತು ಕೇಳಿ, ಬಳಿಸಾರಿ, ಕೈಜೋಡಿಸಿ, "ಸ್ವಾಮಿ, ನಾವು ನಮ್ಮ ದೇಶಕ್ಕೆ ಹೋಗಬೇಕು" ಎಂದರು.

"ಹಾಗಾದರೆ, ನನ್ನ ಬೆನ್ನಮೇಲೆ ಏರಿರಿ."

ಕೆಲವರು ಏರಿದರು, ಕೆಲವರು ಬಾಲ ಹಿಡಿದರು, ಕೆಲವರು ಕೈ ಮುಗಿದು ನಿಂತೇಬಿಟ್ಟರು. ಬೋಧಿಸತ್ತ್ವನು ಕೈಮುಗಿದು ನಿಂತವರನ್ನೂ ಬಿಡದೆ ಇನ್ನೂರೈವತ್ತು ವಾಣಿಜರೆಲ್ಲರನ್ನೂ ತನ್ನ ಪ್ರಭಾವದಿಂದ ಅವರ ದೇಶಕ್ಕೆ ಒಯ್ದು, ಅವರವರ ಸ್ಥಾನಗಳಿಗೆ ಸೇರಿಸಿ, ತನ್ನ ವಾಸಸ್ಥಾನಕ್ಕೆ ಹೋದನು.

ಆ ಯಕ್ಷಿಣಿಯರು, ಬೇರೆಯವರು ಬಂದಾಗ, ಅಲ್ಲಿ ಉಳಿದ ಆ ಇನ್ನೂರೈವತ್ತು ಜನರನ್ನು ಕೊಂದು ತಿಂದರು.

# ತಿಂಡುಕ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕೋತಿಯ ಹೊಟ್ಟೆಯಲ್ಲಿ ಜನ್ಮತಾಳಿ, ಎಂಬತ್ತು ಸಾವಿರ ಕೋತಿಗಳ ಪರಿವಾರದೊಡನೆ ಹಿಮವಂತಪ್ರದೇಶದಲ್ಲಿ ವಾಸ ಮಾಡುತ್ತಿದ್ದನು.

ಅಲ್ಲಿಗೆ ವಿಶೇಷ ದೂರವಲ್ಲದ ಒಂದು ಗ್ರಾಮದವರು ಕೆಲವು ಸಲ ಅಲ್ಲಿ ವಾಸಿಸುತ್ತಿದ್ದರು, ಕೆಲವು ಸಲ ಬಿಟ್ಟುಹೋಗುತ್ತಿದ್ದರು. ಆ ಗ್ರಾಮದ ನಡುವೆ ಒಂದು ತಿಂಡುಕವೃಕ್ಷವಿತ್ತು. ಅದರ ತುಂಬಾ ಸಣ್ಣ ಕೊಂಬೆಗಳು, ದೊಡ್ಡ ಕೊಂಬೆಗಳು, ಸಿಹಿಯಾದ ಹಣ್ಣುಗಳು. ಗ್ರಾಮದಲ್ಲಿ ಯಾರೂ ಇಲ್ಲದಾಗ, ಕೋತಿಗಳ ಗುಂಪು ಬಂದು ಆ ಹಣ್ಣುಗಳನ್ನು ತಿನ್ನುವುವು.

ಅನಂತರ ಫಲಬಿಟ್ಟ ಒಂದು ಕಾಲದಲ್ಲಿ ಜನರು ಬಂದು ಆ ಗ್ರಾಮದಲ್ಲಿ ವಾಸಿಸಿದರು. ಸುತ್ತಲೂ ಬೊಂಬುಗಳ ತಡೆ ಹಾಕಿದರು, ಬಾಗಿಲಿಗೆ ಕಾವಲಿರಿಸಿದರು.

ಆ ಮರದ ಕೊಂಬೆಗಳೆಲ್ಲಾ ಹಣ್ಣಿನ ಭಾರಕ್ಕೆ ಬಗ್ಗಿದ್ದುವು. ಕೋತಿಗಳ ಗುಂಪು "ನಾವು ಹಿಂದೆ ಇಂಥ ಗ್ರಾಮದಲ್ಲಿ ತಿಂಡುಕಫಲಗಳನ್ನು ತಿನ್ನುತ್ತಿದ್ದೆವು. ಆ ಮರ ಹಣ್ಣು ಬಿಟ್ಟದೆಯೋ ಇಲ್ಲವೋ? ಆ ಗ್ರಾಮದಲ್ಲಿ ಯಾರಾದರೂ ವಾಸವಾಗಿರುವರೋ ಇಲ್ಲವೋ?" ಎಂದು ಚಿಂತಿಸಿತು. ಹೀಗೆ ಚಿಂತಿಸಿ, "ಹೋಗು, ಆಗಿರುವುದನ್ನು ತಿಳಿದುಬಾ" ಎಂದು ಒಂದು ಕೋತಿಯನ್ನು ಕಳಿಸಿದವು. ಅದು ಹೋಗಿ, ಮರ ಹಣ್ಣುಬಿಟ್ಟದ್ದುದನ್ನೂ ಗ್ರಾಮದ ತುಂಬಾ ಜನ ಕಿಕ್ಕಿರಿದುದನ್ನೂ ತಿಳಿದು ಬಂದು ತಿಳಿಸಿತು.

ಮರ ಹಣ್ಣುಬಿಟ್ಟುದನ್ನು ಕೇಳಿ, ಕೋತಿಗಳು "ಸಿಹಿಯಾದ ತಿಂಡುಕಫಲಗಳನ್ನು ತಿನ್ನೋಣ" ಎಂದು ಉತ್ಸಾಹಗೊಂಡವು. ಬಹು ವಾನರಗಳು ಬಂದು ವಾನರೇಂದ್ರನಿಗೆ ಅದನ್ನು ತಿಳಿಯಪಡಿಸಿದುವು.

ವಾನರೇಂದ್ರನು "ಗ್ರಾಮದಲ್ಲಿ ಜನ ವಾಸಿಸುತ್ತಿರುವರೋ? ಇಲ್ಲವೋ?" ಎಂದು ಪ್ರಶ್ನಿಸಿದನು.

"ವಾಸಿಸುತ್ತಿರುವರು, ದೇವ."

"ಆದ್ದರಿಂದ, ಹೋಗತಕ್ಕುದಲ್ಲ. ಮನುಷ್ಯರು ಬಹು ಮಾಯೆ ಬಲ್ಲವರು."

"ದೇವ, ಮನುಷ್ಯರು ಗಾಢನಿದ್ರೆಯಲ್ಲಿರುವಾಗ ಅರ್ಧರಾತ್ರಿ ಸಮಯದಲ್ಲಿ ತಿನ್ನೋಣ" ಎಂದು ಬಹು ಕೋತಿಗಳು ಹೋಗಿ, ವಾನರೇಂದ್ರನನ್ನು ಒಪ್ಪಿಸಿ, ಹಿಮವಂತದಿಂದ ಇಳಿದು, ಜನರು ನಿದ್ರೆ ಮಾಡುವ ವೇಳೆಯನ್ನು ಕಾಯುತ್ತಾ ಆ ಗ್ರಾಮಕ್ಕೆ ಸ್ವಲ್ಪ ದೂರದಲ್ಲಿದ್ದ ದೊಡ್ಡ ಕಲ್ಲಿನ ಮೇಲೆ ಮಲಗಿದ್ದು, ಮಧ್ಯಮಯಾಮಸಮಯದಲ್ಲಿ ಮನುಷ್ಯರು ನಿದ್ರೆಗೆ ವಶರಾದಾಗ ಮರವನ್ನು ಹತ್ತಿ ಹಣ್ಣುಗಳನ್ನು ತಿಂದವು.

ಆಗ ಒಬ್ಬನು ದೇಹಬಾಧೆಗಾಗಿ ಮನೆಯಿಂದ ಹೊರಗೆಬಂದು, ಗ್ರಾಮದ ನಡುವೆ ಹೋದ ಕೋತಿಗಳನ್ನು ಕಂಡು, ಜನರನ್ನು ಕರೆದನು. ಬಹುಜನರು ಬಿಲ್ಲು ಬಾಣಗಳನ್ನು ಎತ್ತಿಕೊಂಡು, ಕೈಯಲ್ಲಿ ನಾನಾ ಆಯುಧಗಳನ್ನೂ ಮಣ್ಣುಹೆಂಟೆ ದೊಣ್ಣೆ ಮೊದಲಾದವನ್ನೂ ತೆಗೆದುಕೊಂಡು, "ರಾತ್ರಿ ಕಳೆದು ಬೆಳಗಾದಾಗ ಕೋತಿಗಳನ್ನು ಹಿಡಿಯೋಣ" ಎಂದು ಮರವನ್ನು ಸುತ್ತಿಕೊಂಡು ನಿಂತರು.

ಎಂಬತ್ತುಸಾವಿರ ಕೋತಿಗಳೂ ಜನರನ್ನು ಕಂಡು ಮರಣಭಯದಿಂದ ಹೆದರಿ, "ವಾನರೇಂದ್ರನನ್ನು ಬಿಟ್ಟು ನಮಗೆ ಬೇರೆ ಆಶ್ರಯವಿಲ್ಲ" ಎಂದು ಅದರ ಹತ್ತಿರ ಹೋಗಿ, "ಬಿಲ್ಲು ಬಾಣಗಳನ್ನೂ ಖಡ್ಗವನ್ನೂ ಧರಿಸಿ ಜನರು ನಮ್ಮನ್ನು ಸುತ್ತಿಕೊಂಡಿದ್ದಾರೆ. ನಮಗೆ ಬಿಡುಗಡೆಯಾಗುವುದು ಹೇಗೆ?" ಎಂದವು.

ವಾನರೇಂದ್ರನು ಅವು ಹೇಳಿದುದನ್ನು ಕೇಳಿ, "ಹೆದರಬೇಡಿ. ಜನರು ಮಾಡಬೇಕಾದ ಬಹುಕಾರ್ಯಗಳಿವೆ. ಈಗ ಇನ್ನೂ ಮಧ್ಯಮಯಾಮ ನಡೆಯುತ್ತಿದೆ. ಇವರಾದರೋ 'ಇವುಗಳನ್ನು ಕೊಲ್ಲೋಣ' ವೆಂದು ನಿಂತಿದ್ದಾರೆ. ಅಷ್ಟರೊಳಗೆ ಈ ಕೆಲಸಕ್ಕೆ ಅಡ್ಡಿಯಾಗುವ ಬೇರೆ ಕೆಲಸವನ್ನು ಉಂಟುಮಾಡೋಣ" ಎಂದು ಸಂತೈಸುತ್ತಾ, "ಮಾಡಲು ಬಹು ಕೆಲಸಗಳಿರುವವರಿಗೆ ಏನಾದರೂ ಕಾರ್ಯ ಹುಟ್ಟಿಕೊಳ್ಳುವುದು. ಕತ್ತರಿಸದ ಹಣ್ಣುಗಳು ಇನ್ನೂ ಹಾಗೇ ಇವೆ. ತಿನ್ನಿರಿ" ಎಂದಿತು.

ಮಹಾಸತ್ತ್ವನು ಕಪಿಗಳ ಗುಂಪನ್ನು ಸಂತೈಸಿದನು. ಇಷ್ಟಾದರೂ ಧೈರ್ಯ ದೊರಕದೆ ಇದ್ದಿದ್ದರೆ, ಅವುಗಳೆಲ್ಲಾ ಎದೆಯೊಡೆದುಕೊಂಡು ಸಾಯುತ್ತಿದ್ದವು. ಹೀಗೆ ಮಹಾಸತ್ತ್ವನು ಕೋತಿಗಳ ಗುಂಪನ್ನು ಸಂತೈಸಿ, "ಎಲ್ಲಾ ಕೋತಿಗಳನ್ನೂ ತಂದುಕೂಡಿಸಿರಿ" ಎಂದನು. ತಂದು ಕೂಡಿಸುತ್ತಿರುವಾಗ, ಅವನ ಸೋದರಿಯ ಮಗನಾದ ಸೇನಕನೆಂಬ ಕೋತಿಯನ್ನು ಕಾಣದೆ, "ಕೋತಿಗಳಲ್ಲಿ ಸೇನಕನು ಬಂದಿಲ್ಲ" ಎಂದು ತಿಳಿಸಿದವು.

"ಸೇನಕನು ಬಂದಿಲ್ಲದಿದ್ದರೆ, ಹೆದರಬೇಡಿ. ಅದು ನಮಗೆ ಒಳ್ಳೆಯದನ್ನು ಉಂಟುಮಾಡುವುದು."

ಕೋತಿಗಳು ಹೊರಡುವಾಗ ಸೇನಕನು ನಿದ್ರಿಸುತ್ತಿತ್ತು. ಅನಂತರ ಎಚ್ಚೆತ್ತು, ಯಾರನ್ನೂ ಕಾಣದೆ, ಹೆಜ್ಜೆಯ ಹಿಂದೆ ಹೆಜ್ಜೆಯಿಟ್ಟು, ಬರುತ್ತಿದ್ದ ಜನರನ್ನು ಕಂಡು, "ವಾನರಗಣಕ್ಕೆ ಭಯವುಂಟಾಗಿದೆ" ಎಂದು ತಿಳಿದು, ಒಂದು ಮನೆಯಲ್ಲಿ ಬೆಂಕಿಯುರಿಸಿ ನಿದ್ರೆಮಾಡುತ್ತಿದ್ದ ಮುದುಕಿಯ ಹತ್ತಿರ ಹೋಗಿ, ಹೊಲಕ್ಕೆ ಹೋಗುತ್ತಿರುವ ಗ್ರಾಮದ ಹುಡುಗನಂತೆ ಒಂದು ಕೊಳ್ಳಿಯನ್ನು ಹಿಡಿದು, ಮೇಲುಗಾಳಿಗೆ ನಿಂತು ಗ್ರಾಮಕ್ಕೆ ಬೆಂಕಿ ಕೊಟ್ಟಿತು.

ಜನರು ಕೋತಿಗಳನ್ನು ಬಿಟ್ಟು ಬೆಂಕಿಯನ್ನು ಆರಿಸಲು ಹೋದರು. ಕೋತಿಗಳು ಓಡುತ್ತಾ ಸೇನಕನಿಗಾಗಿ ಒಂದೊಂದು ಹಣ್ಣನ್ನು ಹಿಡಿದು ಕೊಂಡು ಓಡಿದವು.

# ಇಂದ್ರ ಸಮಾನ ಗೋತ್ರ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಬ್ರಾಹ್ಮಣಕುಲದಲ್ಲಿ ಜನ್ಮತಾಳಿದನು. ಬೆಳೆದ ಮೇಲೆ ಮನೆಯ ವಾಸವನ್ನು ತೊರೆದು, ಮನೆಬಿಟ್ಟು ಹೋಗಿ ಋಷಿಯಾಗಿ, ಐನೂರು ಋಷಿಗಳ ಗಣಕ್ಕೆ ಗುರುವಾಗಿ, ಹಿಮವಂತ ಪ್ರದೇಶದಲ್ಲಿ ವಾಸವನ್ನು ಕಲ್ಪಿಸಿಕೊಂಡನು.

ಆಗ ಆ ತಾಪಸರಲ್ಲಿ ಇಂದ್ರಸಮಾನಗೋತ್ರನೆಂಬ ತಾಪಸನು ತಲೆಹರಟೆಮಾಡುತ್ತಾ ಹೇಳಿದ ಮಾತು ಕೇಳುತ್ತಿರಲಿಲ್ಲ. ಅವನು ಒಂದು ಆನೆಮರಿ ಸಾಕಿದನು.

ಬೋಧಿಸತ್ತ್ವನು ಅದನ್ನು ಕೇಳಿ, ಅವನನ್ನು ಕರೆಕಳಿಸಿ, "ನೀನು ಆನೆಮರಿ ಸಾಕುತ್ತಿರುವೆಯಂತೆ, ನಿಜವೆ?" ಎಂದು ಪ್ರಶ್ನಿಸಿದನು.

"ಸತ್ಯ, ಆಚಾರ್ಯ. ತಾಯಿ ಸತ್ತ ಒಂದು ಆನೆಮರಿಯನ್ನು ಪೋಷಿಸುತ್ತಿರುವೆನು."

"ಆನೆಗಳೆಂಬವು, ಬೆಳೆದ ಮೇಲೆ, ಪೋಷಿಸಿದವರನ್ನೇ ಕೊಲ್ಲುತ್ತವೆ. ಅದನ್ನು ಪೋಷಿಸಬೇಡ."

"ಅದನ್ನು ಬಿಟ್ಟು ಇರಲಾರೆ, ಆಚಾರ್ಯ."

"ಹಾಗಾದರೆ, ನಿನಗೇ ತಿಳಿಯುತ್ತದೆ."

ಅದು ಅವನಿಂದ ಪೋಷಣೆಪಡೆಯುತ್ತಾ ಮಹಾಶರೀರಿಯಾಯಿತು.

ಆಗ ಒಂದು ಸಲ ಆ ಋಷಿಗಳು ವನಮೂಲ ಫಲಾಫಲಗಳಿಗಾಗಿ ದೂರ ಹೋಗಿ, ಅಲ್ಲಿಯೇ ಕೆಲವು ಹಗಲು ವಾಸಮಾಡಿದರು.

ದಕ್ಷಿಣದ ಗಾಳಿ ಬೀಸಿದ ಪ್ರಾರಂಭದಲ್ಲಿ ಆನೆಗೆ ಮದವೊಡೆದು ಬಂತು. ಅದು "ಇವನ ಪರ್ಣಶಾಲೆಯನ್ನು ವಿಧ್ವಂಸಮಾಡಿ, ಕುಡಿಯುವ ನೀರಿನ ಗಡಿಗೆಯನ್ನು ಒಡೆದು, ಕಲ್ಲಿನ ಹಲಗೆಯನ್ನು ಕಿತ್ತೆಸೆದು, ಕಟ್ಟಿರುವ ಕಲ್ಲಿನ ಗೂಟವನ್ನು ಕಿತ್ತು, ಈ ತಾಪಸನನ್ನು ಕೊಂದೇ ಹೋಗುವೆನು" ಎಂದು ಒಂದು ದಟ್ಟವಾದ ಎಡೆಯನ್ನು ಹೊಕ್ಕು, ಅವನು ಬರುವ ದಾರಿಯನ್ನು ಎದುರುನೋಡುತ್ತಾ ನಿಂತಿತು.

ಇಂದ್ರಸಮಾನಗೋತ್ರನು ಅದಕ್ಕೆ ಆಹಾರವನ್ನು ತೆಗೆದುಕೊಂಡು ಎಲ್ಲರಿಗೂ ಮೊದಲಾಗಿ ಬರುತ್ತಾ ಅದನ್ನು ಕಂಡು, ಎಂದಿನಂತೆಯೇ ಅದರ ಹತ್ತಿರ ಬಂದನು.

ಆಗ ಆ ಆನೆ ದಟ್ಟವಾದ ಎಡೆಯಿಂದ ಹೊರಗೆ ಬಂದು, ಸೊಂಡಿಲಿನಿಂದ ಅವನನ್ನು ಬಿಗಿಹಿಡಿದು ನೆಲಕ್ಕೆ ಅಪ್ಪಳಿಸಿ, ಅವನ ತಲೆಯನ್ನು ಕಾಲಿನಿಂದ ಮೆಟ್ಟಿ, ಜೀವವನ್ನು ಕೊನೆಗಾಣಿಸಿ, ತುಳಿ ತುಳಿದು ಘೀಂಕಾರಮಾಡುತ್ತಾ ಕಾಡನ್ನು ಹೊಕ್ಕಿತು.

ಉಳಿದ ತಾಪಸರು ಆ ನಡೆದುದನ್ನು ಬೋಧಿಸತ್ತ್ವನಿಗೆ ತಿಳಿಸಿದರು. ಬೋಧಿಸತ್ತ್ವನು "ಕೆಟ್ಟ ಜನರ ಜೊತೆ ಸೇರಬಾರದು" ಎಂದು ಹೇಳುತ್ತಾ, "ಕೆಟ್ಟ ಜನದೊಡನೆ ಸ್ನೇಹ ಮಾಡಬಾರದು. ಮಾಡಿದರೆ, ಆನೆಯಿಂದ ಇಂದ್ರಸಮಾನಗೋತ್ರನಿಗೆ ಆದಂತೆ ಆಗುತ್ತದೆ. ನಡತೆಯಲ್ಲಿಯೂ ಬುದ್ಧಿಯಲ್ಲಿಯೂ ತಿಳಿವಳಿಕೆಯಲ್ಲಿಯೂ ತನಗೆ ಸಮಾನನೆಂದು ತಿಳಿದುಬಂದರೆ, ಅವನೊಡನೆ ಸ್ನೇಹ ಮಾಡಲಿ. ಸತ್ಪುರುಷರ ಸಂಗದಿಂದ ಸುಖ ಬರುತ್ತದೆ" ಎಂದನು.

ಹೀಗೆ ಬೋಧಿಸತ್ತ್ವನು "ಹೇಳಿದ ಮಾತು ಕೇಳದವರಾಗ ಬಾರದು. ಸುಶಿಕ್ಷಿತರಾಗುವುದೇ ತಕ್ಕುದು" ಎಂದು ಋಷಿಗಣಕ್ಕೆ ಬುದ್ಧಿ ಹೇಳಿ, ಇಂದ್ರಸಮಾನಗೋತ್ರನ ಶರೀರಕ್ಕೆ ಮಾಡಬೇಕಾದ ಕಾರ್ಯಗಳನ್ನು ಮಾಡಿಸಿ, ಬ್ರಹ್ಮವಿಹಾರಗಳನ್ನು ಭಾವಿಸಿಕೊಂಡು, ಬ್ರಹ್ಮಲೋಕಕ್ಕೆ ಹೋದವನಾದನು.

# ಕಲಾಯ ಮುಷ್ಟಿ

## (ಒಂದು ಹಿಡಿ ಕಾಳು)

ಹಿಂದೆ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಅವನಿಗೆ ಅರ್ಥ ಧರ್ಮಗಳನ್ನು ಅನುಶಾಸನೆಮಾಡುವ ಸರ್ವಾರ್ಥಕಾಮಾಮಾತ್ಯನಾಗಿದ್ದನು.

ಆಗ ರಾಜನು ಗಡಿನಾಡಿನ ಮೇಲೆ ಕೋಪಗೊಂಡು, ಗಡಿನಾಡಿನಲ್ಲಿದ್ದ ಯೋಧರಿಗೆ ಓಲೆ ಕಳಿಸಿದನು. ರಾಜನು ಮಳೆಗಾಲದಲ್ಲಿ ಹೊರಗೆ ಹೊರಟು, ಉದ್ಯಾನದಲ್ಲಿ ಪಾಳಯ ಕಟ್ಟಿಸಿದನು. ಬೋಧಿಸತ್ತ್ವನು ರಾಜನ ಬಳಿಯಲ್ಲಿ ನಿಂತನು.

ಅದೇ ವೇಳೆಯಲ್ಲಿ ಕುದುರೆಗಳಿಗಾಗಿ ಕಾಳುಗಳನ್ನು ಬೇಯಿಸಿ ತಂದು ತೊಟ್ಟಿಯಲ್ಲಿ ಹಾಕಿದರು. ತೋಟದ ಕೋತಿಗಳಲ್ಲಿ ಒಂದು ಕೋತಿ ಮರದಿಂದ ಇಳಿದು, ಅಲ್ಲಿಂದ ಕಾಳುಗಳನ್ನು ತೆಗೆದುಕೊಂಡು, ಬಾಯಿಗೆ ತುಂಬಿಕೊಂಡು, ಕೈಗಳಲ್ಲೂ ಹಿಡಿದುಕೊಂಡು, ಮೇಲೆ ಹಾರಿ ಮರದಲ್ಲಿ ಕುಳಿತು, ತಿನ್ನಲು ತೊಡಗಿತು.

ಹೀಗೆ ತಿನ್ನುವಾಗ ಕೈಯಿಂದ ಒಂದು ಕಾಳು ನೆಲದಲ್ಲಿ ಬಿತ್ತು. ಅದು ಬಾಯಲ್ಲಿಯೂ ಕೈಗಳಲ್ಲಿಯೂ ಹಿಡಿದಿದ್ದ ಎಲ್ಲಾ ಕಾಳುಗಳನ್ನೂ ಚೆಲ್ಲಿ, ಮರದಿಂದ ಇಳಿದು, ಆ ಕಾಳನ್ನೇ ಹುಡುಕುತ್ತಾ, ಆ ಕಾಳನ್ನು ಕಾಣದೆಯೇ ಪುನಃ ಮರವನ್ನು ಏರಿ, ಎಂಟು ಸಾವಿರವನ್ನು ಕಳೆದುಕೊಂಡಂತೆ ಶೋಕಪಡುತ್ತಾ ಪೆಚ್ಚುಮುಖಮಾಡಿಕೊಂಡು ಮರದ ಕೊಂಬೆಯಲ್ಲಿ ಕುಳಿತಿತು.

ರಾಜನು ಕೋತಿಯ ಕೆಲಸವನ್ನು ನೋಡಿ, ಬೋಧಿಸತ್ತ್ವನನ್ನು ಕರೆದು, "ಗೆಳೆಯ, ಈ ಕೋತಿ ಮಾಡಿದುದು ಎಂತಹ ಕೆಲಸ?" ಎಂದು ಪ್ರಶ್ನಿಸಿದನು.

ಬೋಧಿಸತ್ತ್ವನು "ಮಹಾರಾಜ, ಹೆಚ್ಚಾದುದನ್ನು ಗಮನಿಸದೆ ಸ್ವಲ್ಪವಾದುದನ್ನು ಗಮನಿಸುತ್ತಾ ದುರ್ಬುದ್ಧಿಯುಳ್ಳ ಅಜ್ಞಾನಿಗಳು ಇಂತಹದನ್ನೇ ಮಾಡುವರು" ಎಂದು ಹೇಳಿ, "ಮರದ ಕೊಂಬೆಗಳಲ್ಲಿ

ಆಹಾರ ಪಡೆಯುವ ಈ ಕೋತಿ ಅಜ್ಞಾನಿ. ಇದಕ್ಕೆ ಬುದ್ಧಿಯಿಲ್ಲ, ಜನೇಂದ್ರ. ಹಿಡಿ ತುಂಬಾ ತುಂಬಿದ ಕಾಳುಗಳನ್ನು ಚೆಲ್ಲಿ, ಕೆಳಗೆ ಬಿದ್ದ ಒಂದು ಕಾಳಿಗಾಗಿ ಹುಡುಕುತ್ತದೆ" ಎಂದನು.

ಹೀಗೆಂದು ಹೇಳಿ, ಪುನಃ ಬೋಧಿಸತ್ತ್ವನು ಅವನ ಬಳಿ ಸಾರಿ, ರಾಜನನ್ನು ಕುರಿತು "ರಾಜ, ನಾವೂ ಹೀಗೆಯೇ, ಅತಿಲೋಭಿಗಳಾದ ಇತರರೂ ಹೀಗೆಯೇ. ಕೋತಿ ಕಾಳುಗಳನ್ನು ಮಾಡಿದಂತೆ, ಸ್ವಲ್ಪಕ್ಕಾಗಿ ಬಹುವಾದುದನ್ನು ಕಳೆದುಕೊಳ್ಳುವೆವು" ಎಂದನು.

ರಾಜನು ಅವನು ಹೇಳಿದುದನ್ನು ಕೇಳಿ, ಅಲ್ಲಿಂದ ಹಿಂದಕ್ಕೆ ತಿರುಗಿ, ವಾರಾಣಸಿ ನಗರವನ್ನೇ ಹೊಕ್ಕನು.

ಗಡಿನಾಡಿನ ಚೋರರು ಕೂಡ "ಚೋರಮರ್ದನ ಮಾಡುವೆನೆಂದು ರಾಜನು ನಗರದಿಂದ ಹೊರಹೊರಟನು" ಎಂದು ಕೇಳಿ, ಗಡಿಯಿಂದ ಆಚೆ ಓಡಿದರು.

# ಭದ್ರಘಟ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಶ್ರೇಷ್ಠಿಕುಲದಲ್ಲಿ ಜನ್ಮತಾಳಿ, ತಂದೆ ಸತ್ತಮೇಲೆ ಶ್ರೇಷ್ಠಿಸ್ಥಾನವನ್ನು ಪಡೆದನು. ಅವನ ಮನೆಯಲ್ಲಿ ನೆಲದೊಳಗೆ ಹೂಳಿದ ನಾನೂರುಕೋಟಿ ಧನವಿತ್ತು. ಅವನಿಗೆ ಒಬ್ಬನೇ ಮಗ.

ಬೋಧಿಸತ್ತ್ವನು ದಾನಾದಿ ಪುಣ್ಯಗಳನ್ನು ಮಾಡಿ ಕಾಲವಾದನು, ದೇವರಾಜನಾದ ಶಕ್ರನಾಗಿ ಜನ್ಮ ತಾಳಿದನು.

ಆಗ ಅವನ ಮಗನು ಬೀದಿಯನ್ನು ಆವರಿಸಿದ ಮಂಟಪವನ್ನು ಮಾಡಿಸಿ, ಮಹಾಜನರ ಪರಿವಾರದೊಡನೆ ಕುಳಿತು ಸುರೆ ಕುಡಿಯ ಲಾರಂಭಿಸಿದನು. ಅವನು ಹಾರುವವರು, ಓಡುವವರು, ಹಾಡುವವರು, ಕುಣಿಯುವವರು ಮೊದಲಾದವರಿಗೆ ಸಾವಿರಗಳನ್ನು ಕೊಡುವನು. ಸ್ತ್ರೀ ಸುರಾ ಮಾಂಸಗಳಲ್ಲಿ ಮಗ್ನನಾದನು. 'ಇವನ ಗಾನ, ಇವನ ನರ್ತನ, ಇವನ ವಾದನ' ಎಂದು ತನ್ನ ಜೊತೆಯವರೊಡನೆ ಮೈಮರೆತವನಾದನು.

ಹೀಗೆ ತಿರುಗಾಡುತ್ತಾ, ಸ್ವಲ್ಪ ಕಾಲದಲ್ಲಿಯೇ ನಾನೂರುಕೋಟಿ ಧನವನ್ನೂ ತನ್ನ ಸುಖಸಂತೋಷಗಳಿಗೆ ಆಗುತ್ತಿದ್ದ ಉಪಕರಣಗಳನ್ನೂ ನಾಶಮಾಡಿ, ದುರ್ಗತಿಗೆ ಬಂದು, ದೀನನಾಗಿ ಹರಕುಬಟ್ಟೆ ಹಾಕಿಕೊಂಡು ತಿರುಗುತ್ತಿದ್ದನು.

ಶಕ್ರನು ಧ್ಯಾನಮಾಡುತ್ತಾ, ಅವನು ದುರ್ಗತಿಗೆ ಬಂದುದನ್ನು ತಿಳಿದು, ಪುತ್ರಪ್ರೇಮದಿಂದ ಬಂದು, ಬಯಸಿದುದನ್ನೆಲ್ಲಾ ಕೊಡುವ ಕುಂಭವನ್ನು ಕೊಟ್ಟು, "ಈ ಕುಂಭ ಒಡೆದುಹೋಗದಂತೆ ಇದನ್ನು ಕಾಪಾಡು. ಇದು ನಿನ್ನ ಬಳಿಯಿದ್ದರೆ ನಿನಗೆ ಧನಕ್ಕೆ ಕೊರತೆಯಿರುವುದಿಲ್ಲ. ಮೈಮರೆಯದಿರು" ಎಂದು ಬುದ್ಧಿಹೇಳಿ, ದೇವಲೋಕಕ್ಕೆ ಹೋದನು. ಅವನು ಅಂದಿನಿಂದ ತೊಡಗಿ ಕುಡಿಯುತ್ತಾ ತಿರುಗಿದನು.

ಆಗ ಒಂದು ದಿವಸ ಮತ್ತನಾಗಿ ಆ ಕುಂಭವನ್ನು ಆಕಾಶದಲ್ಲಿ ಎಸೆದು, ಆತುಕೊಳ್ಳುತ್ತಾ, ಒಂದು ಬಾರಿ ತಪ್ಪಿದನು. ಕುಂಭ ನೆಲದಲ್ಲಿ ಬಿದ್ದು ಒಡೆಯಿತು. ಅಂದಿನಿಂದ ಪುನಃ ದರಿದ್ರನಾಗಿ, ಹರಕು ಬಟ್ಟೆ ಹಾಕಿಕೊಂಡು, ಕೈಯಲ್ಲಿ ಬಟ್ಟಲು ಹಿಡಿದು ಭಿಕ್ಷೆ ತಿರುಗುತ್ತಾ, ಕಂಡವರ ಮನೆಯ ಗೋಡೆಯ ಬಳಿ ಕಾಲವಾದನು.

# ಮಹಾವಾಣಿಜ

ನಾನಾ ರಾಷ್ಟ್ರಗಳಿಂದ ಬಂದ ವಾಣಿಜರು ಗುಂಪು ಕೂಡಿಕೊಂಡು ಧನ ತರುವುದಕ್ಕಾಗಿ ಒಬ್ಬನನ್ನು ಮುಖಂಡನನ್ನಾಗಿ ಮಾಡಿಕೊಂಡು ಹೊರಟರು.

ಅವರು ಒಂದು ಬೆಂಗಾಡಿಗೆ ಬಂದರು. ಅಲ್ಲಿ ತಿನ್ನಲು ತಿನಿಸು ಕಡಮೆ, ಕುಡಿಯಲು ನೀರೇ ಇಲ್ಲ. ಅಲ್ಲಿ, ಮನಸ್ಸಿಗೆ ಸಂತೋಷ ವನ್ನುಂಟುಮಾಡುವ ತಣ್ಣೆಳಲಿನ ಮಹಾನ್ಯಗ್ರೋಧವನ್ನು ಕಂಡರು.

ಅವರು ಅಲ್ಲಿ ಆ ಮರದ ನೆರಳಲ್ಲಿ ಕುಳಿತರು. ಕುಳಿತು, ಮಂಕು ತನದಿಂದ ಮುಚ್ಚಿಹೋದ ಆ ಅಜ್ಞಾನಿಗಳಾದ ವಾಣಿಜರು "ಈ ಮರ ಹಸಿಹಸಿಯಾಗಿದೆ, ನೀರೂ ಬಸಿಯುತ್ತಿದೆ. ವಾಣಿಜರೆ, ಪೂರ್ವದಿಕ್ಕಿನ ಕೊಂಬೆಯನ್ನು ನಾವು ಕಡಿಯೋಣ" ಎಂದು ಸೇರಿ ಆಲೋಚಿಸಿದರು.

ಅವರು ಕಡಿದೊಡನೆ ಸ್ವಚ್ಛವಾಗಿ ಕೊಳೆಯಿಲ್ಲದ ನೀರು ಉಕ್ಕಿ ಬಂತು. ಅಲ್ಲಿ, ವಾಣಿಜರು ಬಯಕೆ ತೀರುವವರೆಗೆ ಮಿಂದರು, ಕುಡಿದರು.

ಮೋಹದಿಂದ ಮುಚ್ಚಿಹೋದ ಆ ಅಜ್ಞಾನಿಗಳು ಎರಡನೆಯ ಬಾರಿ "ವಾಣಿಜರೆ, ದಕ್ಷಿಣದ ಕಡೆಯ ಕೊಂಬೆಯನ್ನು ಕತ್ತರಿಸೋಣ" ಎಂದು ಸೇರಿ ಚಿಂತಿಸಿದರು.

ಅದನ್ನು ಕತ್ತರಿಸಿದೊಡನೆ ಬತ್ತದ ಅನ್ನ ಮಾಂಸಗಳೂ ನೀರು ಕಡಮೆಯಾದ ಗಂಜಿಯೂ ಸಾರೂ ಬಹುವಾಗಿ ಉಕ್ಕಿಬಂತು. ಅಲ್ಲಿ ಅವರು ಬಯಕೆ ತೀರುವವರೆಗೂ ತಿಂದರು, ಕುಡಿದರು.

ಮೋಹದಿಂದ ಮುಚ್ಚಿಹೋದ ಆ ಅಜ್ಞಾನಿಗಳು ಮೂರನೆಯಬಾರಿ "ಈಗ ನಾವು ಪಶ್ಚಿಮದ ಕೊಂಬೆ ಕಡಿಯೋಣ" ಎಂದು ಸೇರಿ ಚಿಂತಿಸಿದರು.

ಅದನ್ನು ಕತ್ತರಿಸಿದೊಡನೆ ಚೆನ್ನಾಗಿ ಅಲಂಕರಿಸಿಕೊಂಡು, ವಿಚಿತ್ರ ವಸ್ತ್ರಾಭರಣಗಳನ್ನೂ ಮಣಿಕುಂಡಲಗಳನ್ನೂ ಧರಿಸಿದ ನಾರಿಯರು ನಡೆದು ಬಂದರು. ಒಬ್ಬೊಬ್ಬನ ಬಳಿ ಒಬ್ಬೊಬ್ಬಳೂ ಮುಖಂಡನ ಬಳಿ

ಇಪ್ಪತ್ತೈವರೂ ಬಂದು ಕುಳಿತರು. ಎಲ್ಲರೂ ಮರದ ನೆರಳಲ್ಲಿ ಸುತ್ತಾ ಬಳಸಿ ಕುಳಿತರು.

ಮೋಹದಿಂದ ಮುಚ್ಚಿಹೋದ ಆ ಅಜ್ಞಾನಿಗಳು ನಾಲ್ಕನೆಯ ಬಾರಿ "ಉತ್ತರದ ಕೊಂಬೆಯನ್ನು ಈಗ ಕತ್ತರಿಸೋಣ" ಎಂದು ಸೇರಿ ಚಿಂತಿಸಿದರು.

ಅದನ್ನು ಕತ್ತರಿಸಿದೊಡನೆ ಬಹು ಮುತ್ತು ವೈಡೂರ್ಯಗಳೂ ಬೆಳ್ಳಿ ಚಿನ್ನಗಳೂ ರತ್ನಕಂಬಳಿಗಳೂ ಉಣ್ಣೆಯ ಕಂಬಳಿಗಳೂ ಕಾಶಿಯ ವಸ್ತ್ರಗಳೂ ಉಕ್ಕಿ ಬಂದವು. ಅವುಗಳನ್ನು ಬಯಕೆ ತೀರುವ ವರೆಗೆ ಮೂಟೆ ಕಟ್ಟಿದರು.

ಅನಂತರ, ಮೋಹದಿಂದ ಮುಚ್ಚಿಹೋದ ಆ ಅಜ್ಞಾನಿಗಳು ಐದನೆಯ ಬಾರಿ "ಈಗ ಬುಡವನ್ನು ಕಡಿಯೋಣ. ಇನ್ನೂ ಹೆಚ್ಚಾಗಿ ಪಡೆಯೋಣ" ಎಂದು ಸೇರಿ ಚಿಂತಿಸಿದರು.

ಆಗ ಅವರ ಮುಖಂಡನು ಕೈಮುಗಿದು ಬೇಡುತ್ತಾ ಎದ್ದನು. "ವಾಣಿಜರೆ, ನಿಮಗೆ ಒಳ್ಳೆಯದಾಗಲಿ. ಈ ನ್ಯಗ್ರೋಧ ನಿಮಗೆ ಏನು ಅಪರಾಧ ಮಾಡಿತು? ಪೂರ್ವದ ಕೊಂಬೆ ನೀರು ಕೊಟ್ಟಿತು, ದಕ್ಷಿಣದ ಕೊಂಬೆ ಅನ್ನಪಾನ ಕೊಟ್ಟಿತು, ಪಶ್ಚಿಮದ ಕೊಂಬೆ ನಾರಿಯರನ್ನು ಕೊಟ್ಟಿತು, ಉತ್ತರದ ಕೊಂಬೆ ಬೇಕಾದುದನ್ನೆಲ್ಲಾ ಕೊಟ್ಟಿತು. ನ್ಯಗ್ರೋಧ ಏನು ಅಪರಾಧ ಮಾಡಿತು? ನಿಮಗೆ ಮಂಗಳವಾಗಲಿ. ಯಾವ ವೃಕ್ಷದ ನೆರಳಿನಲ್ಲಿ ಕುಳಿತಿರೋ, ಮಲಗಿದಿರೋ, ಅದರ ಕೊಂಬೆಯನ್ನು ಮುರಿಯಬಾರದು. ಮಿತ್ರದ್ರೋಹಿಯಾದವನು ಪಾಪಿ" ಎಂದನು.

ಅವರು ಬಹುಜನರು ಅವನೊಬ್ಬನ ಮಾತನ್ನು ಆದರಿಸಲಿಲ್ಲ. ಹರಿತವಾದ ಕೊಡಲಿಗಳಿಂದ ಅದರ ಬುಡವನ್ನು ಕಡಿಯತೊಡಗಿದರು.

ಆಗ, ಕಡಿಯುವುದಕ್ಕಾಗಿ ಮರದ ಬುಡವನ್ನು ಸಮೀಪಿಸಿದ ಅವರನ್ನು ಕಂಡು, ಅಲ್ಲಿದ್ದ ನಾಗರಾಜನು "ನಾನು ಈ ಬಾಯಾರಿ

ದವರಿಗೆ ಕುಡಿಯಲು ಕೊಟ್ಟೆ. ಅನಂತರ ದಿವ್ಯಭೋಜನವನ್ನೂ, ಅನಂತರ ಮಲಗಲು ಹಾಸಿಗೆಗಳನ್ನೂ ಪರಿಚಾರಿಕೆಗೆ ನಾರಿಯರನ್ನೂ ಕೊಟ್ಟೆ. ಆಮೇಲೆ ಐನೂರು ಗಾಡಿಗಳ ತುಂಬಾ ರತ್ನವನ್ನೂ ಕೊಟ್ಟೆ. ಈಗ ನನ್ನ ಮರದ ಬುಡವನ್ನು ಕತ್ತರಿಸೋಣವೆಂದು ಹೇಳುವರು. ಇವರಿಗೆ ಅತಿ ಆಸೆ. ಮುಖಂಡನನ್ನು ಬಿಟ್ಟು ಉಳಿದವರನ್ನು ಸಾಯಿಸುವುದೇ ತಕ್ಕುದು" ಎಂದು ಚಿಂತಿಸಿ,, "ಇಷ್ಟು ಮಂದಿ ಸನ್ನದ್ಧರಾದ ಯೋಧರು ಹೊರಗೆ ಬರಲಿ. ಇಷ್ಟು ಮಂದಿ ಬಿಲ್ಲು ಹಿಡಿದಿರಲಿ. ಇಷ್ಟು ಮಂದಿ ಕತ್ತಿಗುರಾಣಿ ಧರಿಸಿರಲಿ" ಎಂದು ಸೇನೆಯನ್ನು ನಿಶ್ಚಯಿಸಿದನು.

ಆಗ ಇಪ್ಪತ್ತೈದು ನಾಗಗಳು ಸನ್ನದ್ಧವಾಗಿ ಬಂದವು. ಬಿಲ್ಲು ಹಿಡಿದು ಮುನ್ನೂರೂ ಕತ್ತಿಗುರಾಣಿ ಹಿಡಿದು ಆರುಸಾವಿರವೂ ಬಂದವು.

ನಾಗರಾಜನು "ಇವರನ್ನು ಕೊಲ್ಲಿರಿ, ಕಟ್ಟಿರಿ, ಜೀವದೊಂದಿಗೆ ಬಿಡಬೇಡಿರಿ. ಮುಖಂಡನನ್ನು ಬಿಟ್ಟು ಇವರನ್ನೆಲ್ಲಾ ಭಸ್ಮಮಾಡಿರಿ" ಎಂದನು.

ನಾಗಗಳು ಹಾಗೆಯೇ ಮಾಡಿ, ಕಂಬಳಿ ಮೊದಲಾದವುಗಳನ್ನು ಐನೂರು ಗಾಡಿಗಳಲ್ಲಿ ಏರಿಸಿ, ಮುಖಂಡನನ್ನು ಕರೆದುಕೊಂಡು, ತಾವೇ ಅವನ ಗಾಡಿಗಳನ್ನು ವಾರಾಣಸಿಗೆ ಮುಟ್ಟಿಸಿ, ಸರ್ವ ಧನವನ್ನೂ ಅವನ ಮನೆಯಲ್ಲಿ ಜೋಡಿಸಿ, ಅವನ ಅಪ್ಪಣೆಪಡೆದು ತಮ್ಮ ನಾಗಭವನಕ್ಕೆ ಹೋದವು.

## ಜವನ ಹಂಸ

ಹಿಂದೆ ಬ್ರಹ್ಮದತ್ತನು ವಾರಾಣಸಿಯಲ್ಲಿ ರಾಜ್ಯವಾಳುತ್ತಿದ್ದಾಗ ಮಹಾಸತ್ತ್ವನು ಜವನ ಹಂಸದ ಹೊಟ್ಟೆಯಲ್ಲಿ ಜನ್ಮತಾಳಿ, ತೊಂಬತ್ತು ಸಾವಿರ ಹಂಸಗಳ ಪರಿವಾರದೊಡನೆ ಚಿತ್ರಕೂಟದಲ್ಲಿ ವಾಸಿಸುತ್ತಿದ್ದನು.

ಆ ಹಂಸ ಒಂದು ದಿವಸ ಜಂಬೂದ್ವೀಪದ ಒಂದಾನೊಂದು ಕೊಳದಲ್ಲಿ ತಾನಾಗಿಯೇ ಹುಟ್ಟಿದ ಬತ್ತವನ್ನು ತನ್ನ ಪರಿವಾರದೊಡನೆ ತಿನ್ನುತ್ತಾ, ಆಕಾಶದಲ್ಲಿ ಚಿನ್ನದ ಚಾಪೆಯನ್ನು ಹರಡಿದಂತೆ ಮಹತ್ತಾದ ಪರಿವಾರದೊಡನೆ ವಾರಾಣಸಿನಗರದ ತಲೆಯಮೇಲೆ ಮಂದಮಂದವಾಗಿ ವಿಲಾಸಗತಿಯಿಂದ ಚಿತ್ರಕೂಟಕ್ಕೆ ಹೋಗುತ್ತಿತ್ತು.

ಆಗ ವಾರಾಣಸಿರಾಜನು ಅದನ್ನು ಕಂಡು, "ಇದೂ ನನ್ನಂತೆಯೇ ರಾಜನಾಗಿರಬೇಕು" ಎಂದು ಅಮಾತ್ಯರಿಗೆ ಹೇಳಿ, ಅದರಲ್ಲಿ ಸ್ನೇಹ ಗೊಂಡು, ಮಾಲಾ ಗಂಧ ವಿಲೇಪನಗಳನ್ನು ತೆಗೆದುಕೊಂಡು, ಮಹಾ ಸತ್ತ್ವನನ್ನು ಗಮನಿಸುತ್ತಾ ಸರ್ವತೂರ್ಯಗಳನ್ನೂ ಧ್ವನಿಮಾಡಿಸಿದನು.

ಮಹಾಸತ್ತ್ವನು ಅವನು ತನಗೆ ಸತ್ಕಾರ ಮಾಡುವುದನ್ನು ಕಂಡು, "ರಾಜನು ನನಗೆ ಇಂತಹ ಸತ್ಕಾರ ಮಾಡಿದುದಕ್ಕೆ ಪ್ರತಿಯಾಗಿ ಏನು ಆಶಿಸುವನು" ಎಂದು ಹಂಸಗಳನ್ನು ಪ್ರಶ್ನಿಸಿದನು.

"ನಿನ್ನೊಡನೆ ಮಿತ್ರಭಾವವನ್ನು, ದೇವ."

"ಹಾಗಾದರೆ, ರಾಜನಿಗೆ ನನ್ನೊಡನೆ ಮಿತ್ರಭಾವವಾಗಲಿ" ಎಂದು ಆ ಹಂಸ ರಾಜನೊಡನೆ ಮಿತ್ರಭಾವಮಾಡಿಕೊಂಡು ಹೊರಟಿತು.

ಆಗ ಒಂದು ದಿವಸ, ರಾಜನು ಉದ್ಯಾನಕ್ಕೆ ಹೋದ ಕಾಲದಲ್ಲಿ, ಮಹಾಸತ್ತ್ವನು ಅನವತಪ್ತಸರೋವರಕ್ಕೆ ಹೋಗಿ, ಒಂದು ರೆಕ್ಕೆಯಲ್ಲಿ ನೀರನ್ನೂ ಒಂದು ರೆಕ್ಕೆಯಲ್ಲಿ ಚಂದನಚೂರ್ಣವನ್ನೂ ತೆಗೆದುಕೊಂಡು ಬಂದು, ರಾಜನಿಗೆ ಆ ನೀರಿನಿಂದ ಸ್ನಾನಮಾಡಿಸಿ, ಚಂದನಚೂರ್ಣವನ್ನು ಮೈಮೇಲೆ ಚಿಮುಕಿಸಿ, ಮಹಾಜನರು ನೋಡುತ್ತಿದ್ದಂತೆಯೇ ಪರಿವಾರ ದೊಡನೆ ಚಿತ್ರಕೂಟಕ್ಕೆ ತೆರಳಿದನು.

ಅಂದಿನಿಂದ ರಾಜನು ಮಹಾಸತ್ತ್ವನನ್ನು ಕಾಣುವ ಆಸೆಯುಳ್ಳವನಾಗಿ, "ನನ್ನ ಗೆಳೆಯನು ಇಂದು ಬರುವನು" ಎಂದು ಅವನು ಬರುವ ದಾರಿಯನ್ನು ಗಮನಿಸುತ್ತಾ ಕಾಯುವನು.

ಆಗ ಮಹಾಸತ್ತ್ವನ ತಮ್ಮಂದಿರಾದ ಎರಡು ಹಂಸದ ಮರಿಗಳು "ಸೂರ್ಯನೊಡನೆ ವೇಗವಾಗಿ ಓಡೋಣ" ಎಂದು ಮಾತನಾಡಿಕೊಂಡು, "ನಾವು ಸೂರ್ಯನೊಡನೆ ವೇಗವಾಗಿ ಓಡುವೆವು" ಎಂದು ಮಹಾಸತ್ತ್ವನಿಗೆ ತಿಳಿಸಿದವು.

"ಅಪ್ಪಾ, ಸೂರ್ಯವೇಗವೆಂಬುದು ಶೀಘ್ರವಾದುದು. ಸೂರ್ಯನೊಡನೆ ವೇಗವಾಗಿ ಓಡಲಾರಿರಿ. ನಡುವೆಯೇ ವಿನಾಶವಾಗುವಿರಿ. ಹೋಗಬೇಡಿರಿ."

ಅವು ಎರಡು ಮೂರು ಸಲ ಬೇಡಿದವು. ಬೋಧಿಸತ್ತ್ವನು ಮೂರನೆಯ ಸಲವೂ ತಡೆದೇ ತಡೆದನು.

ಅವು ಮಾನದಿಂದ ಸ್ತಬ್ಧವಾಗಿ ತಮ್ಮ ಬಲವನ್ನು ತಿಳಿಯದೆ, ಮಹಾಸತ್ತ್ವನನ್ನು ಕೇಳದೆಯೇ "ಸೂರ್ಯನೊಡನೆ ವೇಗವಾಗಿ ಓಡುವೆವು" ಎಂದು ಸೂರ್ಯನು ಏಳದಿರುವಾಗಲೇ ಹೋಗಿ, ಯುಗಂಧರ ಪರ್ವತದ ನೆತ್ತಿಯಲ್ಲಿ ಕುಳಿತವು.

ಮಹಾಸತ್ತ್ವನು ಅವುಗಳನ್ನು ಕಾಣದೆ, "ಅವು ಎಲ್ಲಿ ಹೋದವು?" ಎಂದು ಪ್ರಶ್ನಿಸಿ, ಅಲ್ಲಿ ನಡೆದುದನ್ನು ಕೇಳಿ, "ಅವು ಸೂರ್ಯನೊಡನೆ ವೇಗವಾಗಿ ಓಡಲಾರವು. ನಡುವೆಯೇ ವಿನಾಶವಾಗುವುವು. ಅವುಗಳಿಗೆ ಜೀವದಾನ ಮಾಡುವೆನು" ಎಂದು ತಾನೂ ಹೋಗಿ, ಯುಗಂಧರದ ನೆತ್ತಿಯಲ್ಲೇ ಕುಳಿತನು.

ಆಗ ಸೂರ್ಯಮಂಡಲವು ಮೇಲೇಳಲು, ಹಂಸದ ಮರಿಗಳೂ ಮೇಲೆದ್ದು ಸೂರ್ಯನೊಡನೆ ನೆಗೆದವು. ಮಹಾಸತ್ತ್ವನೂ ಅವುಗಳೊಡನೆ ನೆಗೆದನು.

ಚಿಕ್ಕ ಹಂಸವು ಪೂರ್ವಾಹ್ಣಸಮಯದವರೆಗೂ ವೇಗವಾಗಿ ಓಡಿ ಆಯಾಸಗೊಂಡಿತು. ರೆಕ್ಕೆಯ ಸಂದುಗಳಲ್ಲಿ ಬೆಂಕಿಹುಟ್ಟುವ

ವೇಳೆಯುಂತಾಯಿತು. ಅದು "ಅಣ್ಣ, ನನ್ನ ಕೈಲಾಗದು" ಎಂದು ಬೋಧಿಸತ್ತ್ವನಿಗೆ ಸನ್ನೆಮಾಡಿತು. ಆಗ ಮಹಾಸತ್ತ್ವನು "ಹೆದರಬೇಡ. ನಿನಗೆ ಜೀವದಾನ ಮಾಡುತ್ತೇನೆ" ಎಂದು ಅದನ್ನು ಪಕ್ಷಪಂಜರದಲ್ಲಿ ಬೀಳಿಸಿಕೊಂಡು, ಸಂತೈಸಿ, ಚಿತ್ರಕೂಟಪರ್ವತಕ್ಕೆ ಒಯ್ದು, ಹಂಸಗಳ ನಡುವೆ ಇರಿಸಿ, ಪುನಃ ನೆಗೆದು, ಸೂರ್ಯನನ್ನು ಸೇರಿ, ಇನ್ನೊಂದ ರೊಡನೆ ಹೋದನು.

ಇನ್ನೊಂದು ಕೂಡ ಮಧ್ಯಾಹ್ನದ ಹತ್ತಿರದವರೆಗೂ ಸೂರ್ಯನೊಡನೆ ವೇಗದಿಂದ ಹೋಗಿ, ಆಯಾಸಗೊಂಡಿತು. ರೆಕ್ಕೆಗಳ ಸಂದುಗಳಲ್ಲಿ ಬೆಂಕಿ ಎದ್ದಂತಾಯಿತು. ಆಗ "ಅಣ್ಣ, ನನ್ನ ಕೈಲಾಗದು" ಎಂದು ಬೋಧಿ ಸತ್ತ್ವನಿಗೆ ಸಂಜ್ಞೆಮಾಡಿತು. ಮಹಾಸತ್ತ್ವನು ಅದನ್ನು ಕೂಡ ಸಂತೈಸಿ, ಪಕ್ಷಪಂಜರದಲ್ಲಿ ಕೊಂಡು ಚಿತ್ರಕೂಟಕ್ಕೇ ಹೋದನು.

ಆ ವೇಳೆಗೆ ಸೂರ್ಯನು ಆಕಾಶದ ನಡುವಿಗೆ ಬಂದನು. ಆಗ ಮಹಾಸತ್ತ್ವನು "ಇಂದು ನನ್ನ ಶರೀರಬಲವನ್ನು ವಿಮರ್ಶೆಮಾಡುವೆನು" ಎಂದು ಚಿಂತಿಸಿ, ಒಂದೇ ವೇಗದಿಂದ ಹಾರಿ, ಯುಗಂಧರದ ನೆತ್ತಿಯಲ್ಲಿ ಕುಳಿತು, ಅಲ್ಲಿಂದ ಎದ್ದು ಒಂದೇ ವೇಗದಿಂದ ಸೂರ್ಯನನ್ನು ಸೇರಿ, ಒಮ್ಮೆ ಹಿಂದೆಯೂ ಒಮ್ಮೆ ಮುಂದೆಯೂ ವೇಗವಾಗಿ ಹೋಗುತ್ತಾ, "ನಾನು ಸೂರ್ಯನೊಡನೆ ವೇಗವಾಗಿ ಓಡುವುದು ನಿರರ್ಥಕ, ಬುದ್ಧಿ ಯಿಲ್ಲದ ಕೆಲಸ. ಇದರಿಂದ ನನಗೇನು? ವಾರಾಣಸಿಗೆ ಹೋಗಿ, ನನ್ನ ಗೆಳೆಯನಾದ ರಾಜನೊಡನೆ ಅರ್ಥಧರ್ಮಗಳಿಂದ ಕೂಡಿದ ಮಾತನಾಡು ವೆನು" ಎಂದು ಹಿಂದಿರುಗಿ, ಸೂರ್ಯನು ಗಗನದ ನಡುವನ್ನು ಮೀರದಿರು ವದರೊಳಗೇ ಚಕ್ರವಾಳವನ್ನು ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಬಳಸಿಕೊಂಡು, ಸಕಲ ಜಂಬೂದ್ವೀಪವನ್ನೂ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಬಳಸಿಕೊಂಡು, ವಾರಾಣಸಿ ಯನ್ನು ಸೇರಿದನು.

ಹನ್ನೆರಡು ಯೋಜನಗಳ ನಗರವೆಲ್ಲಾ ಹಂಸದಿಂದ ಮುಚ್ಚಿ ದಂತಾಯಿತು, ಬಿರುಕೆಂಬುದೇ ತಿಳಿಯುತ್ತಿರಲಿಲ್ಲ. ಅನುಕ್ರಮವಾಗಿ ವೇಗ ಕಡಮೆಯಾಗಲು, ಆಕಾಶದಲ್ಲಿ ಬಿರುಕುಗಳು ತಿಳಿಯಬಂದವು.

ಮಹಾಸತ್ತ್ವನು ವೇಗವನ್ನು ತಗ್ಗಿಸಿ, ಆಕಾಶದಿಂದ ಇಳಿದು, ಕಿಟಕಿಗೆ ಎದುರಿನ ಸ್ಥಾನದಲ್ಲಿ ನಿಂತನು. ರಾಜನು "ನನ್ನ ಗೆಳೆಯನು ಬಂದನು" ಎಂದು ಸಂತೋಷಪಟ್ಟು, ಅವನು ಕುಳಿತುಕೊಳ್ಳುವುದಕ್ಕಾಗಿ ಚಿನ್ನದ ಪೀಠವನ್ನು ತೋರಿಸಿ, "ಒಳಗೆ ಬಾರಯ್ಯ. ಇಲ್ಲಿ ಕುಳಿತುಕೊ" ಎಂದು ಹೇಳುತ್ತಾ "ಇಲ್ಲಿ ಬಂದು ಕುಳಿತುಕೊ, ಹಂಸ. ನಿನ್ನ ದರ್ಶನವು ನನಗೆ ಪ್ರಿಯವಾದುದು. ನೀನು ಇಲ್ಲಿಗೆ ಒಡೆಯ. ಇಲ್ಲಿ ಇರುವುದೆಲ್ಲಾ ನಿನ್ನದು. ಏನು ಬೇಕೋ, ತಿಳಿಸು" ಎಂದನು.

ಮಹಾಸತ್ತ್ವನು ಕಾಂಚನ ಪೀಠದಲ್ಲಿ ಕುಳಿತನು. ರಾಜನು ಶತಪಾಕ ಸಹಸ್ರಪಾಕಗಳ ತೈಲದಿಂದ ಅವನ ರೆಕ್ಕೆಗಳ ಒಳಗನ್ನು ಸವರಿ, ಚಿನ್ನದ ತಟ್ಟೆಯಲ್ಲಿ ಸಿಹಿಯರಳುಗಳನ್ನೂ ಸಕ್ಕರೆನೀರನ್ನೂ ಕೊಡಿಸಿ, ಮಧುರವಾಗಿ ಕುಶಲಪ್ರಶ್ನೆ ಕೇಳುತ್ತಾ, "ಅಯ್ಯಾ, ನೀನು ಒಬ್ಬನೇ ಬಂದಿರುವೆ. ಎಲ್ಲಿಂದ ಬಂದೆ?" ಎಂದನು.

ಹಂಸ ನಡೆದುದನ್ನು ವಿಸ್ತಾರವಾಗಿ ಹೇಳಿತು.

ಆಗ ರಾಜನು "ಅಯ್ಯಾ, ಸೂರ್ಯನೊಡನೆ ಓಟ ಓಡಿದ ವೇಗವನ್ನು ನನಗೂ ಕಾಣಿಸು" ಎಂದನು.

"ಮಹಾರಾಜ, ಆ ವೇಗವನ್ನು ಕಾಣಿಸಲು ಶಕ್ಯವಿಲ್ಲ."

"ಹಾಗಾದರೆ, ಅದರ ಹಾಗೆ ಇರುವದನ್ನು ಕಾಣಿಸು."

"ಒಳ್ಳೆಯದು, ಮಹಾರಾಜ. ಅದರ ಹಾಗೆ ಇರುವದನ್ನು ಕಾಣಿಸುವೆನು. ಮಿಂಚನ್ನು ಭೇದಿಸುವ ಬಿಲ್ಗಾರರನ್ನು ಒಟ್ಟುಕರೆಸು."

ರಾಜನು ಅವರನ್ನು ಒಟ್ಟುಕರೆಸಿದನು.

ಮಹಾಸತ್ತ್ವನು ನಾಲ್ವರನ್ನು ಕರೆದುಕೊಂಡು ರಾಜನ ಮನೆಯಿಂದ ಇಳಿದು, ರಾಜಾಂಗಣದಲ್ಲಿ ಕಲ್ಲಿನ ಕಂಬವನ್ನು ಅಗೆದು ಇಡಿಸಿ, ತನ್ನ ಕೊರಳಿನಲ್ಲಿ ಗಂಟೆಯನ್ನು ಕಟ್ಟಿಸಿಕೊಂಡು, ಕಲ್ಲು ಕಂಬದ ನೆತ್ತಿಯಲ್ಲಿ ಕುಳಿತು, ನಾಲ್ವರು ಬಿಲ್ಗಾರರನ್ನೂ ಕಲ್ಲುಕಂಬದ ನಾಲ್ಕು ದಿಕ್ಕುಗಳಿಗೆ ಎದುರಾಗಿ ನಿಲ್ಲಿಸಿ, "ಮಹಾರಾಜ, ಈ ನಾಲ್ವರೂ ಒಂದೇ ಏಟಿಗೆ ನಾಲ್ಕು ದಿಕ್ಕುಗಳಿಗೆ ಎದುರಾಗಿ ನಾಲ್ಕು ಬಾಣಗಳನ್ನು ಬೀಳಿಸಲಿ. ನಾನು ಅವು ಭೂಮಿಯಲ್ಲಿ ಬೀಳುವದರೊಳಗೇ ತಂದು, ಅವರ

ಕಾಲುಗಳ ಬಳಿ ಬೀಳಿಸುವೆನು. ನಾನು ಬಾಣಗಳಿಗಾಗಿ ಹೋದುದನ್ನು ಗಂಟೆಯ ಸದ್ದಿನ ಗುರುತಿನಿಂದ ತಿಳಿಯಬಹುದು. ನಾನು ಮಾತ್ರ ತಿಳಿದುಬರುವುದಿಲ್ಲ" ಎಂದು ಹೇಳಿ, ಅವರು ಒಂದೇ ಏಟಿಗೆ ಬಿಟ್ಟ ಬಾಣ ಗಳನ್ನು ತಂದು, ಅವರ ಕಾಲ ಬಳಿ ಹಾಕಿ, ಕಲ್ಲಿನ ಕಂಬದ ಮೇಲೆ ಕುಳಿತಂತೆ ತನ್ನನ್ನು ಕಾಣಿಸಿಕೊಂಡು, "ನನ್ನ ವೇಗವನ್ನು ನೋಡಿದೆಯ, ಮಹಾರಾಜ?" ಎಂದು ಕೇಳಿ, "ಮಹಾರಾಜ, ಇದು ನನ್ನ ಉತ್ತಮ ವೇಗವೂ ಅಲ್ಲ, ಮಧ್ಯಮವಾದದ್ದೂ ಅಲ್ಲ; ಬಹಳ ನಿದಾನವಾದದ್ದು. ಹೀಗೆ ಶೀಘ್ರವಾದುದು ನನ್ನ ವೇಗ, ಮಹಾರಾಜ" ಎಂದನು.

ಆಗ ರಾಜನು ಅವನನ್ನು "ಅಯ್ಯಾ, ನಿನ್ನ ವೇಗಕ್ಕಿಂತ ಶೀಘ್ರ ತರವಾದುದು ಬೇರೆ ಉಂಟೆ?" ಎಂದು ಪ್ರಶ್ನಿಸಿದನು.

"ಉಂಟು, ಗೆಳೆಯ. ನನ್ನ ಉತ್ತಮವೇಗಕ್ಕಿಂತ ನೂರರಷ್ಟು, ಸಾವಿರದಷ್ಟು, ನೂರು ಸಾವಿರದಷ್ಟು ವೇಗವಾಗಿ ಈ ಜೀವಿಗಳ ಆಯು ಸ್ಸಿನ ರಾಶಿ ಕಡಮೆಯಾಗುತ್ತದೆ, ಮುರಿದು ಬೀಳುತ್ತದೆ, ಕ್ಷಯವಾಗು ತ್ತದೆ" ಎಂದು, ರೂಪವುಳ್ಳವುಗಳು ಹೇಗೆ ಕ್ಷಣಕ್ಷಣಕ್ಕೂ ಮುರಿದು ಬೀಳುತ್ತವೆಯೆಂಬುದನ್ನು ತೋರಿಸಿದನು.

ರಾಜನು ಮಹಾಸತ್ತ್ವನ ಮಾತು ಕೇಳಿ, ಮರಣಭಯಭೀತನಾಗಿ, ಎಚ್ಚರಗೊಂಡಿರಲಾರದೆ ನೆಲದಲ್ಲಿ ಬಿದ್ದನು. ಮಹಾಜನರು ಕಳವಳಿಸಿ, ರಾಜನ ಮುಖದ ಮೇಲೆ ನೀರು ಚಿಮುಕಿಸಿ, ಎಚ್ಚರಗೊಳಿಸಿದರು.

ಆಗ ಮಹಾಸತ್ತ್ವನು ಅವನನ್ನು ಕುರಿತು, "ಮಹಾರಾಜ, ಹೆದರ ಬೇಡ. ಮರಣದ ಬಗ್ಗೆ ಎಚ್ಚರದಿಂದಿರು. ಧರ್ಮವನ್ನು ಆಚರಿಸು. ದಾನಾದಿ ಪುಣ್ಯಗಳನ್ನು ಮಾಡು. ಎಚ್ಚರ ತಪ್ಪದೆ ಇರು" ಎಂದು ಬುದ್ಧಿ ಹೇಳಿದನು.

ಅದಕ್ಕೆ ರಾಜನು "ಸ್ವಾಮಿ, ನಿನ್ನಂತಹ ಜ್ಞಾನಸಂಪನ್ನನಾದ ಆಚಾರ್ಯನನ್ನು ಬಿಟ್ಟು ನಾನು ವಾಸಮಾಡಲಾರೆ. ಚಿತ್ರಕೂಟಪರ್ವತ ದಿಂದ ಬಂದು, ನನಗೆ ಧರ್ಮವನ್ನು ತಿಳಿಸುತ್ತಾ ನನಗೆ ಬುದ್ಧಿ ಹೇಳುವ ಆಚಾರ್ಯನಾಗಿ ಇಲ್ಲಿಯೇ ವಾಸಮಾಡು" ಎಂದು ಬೇಡುತ್ತಾ,

"ಕೆಲವರ ಮಾತನ್ನು ಕೇಳಿದರೆ, ಅವರಲ್ಲಿ ಪ್ರೀತಿಯುಂಟಾಗುವುದು. ಕೆಲವರನ್ನು ಕಂಡರೆ, ಪ್ರೀತಿ ಮರೆಯಾಗುವುದು. ಕೆಲವರನ್ನು ಕಂಡರೂ ಕೇಳಿದರೂ, ಅವರಲ್ಲಿ ಪ್ರೀತಿಯುಂಟಾಗುವುದು. ನೀನು ನಿನ್ನ ದರ್ಶನ ದಿಂದ ನನಗೆ ಪ್ರೀತಿಯುಂಟುಮಾಡು. ನಿನ್ನನ್ನು ಕೇಳಿ, ನನಗೆ ಪ್ರೀತಿ ಯುಂಟಾಗಿದೆ. ನೀನು ಬಂದುದನ್ನು ಕಂಡು, ಇನ್ನೂ ಹೆಚ್ಚಾಗಿದೆ. ಹೀಗೆ ದರ್ಶನದಿಂದ ಪ್ರೀತಿಯುಂಟುಮಾಡುತ್ತಾ ನನ್ನ ಹತ್ತಿರ ವಾಸಮಾಡು, ಹಂಸ" ಎಂದನು.

ಬೋಧಿಸತ್ತ್ವನು "ನಿತ್ಯವೂ ಸತ್ಕಾರಗಳಿಂದ ಪೂಜೆಗೊಂಡು ನಿನ್ನ ಮನೆಯಲ್ಲಿ ವಾಸಮಾಡುತ್ತೇನೆ. ಆದರೆ ನೀನು ಒಮ್ಮೆ ಮತ್ತನಾಗಿ 'ಹಂಸರಾಜನನ್ನು ನನಗೆ ಬೇಯಿಸಿಕೊಡಿ' ಎಂದು ಹೇಳಬಹುದು" ಎಂದನು.

ಆಗ ರಾಜನು "ಹಾಗಾದರೆ, ನಾನು ಮದ್ಯವನ್ನೇ ಕುಡಿಯು ವುದಿಲ್ಲ" ಎಂದು ಪ್ರತಿಜ್ಞೆಮಾಡುತ್ತಾ, "ನನಗೆ ಅನ್ನಪಾನಗಳು ನಿನಗಿಂತ ಹೆಚ್ಚು ಪ್ರಿಯವಾದರೆ, ಅವಕ್ಕೆ ಧಿಕ್ಕಾರವಿರಲಿ. ನೀನು ನನ್ನ ಮನೆ ಯಲ್ಲಿ ವಾಸಿಸುತ್ತಿರುವ ವರೆಗೆ ನಾನು ಮದ್ಯವನ್ನು ಕುಡಿಯುವುದಿಲ್ಲ" ಎಂದನು.

ಅನಂತರ ಬೋಧಿಸತ್ತ್ವನು "ಸೃಗಾಲಗಳ ಕೂಗೂ ಹಕ್ಕಿಗಳ ಕೂಗೂ ಸುಲಭವಾಗಿ ತಿಳಿಯುತ್ತದೆ. ಆದರೆ, ರಾಜ, ಮನುಷ್ಯರ ಮಾತನ್ನು ತಿಳಿಯುವುದು ಅದಕ್ಕಿಂತ ಕಷ್ಟ. ಒಬ್ಬನು 'ಇವನು ನನ್ನ ಜ್ಞಾತಿ ಮಿತ್ರ', 'ಇವನು ನನ್ನ ಸ್ನೇಹಿತ' ಎಂದು ತಿಳಿದಿದ್ದರೂ, ಹಿಂದೆ ಒಳ್ಳೆಯ ಮನಸ್ಸಿನಿಂದಿದ್ದವನು ಆಮೇಲೆ ದ್ವೇಷಿಸುವನು. ಮನಸ್ಸಿನಲ್ಲಿ ಇರುವವನು ದೂರದಲ್ಲಿದ್ದರೂ ಜೊತೆಯಲ್ಲಿ ಇದ್ದಂತೆಯೇ; ಮನಸ್ಸಿನಲ್ಲಿ ಇಲ್ಲದವನು ಬಳಿಯಲ್ಲಿದ್ದರೂ ದೂರದಲ್ಲಿ ಇದ್ದಂತೆಯೇ. ಪ್ರಸನ್ನವಾದ ಚಿತ್ತದಿಂದಿರುವವನು ಸಮುದ್ರದ ಆಚೆ ವಾಸಿಸುತ್ತಿದ್ದರೂ ಒಳಗೆಯೇ ಇರುವನು; ಪ್ರದುಷ್ಟವಾದ ಚಿತ್ತದಿಂದ ಕೂಡಿದವನು ಒಳಗೆಯೇ ವಾಸಿಸುತ್ತಿದ್ದರೂ ಸಮುದ್ರದ ಆಚೆ ಇದ್ದಂತೆ. ಓ ರಥಗಳ ಒಡೆಯ, ನಿನ್ನ ದ್ವೇಷಿಗಳು ಜೊತೆಯಲ್ಲಿ ವಾಸಿಸುತ್ತಿದ್ದರೂ ದೂರ ಇರುವರು;

ರಾಷ್ಟ್ರವರ್ಧನ, ಒಳ್ಳೆಯವರು ದೂರದಲ್ಲಿದ್ದರೂ ಮನಸ್ಸಿನಿಂದ ನಿನ್ನೊಡನೆ ಇರುವರು. ಬಹುಕಾಲ ನಿಲ್ಲುವದರಿಂದ ಪ್ರಿಯರು ಅಪ್ರಿಯರಾಗುವರು. ನಿನಗೆ ಅಪ್ರಿಯನಾಗುವದರೊಳಗಾಗಿ ನಿನ್ನ ಅಪ್ಪಣೆ ಪಡೆದು ಹೋಗೋಣ" ಎಂದನು.

ಆಗ ರಾಜನು ಅವನನ್ನು ಕುರಿತು, "ಹೀಗೆ ಕೈಮುಗಿದು ಬೇಡಿದರೂ ನೀನು ಕೇಳುವುದಿಲ್ಲ. ಪರಿಚಾರಕರಾದ ನಮ್ಮ ಮಾತನ್ನು ನೀನು ನಡಸುವುದಿಲ್ಲ. ಪುನಃ ಆಗಾಗ್ಗೆ ಬರುತ್ತಿರಬೇಕೆಂದು ತಿರುಗಿ ಬೇಡುತ್ತೇನೆ" ಎಂದನು.

ಅದಕ್ಕೆ ಬೋಧಿಸತ್ತ್ವನು "ರಾಷ್ಟ್ರವರ್ಧನನಾದ ಮಹಾರಾಜ, ನೀನಾಗಲಿ ನಾನಾಗಲಿ ಸಾಯದೆ ಬದುಕಿದ್ದರೆ, ಹಗಲೂ ರಾತ್ರಿ ಮುಗಿದ ಮೇಲೆ ಒಬ್ಬರನ್ನೊಬ್ಬರು ಕಾಣುವೆವು" ಎಂದನು.

ಹೀಗೆ ಮಹಾಸತ್ತ್ವನು ರಾಜನಿಗೆ ಬುದ್ಧಿ ಹೇಳಿ, ಚಿತ್ರಕೂಟಕ್ಕೆ ಹೋದನು.

# ಧರ್ಮ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕಾಮಾವಚರಲೋಕದಲ್ಲಿ ಧರ್ಮನೆಂಬ ದೇವಪುತ್ರನಾಗಿಯೂ, ದೇವದತ್ತನು ಅಧರ್ಮನೆಂಬವನಾಗಿಯೂ ಜನ್ಮತಾಳಿದರು.

ಅವರಲ್ಲಿ ಧರ್ಮನು, ಪೂರ್ಣಿಮಾ ಉಪವಾಸದ ದಿವಸ ಹಳ್ಳಿಗಳಲ್ಲೂ ಪಟ್ಟಣ ರಾಜಧಾನಿಗಳಲ್ಲೂ ಮನುಷ್ಯರು ಸಂಜೆಯೂಟವನ್ನು ಉಂಡು, ತಮ್ಮ ತಮ್ಮ ಮನೆಬಾಗಿಲಿನಲ್ಲಿ ಸುಖವಾಗಿ ಮಾತನಾಡುತ್ತಾ ಕುಳಿತಿರುವಾಗ ದಿವ್ಯಾಲಂಕಾರಗಳನ್ನು ಧರಿಸಿ, ದಿವ್ಯವಾದ ರಥವರವನ್ನು ಏರಿ, ಅಪ್ಸರೆಯರ ಪರಿವಾರದೊಡನೆ ಆಕಾಶದಲ್ಲಿ ನಿಂತು, "ಪ್ರಾಣಿಹಿಂಸೆಯೇ ಮೊದಲಾದ ಹತ್ತು ಅಕುಶಲಕರ್ಮಮಾರ್ಗಗಳನ್ನು ತೊರೆದು, ತಾಯಿಯ ಸೇವೆಮಾಡುವ ಧರ್ಮವನ್ನೂ ತಂದೆಯ ಸೇವೆಮಾಡುವ ಧರ್ಮವನ್ನೂ ಮನೋವಾಕ್ಕಾಯಗಳ ಮೂರು ವಿಧದ ಸುಚರಿತಧರ್ಮಗಳನ್ನೂ ಪೂರೈಸಿರಿ. ಹೀಗೆ ಸ್ವರ್ಗಪರಾಯಣರಾಗಿ ಮಹತ್ತಾದ ಯಶಸ್ಸನ್ನು ಅನುಭವಿಸಿರಿ" ಎಂದು ಜನರನ್ನು ದಶಕುಶಲ ಕರ್ಮಪಥಗಳಲ್ಲಿ ತಂದು ಸೇರಿಸಿ, ಜಂಬೂದ್ವೀಪವನ್ನು ಪ್ರದಕ್ಷಿಣಮಾಡಿದನು.

ಅಧರ್ಮನು "ಪ್ರಾಣಿಗಳನ್ನು ಕೊಲ್ಲಿರಿ" ಎಂದು ಮೊದಲಾದ ರೀತಿಯಿಂದ ಜನರನ್ನು ಅಕುಶಲಕರ್ಮಪಥದಲ್ಲಿ ತಂದು ನಿಲ್ಲಿಸಿ, ಜಂಬೂದ್ವೀಪವನ್ನು ಎಡಗಡೆಯಿಂದ ಬಳಸಿದನು.

ಆಗ ಅವರ ರಥಗಳು ಆಕಾಶದಲ್ಲಿ ಎದುರಾದವು. ಆಗ ಅವರ ಪರಿಷೆಯು "ನೀವು ಯಾರವರು? ನೀವು ಯಾರವರು?" ಎಂದು ಪ್ರಶ್ನಿಸಿ, "ನಾವು ಧರ್ಮನ ಕಡೆಯವರು, ನಾವು ಅಧರ್ಮನ ಕಡೆಯವರು" ಎಂದೆನ್ನಲು, ದಾರಿಯನ್ನು ದಾಟಿ, ಎರಡಾಗಿ ಭಾಗವಾದರು.

ಧರ್ಮನು ಅಧರ್ಮನನ್ನು ಕರೆದು, "ಅಯ್ಯಾ, ನೀನು ಅಧರ್ಮ. ನಾನು ಧರ್ಮ. ಮಾರ್ಗ ನನಗೆ ಅನುರೂಪವಾದುದು. ನಿನ್ನ ರಥವನ್ನು ಆಚೆಮಾಡಿ ನನಗೆ ದಾರಿ ಕೊಡು" ಎಂದು ಹೇಳುತ್ತಾ, "ನಾನು ಯಶಸ್ಸನ್ನು ಉಂಟುಮಾಡುವವನು, ಪುಣ್ಯವನ್ನು ಉಂಟುಮಾಡುವವನು, ಶ್ರಮಣಬ್ರಾಹ್ಮಣರಿಂದ ಸದಾ ಸ್ತುತಿ ಪಡೆಯುವವನು.

ನಾನು ಮಾರ್ಗಕ್ಕೆ ಅರ್ಹನಾದವನು, ದೇವತೆಗಳಿಂದಲೂ ಮನುಷ್ಯ ರಿಂದಲೂ ಪೂಜೆಗೊಳ್ಳುವವನು. ನಾನು ಧರ್ಮ. ನನಗೆ ದಾರಿಕೊಡು, ಅಧರ್ಮ" ಎಂದನು.

"ಅಧರ್ಮಯಾನವನ್ನು ದೃಢವಾಗಿ ಏರಿ ಬಲಶಾಲಿಯಾದ ನಾನು ಯಾವುದಕ್ಕೂ ಹೆದರುವುದಿಲ್ಲ. ಧರ್ಮ, ನಾನು ಹಿಂದೆ ಎಂದೂ ಕೊಡದ ದಾರಿಯನ್ನು ಇಂದು ನಿನಗೆ ಏಕೆ ಕೊಡಲಿ?"

"ಪೂರ್ವದಲ್ಲಿ, ಧರ್ಮವೇ ಮೊದಲು ಪ್ರತ್ಯಕ್ಷವಾಯಿತು. ಅನಂತರ ಲೋಕದಲ್ಲಿ ಅಧರ್ಮ ತಲೆದೋರಿತು. ಧರ್ಮವೇ ಜ್ಯೇಷ್ಠ, ಶ್ರೇಷ್ಠ, ಸನಾತನ. ಕನಿಷ್ಠ, ಜ್ಯೇಷ್ಠನಿಗೆ ದಾರಿಬಿಟ್ಟು ಹೋಗು."

"ಬೇಡಿದುದರಿಂದಾಗಲಿ, ತಕ್ಕುದೆಂದಾಗಲಿ, ನೀನು ಯೋಗ್ಯ ನೆಂದಾಗಲಿ ನಾನು ನಿನಗೆ ದಾರಿ ಕೊಡುವುದಿಲ್ಲ. ನಮ್ಮಿಬ್ಬರಿಗೂ ಇಂದು ಯುದ್ಧ ನಡೆಯಲಿ. ಯುದ್ಧದಲ್ಲಿ ಯಾವನು ಜಯಿಸುವನೋ ಅವನಿಗೆ ಮಾರ್ಗ."

"ನಾನು ಎಲ್ಲಾ ದಿಕ್ಕುಗಳಲ್ಲೂ ಪ್ರಸಿದ್ಧನಾದವನು, ಮಹಾ ಬಲ ವುಳ್ಳವನು, ಅಮಿತವಾದ ಯಶಸ್ಸುಳ್ಳವನು, ಅಸಮಾನನಾದವನು, ಸರ್ವಗುಣಗಳಿಂದಲೂ ಕೂಡಿದವನು. ನಾನು ಧರ್ಮ. ನನ್ನನ್ನು ಹೇಗೆ ಜಯಿಸುವೆ, ಅಧರ್ಮ? ಕಬ್ಬಿಣದಿಂದ ಚಿನ್ನವನ್ನು ಬಡಿಯುವ ರಲ್ಲದೆ ಚಿನ್ನದಿಂದ ಕಬ್ಬಿಣವನ್ನು ಬಡಿಯುವುದಿಲ್ಲ. ಇಂದು ಅಧರ್ಮವು ಧರ್ಮವನ್ನು ಕೊಂದರೆ, ಕಬ್ಬಿಣವು ಚಿನ್ನದಂತೆ ಕಣ್ಣಿಗೆ ಚೆನ್ನಾಗುವುದು. ಅಧರ್ಮ, ನಿನಗೆ ವೃದ್ಧಿಯಿಲ್ಲ, ಗೌರವವಿಲ್ಲ. ನಿನಗೆ ಯುದ್ಧಮಾಡುವ ಬಲವಿದ್ದರೆ, ಪ್ರಿಯವಾಗಲಿ ಅಪ್ರಿಯವಾಗಲಿ ನಿನಗೆ ದಾರಿ ಕೊಡುತ್ತೇನೆ, ನಿನ್ನ ಆಡಬಾರದ ಮಾತುಗಳನ್ನು ಕ್ಷಮಿಸುತ್ತೇನೆ."

ಬೋಧಿಸತ್ತ್ವನು ಹೀಗೆ ಮಾತನಾಡಿದ ಒಡನೆಯೇ ಅಧರ್ಮನು ರಥದಲ್ಲಿ ನಿಲ್ಲಲಾರದೆ ತಲೆಕೆಳಗಾಗಿ ಭೂಮಿಗೆ ಬಿದ್ದು, ಭೂಮಿ ಬಿಟ್ಟ ಬಿರುಕಿನಲ್ಲಿ ಹೋಗಿ, ಅವೀಚೀನರಕದಲ್ಲಿ ಜನ್ಮ ತಾಳಿದನು.

# ತಂಡುಲನಾಳಿ

ಹಿಂದೆ ಕಾಶೀರಾಷ್ಟ್ರದಲ್ಲಿ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜನಾಗಿದ್ದನು. ಆಗ ನಮ್ಮ ಬೋಧಿಸತ್ತ್ವನು ಅವನ ಬಳಿ ಬೆಲೆ ಕಟ್ಟುವವನಾಗಿದ್ದನು. ಆನೆ ಕುದುರೆ ಮೊದಲಾದವುಗಳಿಗೂ ಮಣಿ ಸುವರ್ಣ ಮೊದಲಾದವುಗಳಿಗೂ ಬೆಲೆಕಟ್ಟುತ್ತಿದ್ದನು. ಬೆಲೆಕಟ್ಟಿ, ಒಡವೆಗಳ ಒಡೆಯರಿಗೆ ಒಡವೆಗೆ ಅನುರೂಪವಾದ ಬೆಲೆ ಕೊಡುವನು.

ರಾಜನಾದರೋ ಲುಬ್ಧ. ಅವನು ತನ್ನ ಲೋಭಪ್ರಕೃತಿಯಿಂದ "ಈ ಬೆಲೆಕಟ್ಟುವವನು ಹೀಗೆ ಬೆಲೆಕಟ್ಟುತ್ತಾ ಹೋದರೆ ಬೇಗನೆಯೇ ನನ್ನ ಮನೆಯಲ್ಲಿ ಧನವು ಕಡಮೆಯಾಗುವುದು. ಇನ್ನೊಬ್ಬನನ್ನು ಬೆಲೆ ಕಟ್ಟುವವನನ್ನಾಗಿ ಮಾಡುವೆನು" ಎಂದು ಕಿಟಕಿಯನ್ನು ತೆರೆದು ರಾಜಾಂಗಣವನ್ನು ಗಮನಿಸುತ್ತಾ ಒಬ್ಬ ಹಳ್ಳಿಯವನು, ಹುಡುಗ ಬುದ್ಧಿಯ ಅಜ್ಞಾನಿಯು ರಾಜಾಂಗಣದ ಮೂಲಕ ಹೋಗುವುದನ್ನು ಕಂಡು, "ಇವನು ಬೆಲೆಕಟ್ಟುವ ಕೆಲಸವನ್ನು ಮಾಡಲು ಶಕ್ತನಾಗುವನು" ಎಂದು ಅವನನ್ನು ಕರೆಕಳಿಸಿ, "ಅಯ್ಯಾ, ನಮ್ಮ ಬಳಿ ಬೆಲೆಕಟ್ಟುವ ಕೆಲಸವನ್ನು ಮಾಡಲು ನಿನಗೆ ಆಗುವುದೆ ?" ಎಂದನು.

"ಆಗುವುದು, ದೇವ."

ರಾಜನು ತನ್ನ ಧನವನ್ನು ಕಾಪಾಡುವುದಕ್ಕಾಗಿ ಆ ಬುದ್ಧಿಯಿಲ್ಲದವನನ್ನು ಬೆಲೆಕಟ್ಟುವ ಕೆಲಸದಲ್ಲಿ ನಿಲ್ಲಿಸಿದನು.

ಅಂದಿನಿಂದ ಆ ಅಜ್ಞಾನಿಯು ಆನೆ ಕುದುರೆ ಮೊದಲಾದವುಗಳಿಗೆ ಬೆಲೆಕಟ್ಟುತ್ತಾ, ಬೆಲೆಯನ್ನು ಬಿಟ್ಟು ತನಗೆ ಇಷ್ಟಬಂದಂತೆ ಹೇಳುವನು. ಅವನು ಮೊದಲಿನವನ ಸ್ಥಾನದಲ್ಲಿದ್ದುದರಿಂದ ಅವನು ಹೇಳಿದುದೇ ಬೆಲೆಯಾಗುತ್ತಿತ್ತು.

ಆ ಕಾಲದಲ್ಲಿ ಉತ್ತರಾಪಥದಿಂದ ಒಬ್ಬ ಕುದುರೆಯ ವ್ಯಾಪಾರಿ ಐನೂರು ಕುದುರೆಗಳನ್ನು ಕರೆದು ತಂದನು. ರಾಜನು ಆ ಪುರುಷನನ್ನು ಬರಹೇಳಿ ಕುದುರೆಗಳಿಗೆ ಬೆಲೆಕಟ್ಟಿಸಿದನು. ಅವನು ಐನೂರು ಕುದುರೆಗಳಿಗೆ ಒಂದು ಅಳತೆ ಅಕ್ಕಿ ಬೆಲೆ ಮಾಡಿದನು. ಮಾಡಿ, 'ಕುದುರೆಯ

ವ್ಯಾಪಾರಿಗಳಿಗೆ ಒಂದು ಅಳತೆ ಅಕ್ಕಿ ಕೊಡಿ" ಎಂದು ಹೇಳಿ, ಕುದುರೆಗಳನ್ನು ಅಶ್ವಶಾಲೆಯಲ್ಲಿ ಇರಿಸಿದನು.

ಕುದುರೆವ್ಯಾಪಾರಿಗಳು ಹಿಂದಿನ ಬೆಲೆಕಟ್ಟುವವನ ಹತ್ತಿರ ಹೋಗಿ, ನಡೆದುದನ್ನು ತಿಳಿಸಿ, "ಇದಕ್ಕೆ ಏನು ಮಾಡತಕ್ಕುದು" ಎಂದು ಪ್ರಶ್ನಿಸಿದರು.

ಅವನು "ಆ ಪುರುಷನಿಗೆ ಲಂಚ ಕೊಟ್ಟು, 'ನಮ್ಮ ಕುದುರೆಗಳು ಒಂದು ಅಳತೆ ಅಕ್ಕಿ ಬೆಲೆ ಬಾಳುವುವೆಂದು ತಿಳಿದೇ ಇದೆ. ಆದರೆ ಒಂದು ಅಳತೆ ಅಕ್ಕಿಯ ಬೆಲೆಯನ್ನು ನಿನ್ನಿಂದ ತಿಳಿಯಬೇಕೆಂದು ನಮಗೆ ಆಸೆಯಾಗಿದೆ. ಆ ಅಳತೆ ಅಕ್ಕಿಯ ಬೆಲೆಯಿಷ್ಟೆಂದು ರಾಜನ ಹತ್ತಿರ ನಿಂತು ಹೇಳಲು ನಿನಗೆ ಶಕ್ಯವೆ?' ಎಂದು ಪ್ರಶ್ನಿಸಿರಿ. ಶಕ್ಯವೆಂದು ಏನಾದರೂ ಅವನು ಹೇಳಿದರೆ, ಅವನನ್ನು ಕರೆದುಕೊಂಡು ರಾಜನ ಹತ್ತಿರ ಹೋಗಿರಿ. ನಾನೂ ಅಲ್ಲಿಗೆ ಬರುತ್ತೇನೆ" ಎಂದು ಹೇಳಿದನು.

ಕುದುರೆವ್ಯಾಪಾರಿಗಳು 'ಒಳ್ಳೆಯದು' ಎಂದು ಬೋಧಿಸತ್ತ್ವನ ಮಾತನ್ನು ಒಪ್ಪಿ, ಬೆಲೆಕಟ್ಟುವವನಿಗೆ ಲಂಚಕೊಟ್ಟು, ತಾವು ಬಂದ ಉದ್ದೇಶವನ್ನು ತಿಳಿಸಿದರು. ಅವನು ಲಂಚ ಪಡೆದೊಡನೆ, 'ಒಂದು ಅಳತೆ ಅಕ್ಕಿಗೆ ಬೆಲೆಕಟ್ಟಲು ನನಗೆ ಶಕ್ಯ" ಎಂದನು. "ಹಾಗಾದರೆ, ರಾಜನ ಮನೆಗೆ ಹೋಗೋಣ" ಎಂದು ಅವನನ್ನು ಕರೆದುಕೊಂಡು ರಾಜನ ಹತ್ತಿರ ಬಂದರು. ಬೋಧಿಸತ್ತ್ವನೂ ಇತರ ಬಹು ಅಮಾತ್ಯರೂ ಬಂದರು.

ಕುದುರೆವ್ಯಾಪಾರಿಗಳು ರಾಜನನ್ನು ವಂದಿಸಿ, "ದೇವ, ಐನೂರು ಕುದುರೆಗಳಿಗೆ ಒಂದು ಅಳತೆ ಅಕ್ಕಿ ಬೆಲೆಯಾದುದನ್ನು ಬಲ್ಲೆವು. ಆದರೆ ಆ ಅಳತೆ ಅಕ್ಕಿಗೆ ಏನು ಬೆಲೆಯಾಗುವುದೆಂದು ಬೆಲೆಕಟ್ಟುವವನನ್ನು ಕೇಳು, ದೇವ" ಎಂದರು.

ರಾಜನು ಆ ನಡೆದುದನ್ನು ಅರಿಯದೆ, "ಓಹೋ ಬೆಲೆಕಟ್ಟುವವನೆ, ಐನೂರು ಕುದುರೆಗಳಿಗೆ ಏನು ಬೆಲೆಯಾಗುವುದು?" ಎಂದು ಕೇಳಿದನು.

"ಒಂದು ಅಳತೆ ಅಕ್ಕಿ, ದೇವ."

"ಆಗಲಯ್ಯಾ, ಐನೂರು ಕುದುರೆಗಳಿಗೆ ಒಂದು ಅಳತೆ ಅಕ್ಕಿ ಬೆಲೆಯಾಗಲಿ. ಆ ಅಳತೆ ಅಕ್ಕಿಗೆ ಏನು ಬೆಲೆಯಾಗುವುದು?"

ಆ ಅಜ್ಞಾನಿ "ಆ ಅಳತೆ ಅಕ್ಕಿಗೆ ವಾರಾಣಸಿಯ ಒಳಗುಹೊರಗುಗಳನ್ನು ಕೂಡಿಸಿದಷ್ಟು ಬೆಲೆಯಾಗುವುದು" ಎಂದನು.

ಅವನು ಹಿಂದೆ ರಾಜನ ಅನುವರ್ತಿಯಾಗಿ, ಕುದುರೆಗಳಿಗೆ ಒಂದು ಅಳತೆ ಬತ್ತದ ಅಕ್ಕಿ ಬೆಲೆಕಟ್ಟಿದನು. ಪುನಃ ವಾಣಿಜರ ಕೈಯಲ್ಲಿ ಲಂಚಪಡೆದು, ಆ ಅಳತೆ ಅಕ್ಕಿಗೆ ವಾರಾಣಸಿಯ ಒಳಗುಹೊರಗುಗಳನ್ನು ಸೇರಿಸಿ ಬೆಲೆ ಕಟ್ಟಿದನು. ಆಗ ವಾರಾಣಸಿಯ ಸುತ್ತಲೂ ಇದ್ದ ಪ್ರಾಕಾರ ಹನ್ನೆರಡು ಯೋಜನವಾಗಿತ್ತು, ಅದರ ಒಳಗುಹೊರಗುಗಳಾದರೋ ಮೂರುನೂರು ಯೋಜನಗಳ ರಾಷ್ಟ್ರವಾಗಿತ್ತು. ಆದರೂ ಆ ಅಜ್ಞಾನಿ ಹೀಗೆ ಮಹತ್ತಾದ ವಾರಾಣಸಿಯ ಒಳಗುಹೊರಗುಗಳನ್ನು ಕೂಡಿಸಿ ಒಂದು ಅಳತೆ ಅಕ್ಕಿಗೆ ಬೆಲೆಮಾಡಿದನು.

ಅದನ್ನು ಕೇಳಿ ಅಮಾತ್ಯರು ಕೈತಟ್ಟಿ ನಗುತ್ತಾ "ಭೂಮಿಯೂ ರಾಜ್ಯವೂ ಅನರ್ಘವಾದವೆಂದು ನಾವು ಹಿಂದೆ ತಿಳಿದುಕೊಂಡಿದ್ದೆವು. ಈ ಮಹಾ ವಾರಾಣಸಿರಾಜ್ಯವು ರಾಜನಸಹಿತವಾಗಿ ಒಂದು ಅಳತೆ ಅಕ್ಕಿ ಮಾತ್ರ ಬೆಲೆಬಾಳುವುದು. ಆಹಾ, ಬೆಲೆಕಟ್ಟುವವನ ಪ್ರಜ್ಞಾಸಂಪದವೆ! ಇವನು ಇಷ್ಟುಕಾಲ ಎಲ್ಲಿದ್ದ? ಇವನು ನಮ್ಮರಾಜನಿಗೇ ಸರಿಯಾದವನು" ಎಂದು ಪರಿಹಾಸಮಾಡಿದರು.

ಆಗ ಬೋಧಿಸತ್ತ್ವನು "ಒಂದು ಅಳತೆ ಅಕ್ಕಿಯ ಬೆಲೆ ಏನು ಎನ್ನುವಿರಿ? ವಾರಾಣಸಿಯ ಒಳಗುಹೊರಗುಗಳು ಸೇರಿಸಿದಷ್ಟು. ಆದರೆ ಐನೂರು ಕುದುರೆಗಳಿಗೂ ಒಂದೇ ಅಳತೆ ಅಕ್ಕಿ ಬೆಲೆ" ಎಂದನು.

ಆಗ ರಾಜನು ಲಜ್ಜೆಗೊಂಡು ಆ ಅಜ್ಞಾನಿಯನ್ನು ತೆಗೆದುಹಾಕಿ, ಬೆಲೆಕಟ್ಟುವವನ ಸ್ಥಾನವನ್ನು ಬೋಧಿಸತ್ತ್ವನಿಗೇ ಕೊಟ್ಟನು.

ಬೋಧಿಸತ್ತ್ವನು ಆಯುಸ್ಸು ಮುಗಿದ ಮೇಲೆ, ತನ್ನ ಕರ್ಮಗಳಿಗೆ ಅನುಸಾರವಾಗಿ ಹೋದನು.

# ಸಂಜೀವ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಮಹಾವಿಭವದ ಬ್ರಾಹ್ಮಣಕುಲದಲ್ಲಿ ಜನ್ಮತಾಳಿದನು. ವಯಸ್ಸು ಬಂದಮೇಲೆ ತಕ್ಷಶಿಲೆಗೆ ಹೋಗಿ, ಸರ್ವವಿದ್ಯೆಗಳನ್ನೂ ಕಲಿತು, ವಾರಾಣಸಿಯಲ್ಲಿ ಜಗದ್ವಿಖ್ಯಾತನಾದ ಆಚಾರ್ಯನಾಗಿ, ಐನೂರು ಶಿಷ್ಯರಿಗೆ ವಿದ್ಯೆ ಓದಿಸುತ್ತಿದ್ದನು.

ಆ ಶಿಷ್ಯರಲ್ಲಿ ಸಂಜೀವನೆಂಬ ಹುಡುಗನಿದ್ದನು. ಬೋಧಿಸತ್ತ್ವನು ಅವನಿಗೆ ಮೃತರನ್ನು ಮೇಲೆಬ್ಬಿಸುವ ಮಂತ್ರವನ್ನು ಕೊಟ್ಟನು. ಅವನು ಮೇಲೆಬ್ಬಿಸುವ ಮಂತ್ರವನ್ನು ಮಾತ್ರ ಗ್ರಹಿಸಿ, ಅದನ್ನು ತಡೆದಿಡುವ ಮಂತ್ರವನ್ನು ಗ್ರಹಿಸದೆ, ಒಂದು ದಿವಸ ಶಿಷ್ಯರೊಡನೆ ಕಟ್ಟಿಗೆಗಾಗಿ ಕಾಡಿಗೆ ಹೋಗಿ, ಒಂದು ಸತ್ತ ಹುಲಿಯನ್ನು ನೋಡಿ, "ಈ ಸತ್ತ ಹುಲಿಯನ್ನು ಮೇಲೆಬ್ಬಿಸುವೆನು" ಎಂದು ಶಿಷ್ಯರಿಗೆಂದನು.

ಶಿಷ್ಯರು "ನಿನ್ನ ಕೈಲಾಗುವುದಿಲ್ಲ" ಎಂದರು. "ನೀವು ನೋಡುತ್ತಿರುವಂತೆಯೇ ಇದನ್ನು ಮೇಲೆಬ್ಬಿಸುವೆನು" ಎಂದನು. "ನಿನ್ನ ಕೈಲಾದರೆ ಮೇಲೆಬ್ಬಿಸು" ಎಂದು ಹೇಳಿ, ಆ ಶಿಷ್ಯರು ಮರವನ್ನು ಏರಿದರು.

ಸಂಜೀವನು ಮಂತ್ರವನ್ನು ಹೇಳುತ್ತಾ, ಸತ್ತ ಹುಲಿಯನ್ನು ಮಣ್ಣುಹೆಂಟೆಯಿಂದ ಹೊಡೆದನು. ಹುಲಿ ಮೇಲೆದ್ದು ವೇಗದಿಂದ ಬಂದು, ಸಂಜೀವನ ಗಂಟಲನಾಳವನ್ನು ಕಡಿದು, ಅಲ್ಲಿಯೇ ಬಿದ್ದಿತು. ಸಂಜೀವನೂ ಅಲ್ಲಿಯೇ ಬಿದ್ದನು. ಇಬ್ಬರೂ ಒಂದೇ ಸ್ಥಳದಲ್ಲಿ ಸತ್ತು ಮಲಗಿದರು.

ಶಿಷ್ಯರು ಕಟ್ಟಿಗೆಯನ್ನು ಕೊಂಡುಹೋಗಿ, ನಡೆದುದನ್ನು ಆಚಾರ್ಯನಿಗೆ ತಿಳಿಸಿದರು. ಆಚಾರ್ಯನು ಶಿಷ್ಯರನ್ನು ಕರೆದು, "ಮಕ್ಕಳೆ, ಸತ್ಪುರುಷರಲ್ಲದವರಿಗೂ ಸಲ್ಲದ ಸ್ಥಳಗಳಲ್ಲಿಯೂ ಸತ್ಕಾರ ಸನ್ಮಾನಗಳನ್ನು ಸಲ್ಲಿಸುವದರಿಂದ ಈ ತೆರನಾದ ದುಃಖವೇ ಪ್ರತಿಲಾಭವಾಗುತ್ತದೆ" ಎಂದು ಹೇಳಿ, "ಕೆಟ್ಟವರನ್ನು ಸತ್ಕರಿಸಿದರೆ, ಕೆಟ್ಟವರ ಸೇವೆಮಾಡಿದರೆ, ಹುಲಿ ಸಂಜೀವಕನಿಗೆ ಮಾಡಿದಂತೆ ಅವರು ಅವನನ್ನೇ ಘಾಸಿಗೊಳಿಸುವರು" ಎಂದನು.

# ದೇವಧರ್ಮ

ಹಿಂದೆ, ಕಾಶೀರಾಷ್ಟ್ರದ ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜನಾದನು. ಆಗ ಬೋಧಿಸತ್ತ್ವನು ಅವನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಜನ್ಮತಾಳಿದನು. ಅವನಿಗೆ ಹೆಸರಿಡುವ ದಿವಸ ಮಹಿಂಶಾಸ ಕುಮಾರನೆಂದು ಹೆಸರಿಟ್ಟರು. ಅವನು ಓಡಾಡುತ್ತಾ ಸುತ್ತಾಡುತ್ತಾ ತಿರುಗುವ ವೇಳೆಗೆ ರಾಜನಿಗೆ ಇನ್ನೊಬ್ಬ ಮಗ ಹುಟ್ಟಿದನು. ಅವನಿಗೆ ಚಂದ್ರಕುಮಾರನೆಂದು ಹೆಸರಿಟ್ಟರು. ಅವನು ಓಡಾಡುತ್ತಾ ಸುತ್ತಾಡುತ್ತಾ ತಿರುಗುವ ವೇಳೆಗೆ ಬೋಧಿಸತ್ತ್ವನ ತಾಯಿ ಕಾಲವಾದಳು.

ರಾಜನು ಇನ್ನೊಬ್ಬಳನ್ನು ಪಟ್ಟದ ರಾಣಿಯ ಸ್ಥಾನದಲ್ಲಿಟ್ಟನು. ಅವಳು ರಾಜನಿಗೆ ಪ್ರಿಯೆಯಾದಳು, ಇಷ್ಟೆಯಾದಳು. ಅವಳು ಪ್ರೀತಿಯಿಂದ ವಾಸಿಸಿದುದರ ಫಲವಾಗಿ ಒಬ್ಬ ಮಗನನ್ನು ಹೆತ್ತಳು. ಅವನಿಗೆ ಸೂರ್ಯಕುಮಾರನೆಂದು ಹೆಸರಿಟ್ಟರು.

ರಾಜನು ಮಗನನ್ನು ನೋಡಿ, ಸಂತೋಷಪಟ್ಟು, "ಭದ್ರೆ, ನಿನ್ನ ಮಗನಿಗೆ ವರ ಕೊಡುವೆನು" ಎಂದನು. ದೇವಿಯು ವರವನ್ನು ಬೇಕಾದಾಗ ತೆಗೆದುಕೊಳ್ಳುವೆನೆಂದು ಇರಿಸಿದಳು.

ಮಗನಿಗೆ ವಯಸ್ಸಾದ ಮೇಲೆ, ಅವಳು "ದೇವರು ನನ್ನ ಮಗ ಹುಟ್ಟಿದಾಗ ವರ ಕೊಟ್ಟಿರಿ. ನನ್ನ ಮಗನಿಗೆ ರಾಜ್ಯ ಕೊಡಿರಿ" ಎಂದು ರಾಜನನ್ನು ಕೇಳಿದಳು.

ರಾಜನು "ನನ್ನ ಇಬ್ಬರು ಮಕ್ಕಳೂ ಅಗ್ನಿಸ್ಕಂಧದಂತೆ ಪ್ರಜ್ವಲಿಸುತ್ತಿದ್ದಾರೆ. ನಿನ್ನ ಮಗನಿಗೆ ರಾಜ್ಯ ಕೊಡಲು ಶಕ್ಯವಿಲ್ಲ" ಎಂದು ಮೂಲೆಗೊತ್ತಿದನು.

ಅವಳು ಪುನಃಪುನಃ ಬೇಡುವುದನ್ನು ಕಂಡು, "ಇವಳು ನನ್ನ ಮಕ್ಕಳಿಗೆ ಕೇಡೆಣಿಸಿಯಾಳು" ಎಂದು ಮಕ್ಕಳನ್ನು ಕರೆಕಳಿಸಿ, "ಅಪ್ಪಾ, ಸೂರ್ಯಕುಮಾರನು ಹುಟ್ಟಿದಾಗ ನಾನು ವರ ಕೊಟ್ಟೆ. ಈಗ ಅವನ ತಾಯಿ ರಾಜ್ಯ ಬೇಡುವಳು. ಅವಳಿಗೆ ಕೊಡಲು ನನಗೆ ಇಷ್ಟವಿಲ್ಲ. ಅವಳು ನಿಮಗೆ ಕೇಡೆಣಿಸಿಯಾಳು. ನೀವು ಕಾಡನ್ನು ಪ್ರವೇಶಿಸಿ, ನನ್ನ

ಅನಂತರ ನಿಮಗೆ ಸೇರಿದ ನಗರದಲ್ಲಿ ರಾಜ್ಯವಾಳಿರಿ" ಎಂದು ಗೋಳಿಟ್ಟು ಅಳುತ್ತಾ ತಲೆಗೆ ಮುತ್ತಿಟ್ಟು ಕಳಿಸಿಕೊಟ್ಟನು.

ಅವರು ತಂದೆಗೆ ವಂದಿಸಿ ಪ್ರಾಸಾದದಿಂದ ಇಳಿಯುತ್ತಿರಲು, ರಾಜಾಂಗಣದಲ್ಲಿ ಆಡುತ್ತಿದ್ದ ಸೂರ್ಯಕುಮಾರನು ಅವರನ್ನು ಕಂಡು, ಏನಾಯಿತೆಂಬುದನ್ನು ತಿಳಿದು, "ನಾನೂ ಅಣ್ಣಂದಿರೊಡನೆ ಹೋಗುವೆನು" ಎಂದು ಅವರೊಡನೆಯೇ ಹೊರಟನು.

ಅವರು ಹಿಮವಂತವನ್ನು ಹೊಕ್ಕರು. ಬೋಧಿಸತ್ತ್ವನು ದಾರಿಯನ್ನು ದಾಟಿ, ಮರದ ಬುಡದಲ್ಲಿ ಕುಳಿತು, ಸೂರ್ಯಕುಮಾರನನ್ನು ಕರೆದು, "ಅಪ್ಪಾ, ಸೂರ್ಯ, ಆ ಸರೋವರಕ್ಕೆ ಹೋಗಿ, ಮಿಂದು, ಕುಡಿದು, ಪದ್ಮಪರ್ಣಗಳಲ್ಲಿ ನನಗೂ ಕುಡಿಯಲು ನೀರು ತಾ" ಎಂದನು.

ಆ ಸರೋವರವನ್ನು ಒಬ್ಬ ಉದಕರಾಕ್ಷಸನು ವೈಶ್ರವಣನ ಬಳಿ ಪಡೆದಿದ್ದನು. ವೈಶ್ರವಣನು ಅವನಿಗೆ "ದೇವಧರ್ಮಗಳನ್ನು ತಿಳಿದವರು ಹೊರತಾಗಿ ಇತರರು ಈ ಸರೋವರಕ್ಕೆ ಇಳಿದರೆ, ಅವರನ್ನು ನೀನು ತಿನ್ನಬಹುದು. ಇಳಿಯುದವರು ನಿನಗೆ ಸಿಕ್ಕುವುದಿಲ್ಲ" ಎಂದು ಹೇಳಿದ್ದನು. ಅಂದಿನಿಂದ ಆ ರಾಕ್ಷಸನು ಆ ಸರೋವರಕ್ಕೆ ಇಳಿದವರ ಬಳಿ ದೇವಧರ್ಮಗಳನ್ನು ಕುರಿತು ಪ್ರಶ್ನಿಸುವನು, ತಿಳಿಯದವರನ್ನು ತಿನ್ನುವನು.

ಆಗ ಸೂರ್ಯಕುಮಾರನು ಆ ಸರೋವರಕ್ಕೆ ಹೋಗಿ, ವಿಮರ್ಶೆ ಮಾಡದೆಯೇ ನೀರಿಗಿಳಿದನು. ಆಗ ಅವನನ್ನು ಆ ರಾಕ್ಷಸನು ಹಿಡಿದು, "ದೇವಧರ್ಮಗಳನ್ನು ಬಲ್ಲೆಯ?" ಎಂದು ಪ್ರಶ್ನಿಸಿದನು. ಅವನು "ಚಂದ್ರಸೂರ್ಯರಿಗೆ ದೇವಧರ್ಮಗಳೆಂದು ಹೆಸರು" ಎಂದನು. ಆಗ ಅವನು "ನಿನಗೆ ದೇವಧರ್ಮ ತಿಳಿಯದು" ಎಂದು ನೀರಿನೊಳಕ್ಕೆ ಹೊಗಿಸಿ, ಅವನನ್ನು ತನ್ನ ವಾಸಸ್ಥಾನದಲ್ಲಿ ಇರಿಸಿದನು.

ಬೋಧಿಸತ್ತ್ವನು ಅವನು ತಡಮಾಡುವುದನ್ನು ಕಂಡು, ಚಂದ್ರಕುಮಾರನನ್ನು ಕಳಿಸಿದನು. ರಾಕ್ಷಸನು ಅವನನ್ನೂ ಹಿಡಿದು, "ದೇವ

ಧರ್ಮಗಳನ್ನು ಬಲ್ಲೆಯು?" ಎಂದು ಪ್ರಶ್ನಿಸಿದನು. "ಹೌದು, ಬಲ್ಲೆ. ನಾಲ್ಕು ದಿಕ್ಕುಗಳಿಗೆ ದೇವಧರ್ಮಗಳೆಂದು ಹೆಸರು" ಎಂದು ಅವನು ಹೇಳಿದನು. ರಾಕ್ಷಸನು "ನೀನು ದೇವಧರ್ಮಗಳನ್ನು ಅರಿಯೆ" ಎಂದು ಅವನನ್ನೂ ಹಿಡಿದು, ಅಲ್ಲಿಯೇ ಇರಿಸಿದನು.

ಬೋಧಿಸತ್ತ್ವನು ಅವನೂ ತಡಮಾಡಲು, "ಏನಾದರೂ ಕೇಡಾಗಿರಬೇಕು" ಎಂದು ತಾನೇ ಅಲ್ಲಿಗೆ ಹೋಗಿ, ಇಬ್ಬರೂ ಕೆಳಗಿಳಿದ ಹೆಜ್ಜೆಯ ಗುರುತನ್ನು ಕಂಡು, "ಈ ಸರೋವರವನ್ನು ರಾಕ್ಷಸನು ಹಿಡಿದಿರಬೇಕು"ಎಂದು ಖಡ್ಗವನ್ನು ಸನ್ನಾಹಮಾಡಿಕೊಂಡು, ಧನುಸ್ಸನ್ನು ಹಿಡಿದು ನಿಂತನು.

ಉದಕರಾಕ್ಷಸನು ಬೋಧಿಸತ್ತ್ವನು ನೀರಿಗೆ ಇಳಿಯುದುದನ್ನು ಕಂಡು, ಕಾಡಿನಲ್ಲಿ ಕೆಲಸಮಾಡುವವನಂತಾಗಿ, ಬೋಧಿಸತ್ತ್ವನನ್ನು ಕುರಿತು, "ಓ ಪುರುಷ, ನೀನು ದಾರಿ ನಡೆದು ಆಯಾಸಗೊಂಡಿರುವೆ. ಈ ಸರೋವರದಲ್ಲಿ ಇಳಿದು ಸ್ನಾನಮಾಡಿ, ಕುಡಿದು, ತಾವರೆದಂಟನ್ನು ತಿಂದು, ಹೂಗಳನ್ನು ಮುಡಿದು, ಸುಖವಾಗಿ ಏಕೆ ಹೋಗುವುದಿಲ್ಲ?" ಎಂದನು.

ಬೋಧಿಸತ್ತ್ವನು ಅವನನ್ನು ಕಂಡು, "ಇವನು ಯಕ್ಷನಾಗಿರಬೇಕು" ಎಂದು ತಿಳಿದು, "ನೀನು ನನ್ನ ತಮ್ಮಂದಿರನ್ನು ಹಿಡಿದಿರುವೆ" ಎಂದನು.

"ಹೌದು, ನಾನು ಹಿಡಿದಿರುವೆನು."

"ಏಕೆ?"

"ಈ ಸರೋವರಕ್ಕೆ ಇಳಿದವರನ್ನು ನಾನು ಪಡೆಯುವೆನು."

"ಏನು, ಎಲ್ಲರನ್ನೂ ಪಡೆಯುವೆಯು?"

"ದೇವಧರ್ಮಗಳನ್ನು ಬಲ್ಲವರು ಹೊರತಾಗಿ ಉಳಿದವರನ್ನು ಪಡೆಯುವೆನು."

"ನಿನಗೆ ದೇವಧರ್ಮಗಳನ್ನು ತಿಳಿಯುವ ಆಸೆಯುಂಟೆ?"

"ಹೌದು, ಉಂಟು."

"ಇದ್ದರೆ, ನಾನು ನಿನಗೆ ದೇವಧರ್ಮಗಳನ್ನು ಕುರಿತು ಹೇಳುವೆನು."

"ಹಾಗಾದರೆ, ಹೇಳು. ನಾನು ದೇವಧರ್ಮಗಳನ್ನು ಕೇಳುವೆನು."

ಬೋಧಿಸತ್ತ್ವನು "ನಾನು ದೇವಧರ್ಮಗಳನ್ನು ಕುರಿತು ಹೇಳುತ್ತೇನೆ. ಆದರೆ ನನಗೆ ಆಯಾಸವಾಗಿದೆ" ಎಂದನು.

ಯಕ್ಷನು ಬೋಧಿಸತ್ತ್ವನಿಗೆ ಸ್ನಾನಮಾಡಿಸಿ, ಊಟ ಉಣಿಸಿ, ನೀರು ಕುಡಿಸಿ, ಹೂಗಳನ್ನು ಮುಡಿಸಿ, ಗಂಧವನ್ನು ಬಳಿದು, ಅಲಂಕರಿಸಿದ ಮಂಟಪದ ನಡುವೆ ಪರ್ಯಂಕವನ್ನು ಹಾಕಿಕೊಟ್ಟನು.

ಬೋಧಿಸತ್ತ್ವನು ಆಸನದಲ್ಲಿ ಕುಳಿತು, ಯಕ್ಷನನ್ನು ಕಾಲ ಬಳಿ ಕುಳ್ಳಿರಿಸಿ, "ಹಾಗಾದರೆ, ಕಿವಿಗೊಡು. ಸಾಕ್ಷಾತ್ ದೇವಧರ್ಮಗಳನ್ನು ಕೇಳು" ಎಂದು, "ಕೆಟ್ಟಕೆಲಸ ಮಾಡುವುದಕ್ಕೆ ಲಜ್ಜೆಗೊಂಡು, ಒಳ್ಳೆಯ ಕೆಲಸ ಮಾಡುವುದಕ್ಕೆ ಉತ್ಸಾಹಗೊಂಡು, ಈ ಶುಕ್ಲಧರ್ಮಗಳಿಂದ ಕೂಡಿ ಶಾಂತರಾದ ಸತ್ಪುರುಷರನ್ನು ದೇವಧರ್ಮಗಳಿಂದ ಕೂಡಿ ದವರೆಂದು ಲೋಕದಲ್ಲಿ ಹೇಳುತ್ತಾರೆ" ಎಂದನು.

ಯಕ್ಷನು ಆ ಧರ್ಮಬೋಧೆಯನ್ನು ಕೇಳಿ, ಪ್ರಸನ್ನನಾಗಿ, ಬೋಧಿಸತ್ತ್ವನನ್ನು "ಪಂಡಿತ, ನಾನು ನಿನಗೆ ಪ್ರಸನ್ನನಾಗಿರುವೆನು. ಒಬ್ಬ ತಮ್ಮನನ್ನು ಕೊಡುವೆನು. ಯಾರನ್ನು ಕರೆತರಲಿ?" ಎಂದನು.

"ಕೊನೆಯವನನ್ನು ಕರೆದು ತಾ."

"ಪಂಡಿತ, ನೀನು ದೇವಧರ್ಮಗಳನ್ನು ಬಲ್ಲೆ, ಅಷ್ಟೆ. ಅದರಂತೆ ನೀನು ನಡೆಯುವುದಿಲ್ಲ."

"ಏಕೆ ಹೀಗೆನ್ನುವೆ?"

"ಹಿರಿಯವನನ್ನು ಬಿಟ್ಟು ಕಿರಿಯವನನ್ನು ಕರೆತರಿಸುತ್ತಾ ಹಿರಿಯವನ ಹಿರಿಯತನವನ್ನು ನೀನು ಗೌರವಿಸುವುದಿಲ್ಲ, ಅದಕ್ಕೇ."

"ಯಕ್ಷ, ನಾನು ದೇವಧರ್ಮಗಳನ್ನು ಬಲ್ಲೆ, ಅವುಗಳಲ್ಲಿ ನಡೆಯುತ್ತೇನೆ. ನಾವು ಇವನಿಗಾಗಿ ಈ ಕಾಡನ್ನು ಪ್ರವೇಶಿಸಿದೆವು, ಇವನಿಗಾಗಿ ಇವನ ತಾಯಿ ನಮ್ಮ ತಂದೆಯ ಬಳಿ ರಾಜ್ಯ ಕೇಳಿದಳು. ನಮ್ಮ ತಂದೆಯಾದರೋ ಆ ವರವನ್ನು ಕೊಡದೆ, ನಮ್ಮನ್ನು ಕಾಪಾಡು ವುದಕ್ಕಾಗಿ ನಮ್ಮ ಅರಣ್ಯವಾಸಕ್ಕೆ ಸಮ್ಮತಿಸಿದನು. ಈ ಕುಮಾರನೂ ಹಿಂದಕ್ಕೆ ತಿರುಗದೆ ನಮ್ಮೊಡನೆ ಬಂದನು. ಇವನನ್ನು ಕಾಡಿನಲ್ಲಿ ಒಬ

ಯಕ್ಷನು ತಿಂದನೆಂದರೆ, ಯಾರೂ ನಂಬುವುದಿಲ್ಲ. ಆದ್ದರಿಂದ ನಾನು ನಿಂದೆಗೆ ಹೆದರಿ ಇವನನ್ನೇ ಕರೆತರಿಸುವೆನು."

"ಸಾಧು, ಸಾಧು, ಪಂಡಿತ. ನೀನು ದೇವಧರ್ಮಗಳನ್ನು ಬಲ್ಲೆ. ಅದರಲ್ಲಿ ನಡೆಯುತ್ತಿರುವೆ" ಎಂದು ಯಕ್ಷನು ಪ್ರಸನ್ನಚಿತ್ತನಾಗಿ ಬೋಧಿಸತ್ತ್ವನು ಮಾಡಿದುದನ್ನು ಮೆಚ್ಚಿ, ಇಬ್ಬರು ತಮ್ಮಂದಿರನ್ನೂ ಕರೆದುತಂದು ಕೊಟ್ಟನು.

ಆಗ ಬೋಧಿಸತ್ತ್ವನು ಅವನನ್ನು ಕುರಿತು, "ಅಯ್ಯಾ, ನೀನು ಹಿಂದೆ ಮಾಡಿದ ಪಾಪಕರ್ಮದಿಂದ ಪರರ ಮಾಂಸರಕ್ತಗಳನ್ನು ತಿನ್ನುವ ಯಕ್ಷನಾಗಿ ಹುಟ್ಟಿಬಂದೆ. ಈಗಲಾದರೂ ಪಾಪವನ್ನೇ ಮಾಡುತ್ತಿರುವೆ. ಈ ಪಾಪಕರ್ಮಗಳು ನರಕ ಮೊದಲಾದವುಗಳಿಂದ ನೀನು ಮುಕ್ತನಾಗಲು ಬಿಡುವುದಿಲ್ಲ. ಆದ್ದರಿಂದ ಇಂದಿನಿಂದ ಪಾಪವನ್ನು ತೊರೆದು, ಕುಶಲವನ್ನು ಮಾಡು" ಎಂದು ಹೇಳಿ, ಅವನನ್ನು ದಮನಮಾಡಲು ಶಕ್ತನಾದನು.

ಅವನು ಆ ಯಕ್ಷನನ್ನು ದಮನಮಾಡಿ, ಅವನು ಕೊಟ್ಟ ಕಾವಲಿನೊಡನೆ ಅಲ್ಲಿಯೇ ವಾಸಮಾಡುತ್ತಾ, ಒಂದು ದಿವಸ ನಕ್ಷತ್ರವನ್ನು ಗಮನಿಸುತ್ತಾ ತಂದೆ ಕಾಲವಾದುದನ್ನು ತಿಳಿದು, ಯಕ್ಷನನ್ನು ಕರೆದುಕೊಂಡು ವಾರಾಣಸಿಗೆ ಹೋಗಿ, ರಾಜ್ಯವನ್ನು ಕೊಂಡು, ಚಂದ್ರಕುಮಾರನಿಗೆ ಉಪರಾಜಪದವಿಯನ್ನೂ ಸೂರ್ಯಕುಮಾರನಿಗೆ ಸೇನಾಪತಿಸ್ಥಾನವನ್ನೂ ಕೊಟ್ಟು, ರಮಣೀಯವಾದ ಸ್ಥಾನದಲ್ಲಿ ಯಕ್ಷನಿಗೆ ಇರುವೆಡೆಯನ್ನು ಮಾಡಿಸಿ, ಅವನಿಗೆ ಮೊದಲಮಾಲೆ ಮೊದಲಹೂ ಮೊದಲಅನ್ನ ದೊರಕುವಂತೆ ಮಾಡಿದನು. ತಾನು ಧರ್ಮದಿಂದ ರಾಜ್ಯವಾಳಿ, ಕರ್ಮಕ್ಕೆ ಅನುಸಾರವಾಗಿ ಹೋದನು.

# ಅನುಶಾಸಿಕಾ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಕಾಡಿನಲ್ಲಿ ಹಕ್ಕಿಯಾಗಿ ಹುಟ್ಟಿದನು. ವಯಸ್ಸು ಬಂದ ಬಳಿಕ, ಹಕ್ಕಿಗಳ ಹಿರಿಯನಾಗಿ, ಅನೇಕ ನೂರು ಹಕ್ಕಿಗಳ ಪರಿವಾರ ದೊಡನೆ ಹಿಮವಂತವನ್ನು ಹೊಕ್ಕನು.

ಆ ಹಕ್ಕಿ ಅಲ್ಲಿ ವಾಸಮಾಡುತ್ತಿರುವಾಗ ಒಂದು ಕ್ರೂರವಾದ ಹೆಣ್ಣುಹಕ್ಕಿ ಸಂಚಾರವಿದ್ದ ಮಹಾಮಾರ್ಗದಲ್ಲಿ ಹೋಗಿ ಆಹಾರ ಪಡೆಯುತ್ತಿತ್ತು. ಅದು ಅಲ್ಲಿ ಗಾಡಿಗಳಿಂದ ಬಿದ್ದ ಬತ್ತ, ಕಾಳು ಮೊದಲಾದವನ್ನು ಪಡೆದು, "ಈ ಪ್ರದೇಶಕ್ಕೆ ಇತರ ಹಕ್ಕಿಗಳು ಬಾರದ ಹಾಗೆ ಮಾಡುವೆನು" ಎಂದು ಚಿಂತಿಸಿ, ಹಕ್ಕಿಗಳ ಗುಂಪಿಗೆ "ಸಂಚಾರ ವಿರುವ ಮಹಾಮಾರ್ಗವೆಂಬುದು ಭಯದಿಂದ ಕೂಡಿದುದು. ಆನೆ ಕುದುರೆಗಳೂ ಕ್ರೂರವಾದ ಎತ್ತುಗಳು ಹೂಡಿದ ಗಾಡಿ ಮೊದಲಾದ ವುಗಳೂ ತಿರುಗಾಡುತ್ತವೆ. ತಟಕ್ಕನೆ ಹಾರಿಹೋಗಲಾಗುವುದಿಲ್ಲ. ಅಲ್ಲಿಗೆ ಹೋಗತಕ್ಕುದಲ್ಲ" ಎಂದು ಬುದ್ಧಿ ಹೇಳುತ್ತಿತ್ತು.

ಹಕ್ಕಿಗಳ ಗುಂಪು ಅದಕ್ಕೆ ಅನುಶಾಸಿಕಾ ಎಂದೇ ಹೆಸರಿಟ್ಟವು.

ಆ ಹೆಣ್ಣುಹಕ್ಕಿ ಒಂದು ದಿವಸ ಆ ಸಂಚಾರದ ಮಹಾಮಾರ್ಗದಲ್ಲಿ ತಿರುಗಾಡುತ್ತಾ, ಮಹಾಮಾರ್ಗದಲ್ಲಿ ವೇಗದಿಂದ ಬರುತ್ತಿದ್ದ ಗಾಡಿಯ ಸದ್ದು ಕೇಳಿ, ಹಿಂದಿರುಗಿ ನೋಡುತ್ತಾ "ಇನ್ನೂ ದೂರದಲ್ಲಿದೆ" ಎಂದು ತಿರುಗಾಡುತ್ತಲೇ ಇತ್ತು. ಆಗ ಆ ಗಾಡಿ ಗಾಳಿಯ ವೇಗದಂತೆ ಶೀಘ್ರ ವಾಗಿಯೇ ಹತ್ತಿರ ಬಂತು. ಅದಕ್ಕೆ ಎದ್ದು ಹಾರಲಾಗಲಿಲ್ಲ. ಚಕ್ರವು ಅದನ್ನು ಮುರಿದುಕೊಂಡೇ ಹೋಯಿತು.

ಹಕ್ಕಿಗಳ ಹಿರಿಯನು ಹಕ್ಕಿಗಳನ್ನು ಒಟ್ಟುಕರೆದು, ಅದನ್ನು ಕಾಣದೆ, " ಅನುಶಾಸಿಕೆ ಕಾಣುವುದಿಲ್ಲ, ಅದನ್ನು ಹುಡುಕಿರಿ" ಎಂದಿತು. ಹಕ್ಕಿಗಳು ಹುಡುಕುತ್ತಾ, ಅದು ಮಹಾಮಾರ್ಗದಲ್ಲಿ ಎರಡಾಗಿ ಕತ್ತರಿಸಿದ್ದುದನ್ನು ಕಂಡು, ಹಕ್ಕಿಗಳ ಹಿರಿಯನಿಗೆ ತಿಳಿಸಿದುವು. ಹಕ್ಕಿಗಳ ಹಿರಿಯನು "ಅದು ಇತರ ಹಕ್ಕಿಗಳನ್ನು ತಡೆದು, ತಾನು ಅಲ್ಲಿ ಸಂಚರಿ ಸುತ್ತಾ ಚಕ್ರಕ್ಕೆ ಸಿಕ್ಕಿ ಎರಡಾಗಿ ಕತ್ತರಿಸಿಹೋಯಿತಲ್ಲವೆ! " ಎಂದಿತು.

# ಅನುಶಾಸಿಕಾ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಉದೀಚ್ಯ ಬ್ರಾಹ್ಮಣ ಕುಲದಲ್ಲಿ ಜನ್ಮ ತಾಳಿದನು. ವಯಸ್ಸು ಬಂದ ಮೇಲೆ ಎಲ್ಲಾ ವಿದ್ಯೆಗಳಲ್ಲೂ ಪಾರಂಗತನಾಗಿ, ವಾರಾಣಸಿಯಲ್ಲಿ ಲೋಕವಿಖ್ಯಾತನಾದ ಆಚಾರ್ಯನಾಗಿ, ಐನೂರು ಶಿಷ್ಯರಿಗೆ ವಿದ್ಯೆ ಓದಿಸುತ್ತಿದ್ದನು.

ಆ ಶಿಷ್ಯರ ಬಳಿ ಕಾಲಕ್ಕೆ ಸರಿಯಾಗಿ ಕೂಗುವ ಒಂದು ಕೋಳಿಯಿತ್ತು. ಅದು ಕೂಗಿದ ಶಬ್ದದಿಂದ ಅವರು ಎದ್ದು ವಿದ್ಯೆ ಕಲಿಯುವರು. ಅದು ಸತ್ತುಹೋಯಿತು. ಅವರು ಬೇರೆ ಕೋಳಿಯನ್ನು ಹುಡುಕುತ್ತಾ ತಿರುಗಿದರು. ಆಗ ಒಬ್ಬ ಶಿಷ್ಯನು ಶ್ಮಶಾನವನದಲ್ಲಿ ಕಟ್ಟಿಗೆ ಆರಿಸುತ್ತಾ ಒಂದು ಕೋಳಿಯನ್ನು ಕಂಡು, ತಂದು, ಪಂಜರದಲ್ಲಿಟ್ಟು ಪೋಷಿಸಿದನು.

ಅದು ಶ್ಮಶಾನದಲ್ಲಿ ಬೆಳೆದುದರಿಂದ 'ಇಂತಹ ವೇಳೆಯಲ್ಲಿ ಕೂಗತಕ್ಕುದು' ಎಂದು ತಿಳಿಯದೆ, ಒಮ್ಮೆ ಅತಿರಾತ್ರಿಯಲ್ಲಿ ಕೂಗುವುದು, ಒಮ್ಮೆ ಅರುಣೋದಯವಾದಾಗ ಕೂಗುವುದು.

ಅದು ಅತಿರಾತ್ರಿಯಲ್ಲಿ ಕೂಗಿದಾಗ, ಶಿಷ್ಯರು ವಿದ್ಯೆ ಕಲಿಯುತ್ತಾ ಅರುಣೋದಯದವರೆಗೂ ಕಲಿಯಲು ಆಗುತ್ತಿರಲಿಲ್ಲ; ನಿದ್ರೆ ಮಾಡುತ್ತಾ ಕಲಿಯುವುದನ್ನು ಕಾಣುತ್ತಿರಲಿಲ್ಲ. ಅತಿಪ್ರಭಾತದಲ್ಲಿ ಅದು ಕೂಗಿದಾಗ, ಓದುವುದಕ್ಕೆ ಹೊತ್ತೇ ಸಿಕ್ಕುತ್ತಿರಲಿಲ್ಲ.

ಶಿಷ್ಯರು "ಇದು ಅತಿರಾತ್ರಿಯಲ್ಲೋ ಅತಿಪ್ರಭಾತದಲ್ಲೋ ಕೂಗುವುದು. ಇದನ್ನು ಆಶ್ರಯಿಸಿದರೆ, ನಮಗೆ ವಿದ್ಯೆ ನಿಲ್ಲುವುದಿಲ್ಲ" ಎಂದು ಅದನ್ನು ಹಿಡಿದು, ಕೊರಳು ತಿರುಚಿ, ಜೀವವನ್ನು ಕೊನೆಗಾಣಿಸಿ, "ಅಕಾಲದಲ್ಲಿ ಕೂಗುತ್ತಿದ್ದ ಕೋಳಿ ನಮ್ಮ ಕೈಯಲ್ಲಿ ಸತ್ತಿತು" ಎಂದು ಆಚಾರ್ಯನಿಗೆ ಹೇಳಿದರು.

ಆಚಾರ್ಯನು "ಸರಿಯಾಗಿ ಬೆಳೆಯದುದರಿಂದ ಇದು ಸತ್ತಿತು" ಎಂದು ಬುದ್ಧಿ ಹೇಳುತ್ತಾ, "ತಾಯಿತಂದೆ ಇದನ್ನು ಬೆಳೆಸಲಿಲ್ಲ. ಆಚಾರ್ಯನೊಡನೆ ಇದು ವಾಸಿಸಲಿಲ್ಲ. ಅದರಿಂದ ಈ ಕೋಳಿ ಕಾಲಅಕಾಲಗಳನ್ನು ತಿಳಿಯಲಿಲ್ಲ" ಎಂದನು. ಬೋಧಿಸತ್ತ್ವನು ಹೀಗೆ ಹೇಳಿ, ಆಯುಸ್ಸು ಇರುವವರೆಗೆ ಇದ್ದು, ಕರ್ಮಕ್ಕೆ ತಕ್ಕಂತೆ ಹೋದನು.

# ಮಹಾಶೀಲವಂತ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ರಾಜನ ಪಟ್ಟದ ರಾಣಿಯ ಹೊಟ್ಟೆಯಲ್ಲಿ ಹುಟ್ಟಿದನು. ಅವನಿಗೆ ಹೆಸರಿಡುವ ದಿವಸ ಶೀಲವಂತಕುಮಾರನೆಂದು ಹೆಸರಿಟ್ಟರು. ಅವನು ಹದಿನಾರು ವಯಸ್ಸಿನ ವೇಳೆಗೆ ಸರ್ವವಿದ್ಯೆಗಳಲ್ಲೂ ಪಂಡಿತನಾಗಿ, ಆನಂತರ ತಂದೆ ಕಾಲವಾದ ಮೇಲೆ ರಾಜ್ಯದಲ್ಲಿ ಪ್ರತಿಷ್ಠಿತನಾಗಿ, ಧರ್ಮದಿಂದ ರಾಜ್ಯವಾಳುತ್ತಾ ಮಹಾಶೀಲವಂತನೆಂಬ ಧರ್ಮರಾಜನಾದನು.

ಅವನು ನಗರದ ನಾಲ್ಕು ದ್ವಾರಗಳಲ್ಲಿ ನಾಲ್ಕು, ಮಧ್ಯೆ ಒಂದು, ಮನೆಬಾಗಿಲಲ್ಲಿ ಒಂದು — ಹೀಗೆ ಆರು ದಾನಶಾಲೆಗಳನ್ನು ಮಾಡಿಸಿ, ದೀನರಿಗೂ ದಾರಿಗರಿಗೂ ದಾನ ಕೊಡುವನು, ಶೀಲಗಳನ್ನು ರಕ್ಷಿಸುವನು, ಉಪವಾಸಕರ್ಮ ಮಾಡುವನು, ಕ್ಷಮೆ ಮೈತ್ರಿ ಅನುದಯೆಗಳಿಂದ ಕೂಡಿರುವನು, ತೊಡೆಯ ಮೇಲೆ ಮಲಗಿದ ಮಗನನ್ನು ಪರಿತೋಷಗೊಳಿಸುವಂತೆ ಸರ್ವಜೀವಿಗಳಿಗೂ ಸಂತೋಷವನ್ನುಂಟುಮಾಡುತ್ತಾ ರಾಜ್ಯವಾಳುವನು.

ಅವನ ಅಮಾತ್ಯನೊಬ್ಬನು ಅಂತಃಪುರದಲ್ಲಿ ದ್ರೋಹಮಾಡಿ, ಅದು ಅನಂತರ ಪ್ರಕಟವಾಯಿತು. ಅಮಾತ್ಯರು ರಾಜನಿಗೆ ತಿಳಿಸಿದರು. ರಾಜನು ವಿಚಾರಮಾಡಿ, ತಾನೇ ಪ್ರತ್ಯಕ್ಷವಾಗಿ ತಿಳಿದು, ಆ ಅಮಾತ್ಯನಿಗೆ ಹೇಳಿಕಳಿಸಿ, "ಅಜ್ಞಾನದಿಂದ ಕುರುಡಾದವನೆ, ನಿನ್ನ ಧನವನ್ನೂ ಹೆಂಡತಿ ಮಕ್ಕಳನ್ನೂ ಕೊಂಡು ಬೇರೆ ಕಡೆ ಹೋಗು" ಎಂದು ಅವನನ್ನು ರಾಷ್ಟ್ರದಿಂದ ಹೊರಗೆ ಕಳಿಸಿದನು. ಅವನು ಕಾಶಿ ರಾಷ್ಟ್ರವನ್ನು ದಾಟಿ, ಕೋಸಲರಾಜನ ಬಳಿ ನಿಂತು, ಅವನನ್ನು ಸೇವಿಸುತ್ತಾ ಅನುಕ್ರಮವಾಗಿ ಅವನ ಅಂತರಂಗದ ವಿಶ್ವಾಸಿಗನಾದನು.

ಅವನು ಒಂದು ದಿವಸ "ದೇವ, ವಾರಾಣಸಿರಾಜ್ಯವು ನೊಣಗಳಿಲ್ಲದ ಜೇನುಹುಟ್ಟಿಯಂತಹದು. ರಾಜನು ಅತಿ ಮೃದುವಾದವನು. ಅಲ್ಪವಾದ ಬಲವಾಹನದಿಂದಲೇ ವಾರಾಣಸಿ ರಾಜ್ಯವನ್ನು ಹಿಡಿಯಬಹುದು" ಎಂದು ಕೋಸಲರಾಜನಿಗೆ ಹೇಳಿದನು.

ರಾಜನು ಅವನ ಮಾತು ಕೇಳಿ, “ವಾರಾಣಸಿರಾಜ್ಯವೆಂಬುದು ದೊಡ್ಡದು. ಇವನಾದರೋ ‘ಅಲ್ಪವಾದ ಬಲವಾಹನದಿಂದಲೇ ಹಿಡಿಯುಬಹುದು’ ಎಂದನು. ಏನು, ಈ ಕಳ್ಳನನ್ನು ಯಾರಾದರೂ ಕಳಿಸಿರಬಹುದೆ?” ಎಂದು ಚಿಂತಿಸಿ, “ನಿನ್ನನ್ನು ಯಾರೋ ಕಳಿಸಿರಬಹುದೆಂದು ಎಣಿಸುತ್ತೇನೆ” ಎಂದನು.

“ನನ್ನನ್ನು ಯಾರೂ ಕಳುಹಿಲ್ಲ, ದೇವ. ಸತ್ಯವನ್ನೇ ಹೇಳುತ್ತೇನೆ. ನನ್ನನ್ನು ನಂಬದಿದ್ದರೆ, ಮನುಷ್ಯರನ್ನು ಕಳಿಸಿ ಗಡಿನಾಡಿನ ಗ್ರಾಮದಲ್ಲಿ ಕೊಲ್ಲಿಸಿರಿ. ಅವರು ಜನರನ್ನು ಹಿಡಿದು ತನ್ನ ಬಳಿ ಒಯ್ದರೆ, ಅವನು ಧನಕೊಟ್ಟು ಅವರನ್ನು ಬಿಟ್ಟುಬಿಡುವನು.”

ರಾಜನು “ಇವನು ಬಹಳ ಶೂರನಂತೆ ಮಾತನಾಡುತ್ತಾನೆ. ಈಗಲೇ ವಿಮರ್ಶೆಮಾಡುವೆನು” ಎಂದು ಜನರನ್ನು ಕಳಿಸಿ ಗಡಿನಾಡಿನ ಗ್ರಾಮದಲ್ಲಿ ಕೊಲ್ಲಿಸಿದನು. ಅವರು ಕಳ್ಳರನ್ನು ಹಿಡಿದು ವಾರಾಣಸಿ ರಾಜನಿಗೆ ಕಾಣಿಸಿದರು. ರಾಜನು ಅವರನ್ನು ಕಂಡು, “ಅಪ್ಪಾ, ಗ್ರಾಮದಲ್ಲಿ ಏಕೆ ಕೊಂದಿರಿ?” ಎಂದು ಪ್ರಶ್ನಿಸಿದನು. “ಜೀವಿಸಲು ಅಶಕ್ತರಾಗಿ ಕೊಂದೆವು, ದೇವ” ಎಂದರು. “ಹಾಗಾದರೆ, ನನ್ನ ಬಳಿಗೆ ಏಕೆ ಬರಲಿಲ್ಲ? ಇನ್ನು ಮೇಲೆ ಹಾಗೆ ಮಾಡಬೇಡಿ” ಎಂದು ಅವರಿಗೆ ಧನ ಕೊಟ್ಟು ಬಿಟ್ಟುಬಿಟ್ಟನು. ಅವರು ಹೋಗಿ ಕೋಸಲರಾಜನಿಗೆ ನಡೆದುದನ್ನು ತಿಳಿಸಿದರು.

ಅವನು ಅಷ್ಟರಿಂದಲೇ ಹೋಗಲು ಸಾಹಸಪಡದೆ, ಪುನಃ ದೇಶದ ಮಧ್ಯದಲ್ಲಿ ಕೊಲ್ಲಿಸಿದನು. ಆ ಕಳ್ಳರಿಗೂ ರಾಜನು ಹಾಗೆಯೇ ಧನ ಕೊಟ್ಟು ಬಿಟ್ಟುಬಿಟ್ಟನು. ಅವನು ಅಷ್ಟರಿಂದಲೇ ಹೋಗದೆ, ಪುನಃ ಕಳಿಸಿ ನಡುಬೀದಿಯನ್ನು ಲೂಟಿಮಾಡಿಸಿದನು. ರಾಜನು ಆ ಕಳ್ಳರಿಗೂ ಧನಕೊಟ್ಟು ಬಿಟ್ಟುಬಿಟ್ಟನು.

ಆಗ ಕೋಸಲರಾಜನು ‘ಇವನು ಧರ್ಮಿಕನಾದ ರಾಜ’ನೆಂದು ತಿಳಿದು, “ವಾರಾಣಸಿರಾಜ್ಯವನ್ನು ಹಿಡಿಯುವೆನು” ಎಂದು ಬಲ ವಾಹನವನ್ನು ತೆಗೆದುಕೊಂಡು ಹೊರಟನು.

ಆಗಲಾದರೋ ವಾರಾಣಸಿರಾಜನ ಬಳಿ ಸಾವಿರದಷ್ಟು ಮಹಾ ಯೋಧರಿದ್ದರು. ಅವರು ಮದದಾನೆ ಎದುರಿಗೆ ಬರುತ್ತಿದ್ದರೂ ಹಿಂದಿರುಗ ದಂಥವರು, ತಲೆಮೇಲೆ ಸಿಡಿಲು ಬಿದ್ದರೂ ಬೆದರದಂಥವರು, ಶೀಲವಂತ ಮಹಾರಾಜನಿಗೆ ಇಷ್ಟವಾದರೆ ಸಕಲಜಂಬೂದ್ವೀಪದಲ್ಲಿ ರಾಜ್ಯವನ್ನು ಗ್ರಹಿಸಲು ಸಮರ್ಥರಾದವರು. ಅವರು ಅಭೇದ್ಯರು, ಶೂರ ಶ್ರೇಷ್ಠರು.

ಅವರು "ಕೋಸಲರಾಜ ಬರುವನು" ಎಂದು ಕೇಳಿ, ರಾಜನ ಬಳಿ ಸಾರಿ, "ದೇವ, ಕೋಸಲರಾಜನು 'ವಾರಾಣಸಿರಾಜ್ಯವನ್ನು ಹಿಡಿ ಯುವೆನು" ಎಂದು ಬರುವನು. ಹೋಗೋಣ. ಅವನು ನಮ್ಮ ರಾಜ್ಯದ ಗಡಿಯನ್ನು ದಾಟುವದರೊಳಗೆಯೇ ಹೊಡೆದು ಹಿಡಿಯೋಣ" ಎಂದು ಹೇಳಿದರು.

"ಅಪ್ಪಾ, ನನ್ನಿಂದ ಇತರರಿಗೆ ಆಯಾಸವಾಗುವ ಕಾರ್ಯವಿಲ್ಲ. ರಾಜ್ಯ ಬೇಕಾದವರು ರಾಜ್ಯ ಹಿಡಿಯಲಿ. ಹೋಗಬೇಡಿರಿ" ಎಂದು ರಾಜನು ಅವರನ್ನು ತಡೆದನು.

ಕೋಸಲರಾಜನು ಗಡಿಯನ್ನು ದಾಟಿ, ದೇಶದ ನಡುವನ್ನು ಹೊಕ್ಕನು. ಅಮಾತ್ಯರು ಪುನಃ ರಾಜನ ಬಳಿಸಾರಿ ಹಾಗೆಯೇ ಹೇಳಿದರು. ರಾಜನು ಮೊದಲಿನಂತೆಯೇ ತಡೆದನು.

ಕೋಸಲರಾಜನು ನಗರದ ಹೊರಗೆ ನಿಂತು, "ರಾಜ್ಯವನ್ನಾದರೂ ಕೊಡಲಿ, ಯುದ್ಧವನ್ನಾದರೂ ಮಾಡಲಿ" ಎಂದು ಶೀಲವಂತ ಮಹಾ ರಾಜನಿಗೆ ಶಾಸನ ಕಳಿಸಿದನು.

ರಾಜನು ಅದನ್ನು ಕೇಳಿ, "ನನ್ನ ಹತ್ತಿರ ಯುದ್ಧವೆಂಬುದಿಲ್ಲ. ರಾಜ್ಯವನ್ನು ಹಿಡಿದುಕೊಳ್ಳಲಿ" ಎಂದು ಪ್ರತಿಶಾಸನ ಕಳಿಸಿದನು.

ಪುನಃ ಅಮಾತ್ಯರು ರಾಜನ ಬಳಿಸಾರಿ, "ದೇವ, ನಾವು ಕೋಸಲರಾಜನು ನಗರವನ್ನು ಪ್ರವೇಶಿಸಲು ಬಿಡುವುದಿಲ್ಲ. ನಗರದ ಹೊರಗೇ ಅವನನ್ನು ಹೊಡೆದು ಹಿಡಿಯೋಣ" ಎಂದರು.

ರಾಜನು ಮೊದಲಿನಂತೆಯೇ ತಡೆದು, ನಗರದ ಬಾಗಿಲುಗಳನ್ನು ತೆಗೆಯಿಸಿ, ಸಾವಿರ ಅಮಾತ್ಯರ ಸಂಗಡ ಮಹಾಸ್ಥಳದಲ್ಲಿ ಪರ್ಯಂಕ ಮಧ್ಯದಲ್ಲಿ ಕುಳಿತನು.

ಕೋಸಲರಾಜನು ಮಹತ್ತಾದ ಬಲವಾಹನದೊಡನೆ ವಾರಾಣಸಿಯನ್ನು ಪ್ರವೇಶಿಸಿದನು. ಅವನು ಒಬ್ಬ ಪ್ರತಿಶತ್ರುವನ್ನಾದರೂ ಕಾಣದೆ, ರಾಜನ ಮನೆಬಾಗಿಲಿಗೆ ಹೋಗಿ, ಬಾಗಿಲು ತೆರೆದಿಕ್ಕಿದ ಮನೆಯಲ್ಲಿ ಅಮಾತ್ಯಗಣದ ಪರಿವಾರದೊಡನೆ ಅಲಂಕೃತವಾದ ಮಹಾಸ್ಥಲವನ್ನೇರಿ ಕುಳಿತಿದ್ದ ನಿರಪರಾಧಿ ಶೀಲವಂತಮಹಾರಾಜನನ್ನು ಅವನ ಸಾವಿರ ಅಮಾತ್ಯರೊಡನೆ ಹಿಡಿಸಿ, "ಹೋಗಿರಿ. ಈ ರಾಜನನ್ನು ಅಮಾತ್ಯರೊಡನೆ ಗಾಢವಾಗಿ ಹಿಂಗಟ್ಟು ಕಟ್ಟಿ, ಹಸಿಮಾಂಸದ ಶ್ಮಶಾನಕ್ಕೆ ಒಯ್ದು, ಕೊರಳಿನಷ್ಟು ಹಳ್ಳ ಅಗೆದು, ಒಬ್ಬನೂ ಕೈಯನ್ನು ಮೇಲೆತ್ತಲಾಗದಂತೆ ಮಣ್ಣು ಹಾಕಿ ಹೂಳಿರಿ. ರಾತ್ರಿ ಸೃಗಾಲಗಳು ಬಂದು ಇವರಿಗೆಲ್ಲಾ ಮಾಡಬೇಕಾದುದನ್ನು ಮಾಡುವುವು" ಎಂದನು. ಮನುಷ್ಯರು ಕಳ್ಳರಾಜನ ಆಜ್ಞೆ ಕೇಳಿ, ರಾಜನನ್ನು ಅಮಾತ್ಯರೊಡನೆ ದೃಢವಾಗಿ ಹಿಂಗಟ್ಟುಕಟ್ಟಿ ಹೊರಡಿಸಿದರು.

ಆ ವೇಳೆಯಲ್ಲೂ ಶೀಲವಂತಮಹಾರಾಜನಿಗೆ ಕಳ್ಳರಾಜನ ಮೇಲೆ ಇಷ್ಟೂ ಮನಸ್ಸು ರೋಸಲಿಲ್ಲ. ಆ ಅಮಾತ್ಯರನ್ನು ಹೀಗೆ ಬಂಧಿಸಿ ಒಯ್ಯುತ್ತಿದ್ದರೂ, ಅವರಲ್ಲಿ ಒಬ್ಬನಾದರೂ ರಾಜನ ಮಾತನ್ನು ಮುರಿಯಲು ಸಮರ್ಥನಾಗಲಿಲ್ಲ. ಹೀಗೆ ಅವನ ಪರಿಷೆಯು ಒಳ್ಳೆಯ ವಿನಯದಿಂದ ಕೂಡಿತ್ತು.

ಆಗ ಆ ರಾಜಪುರುಷರು ಅಮಾತ್ಯರೊಡನೆ ಶೀಲವಂತರಾಜನನ್ನು ಹಸಿಮಾಂಸದ ಶ್ಮಶಾನಕ್ಕೆ ಒಯ್ದು, ಕೊರಳುದ್ದ ಹಳ್ಳ ಅಗೆದು, ಶೀಲವಂತ ಮಹಾರಾಜನನ್ನು ಮಧ್ಯದಲ್ಲೂ ಉಳಿದ ಅಮಾತ್ಯರೆಲ್ಲರನ್ನೂ ಅವನ ಎರಡೂ ಕಡೆಗಳಲ್ಲೂ ಹಳ್ಳಗಳಿಗೆ ಇಳಿಸಿ, ಮಣ್ಣನ್ನು ಚೆಲ್ಲಿ, ಗಟ್ಟಿಯಾಗಿ ಕುಟ್ಟಿ, ಹೋದರು.

ಶೀಲವಂತರಾಜನು ಅಮಾತ್ಯರನ್ನು ಕರೆದು, ಕಳ್ಳರಾಜನ ಮೇಲೆ ಕೋಪ ಮಾಡದೆ, "ಮೈತ್ರಿಯನ್ನೇ ಭಾವಿಸಿರಿ, ಅಪ್ಪಾ" ಎಂದು ಬುದ್ಧಿ ಹೇಳಿದನು.

ಆಗ ಅರ್ಧರಾತ್ರಿಸಮಯದಲ್ಲಿ 'ಮನುಷ್ಯಮಾಂಸ ತಿನ್ನೋಣ' ವೆಂದು ಸೃಗಾಲಗಳು ಬಂದವು. ಅವುಗಳನ್ನು ಕಂಡು, ರಾಜನೂ

ಅಮಾತ್ಯರೂ ಒಂದೇ ಏಟಿಗೆ ಸದ್ದುಮಾಡಿದರು. ಸೃಗಾಲಗಳು ಭಯಗೊಂಡು ಓಡಿದವು. ಅವು ಹಿಂದಿರುಗಿ ನೋಡುತ್ತಾ, ಹಿಂದೆ ಯಾರೂ ಬಾರದುದನ್ನು ತಿಳಿದು, ಪುನಃ ಹಿಂದಕ್ಕೆ ಬಂದವು. ಅವರು ಹಾಗೆಯೇ ಶಬ್ದಮಾಡಿದರು. ಹೀಗೆ ಮೂರನೆಯ ಸಲದ ವರೆಗೂ ಓಡಿ, ಪುನಃ ಗಮನಿಸುತ್ತಾ, ಅವರಲ್ಲಿ ಒಬ್ಬನಾದರೂ ಬಾರದುದನ್ನು ತಿಳಿದು, "ಇವರು ವಧೆಗೆ ಒಳಗಾದವರಿರಬೇಕು" ಎಂದು ಶೂರರಾಗಿ ಹಿಂದಿರುಗಿ, ಪುನಃ ಅವರು ಶಬ್ದಮಾಡಿದರೂ ಓಡಲಿಲ್ಲ.

ಹಿರಿಯ ಸೃಗಾಲ ರಾಜನ ಹತ್ತಿರ ಬಂತು, ಉಳಿದವು ಉಳಿದ ವರ ಹತ್ತಿರ ಬಂದವು. ಉಪಾಯಕುಶಲನಾದ ರಾಜನು ಅದು ತನ್ನ ಹತ್ತಿರ ಬರುವುದನ್ನು ತಿಳಿದು, ಕಡಿಯುವುದಕ್ಕೆ ಅವಕಾಶ ಕೊಡುವಂತೆ ಕೊರಳನ್ನು ಮೇಲೆತ್ತಿ, ಅದು ಕೊರಳನ್ನು ಕಡಿಯುವಾಗ ದವಡೆಯ ಮೂಳೆಯಿಂದ ಅದನ್ನು ಹಿಡಿದೆಳೆದು ಯಂತ್ರದಲ್ಲಿ ಎಸೆದಂತೆ ಗಾಢವಾಗಿ ಹಿಡಿದನು. ರಾಜನು ಆನೆಯ ಬಲದ ದವಡೆಯ ಮೂಳೆಯಿಂದ ಎಳೆಯುತ್ತಾ ಕುತ್ತಿಗೆಯನ್ನು ದೃಢವಾಗಿ ಹಿಡಿದಿರಲು, ಸೃಗಾಲವು ತಾನು ಬಿಡಿಸಿಕೊಳ್ಳಲಾರದೆ ಮರಣಭಯದಿಂದ ಬೆದರಿ ದೊಡ್ಡ ಕೂಗು ಕೂಗಿತು. ಉಳಿದ ಸೃಗಾಲಗಳು ಅದರ ಆರ್ತಸ್ವರವನ್ನು ಕೇಳಿ, "ಒಬ್ಬನು ಇದನ್ನು ಹಿಡಿದಿರಬೇಕು" ಎಂದು ಅಮಾತ್ಯರ ಬಳಿಸಾರಲಾರದೆ ಮರಣಭಯ ದಿಂದ ಬೆದರಿ, ಎಲ್ಲವೂ ಓಡಿದವು.

ರಾಜನು ದವಡೆಯ ಮೂಳೆಯಿಂದ ದೃಢವಾಗಿ ಹಿಡಿದಿದ್ದ ಸೃಗಾಲವು ಆಚೆ ಈಚೆ ಆಡುತ್ತಾ ಮಣ್ಣು ಸಡಿಲವಾಯಿತು. ಆ ಸೃಗಾಲವೂ ಮರಣಭಯದಿಂದ ಹೆದರಿ ನಾಲ್ಕು ಕಾಲುಗಳಿಂದಲೂ ರಾಜನ ಮೇಲಿದ್ದ ಮಣ್ಣನ್ನು ಕಿತ್ತುಹಾಕಿತು. ಆನೆಯ ಬಲವುಳ್ಳವನೂ ಸಾಮರ್ಥ್ಯದಿಂದ ಕೂಡಿದವನೂ ಆದ ರಾಜನು ಮಣ್ಣು ಸಡಿಲ ವಾದುದನ್ನು ತಿಳಿದು, ಸೃಗಾಲವನ್ನು ಬಿಟ್ಟು, ಆಚೆ ಈಚೆ ಅಲುಗುತ್ತಾ, ಎರಡು ಕೈಗಳನ್ನೂ ಮೇಲೆತ್ತಿ, ಹಳ್ಳದ ಬಾಯಿನಂಚುಗಳನ್ನು ಆಧರಿಸಿ, ಗಾಳಿಯಿಂದ ಕತ್ತರಿಸಲ್ಪಟ್ಟ ಬಲಾಹಕಮೋಡದಂತೆ ಹೊರಗೆ ಬಂದು ನಿಂತು, ಅಮಾತ್ಯರನ್ನು ಸಂತೈಸಿ, ಮಣ್ಣನ್ನು ಸಡಿಲಿಸಿ, ಎಲ್ಲರನ್ನೂ

ಮೇಲೆತ್ತಿ, ಅಮಾತ್ಯರ ಪರಿವಾರದೊಡನೆ ಹಸಿಮಾಂಸದ ಶ್ಮಶಾನದಲ್ಲಿ ನಿಂತನು.

ಆ ಸಮಯದಲ್ಲಿ ಜನರು ಸತ್ತವನೊಬ್ಬನನ್ನು ಹಸಿಮಾಂಸದ ಶ್ಮಶಾನದಲ್ಲಿ ಎಸೆಯುತ್ತಾ, ಇಬ್ಬರು ಯಕ್ಷರಿಗೆ ಸೇರಿದ ಸೀಮೆಯಲ್ಲಿ ಎಸೆದರು. ಯಕ್ಷರು ಆ ಸತ್ತವನನ್ನು ಹಂಚಿಕೊಳ್ಳಲಾರದೆ, "ನಾವು ಇದನ್ನು ಹಂಚಿಕೊಳ್ಳಲಾರೆವು. ಈ ಶೀಲವಂತರಾಜನು ಧರ್ಮಿಕನು. ಇವನು ನಮಗೆ ಹಂಚಿಕೊಡುವನು. ಇವನ ಬಳಿ ಹೋಗೋಣ" ಎಂದು ಆ ಸತ್ತವನ ಕಾಲು ಹಿಡಿದು ಎಳೆಯುತ್ತಾ ರಾಜನ ಹತ್ತಿರ ಹೋಗಿ, "ದೇವ, ನಮಗೆ ಇದನ್ನು ಹಂಚಿಕೊಡು" ಎಂದರು.

"ಓ ಯಕ್ಷರೆ, ನಾನು ಇದನ್ನು ನಿಮಗೆ ಹಂಚಿಕೊಡುವೆನು. ಆದರೆ ನಾನು ಅಪರಿಶುದ್ಧನಾಗಿರುವೆನು. ಅಷ್ಟರಲ್ಲಿ ನನಗೆ ಸ್ನಾನಮಾಡಿಸಿರಿ."

ಯಕ್ಷರು ಕಳ್ಳರಾಜನಿಗಾಗಿ ಇರಿಸಿದ್ದ ಸುಗಂಧೋದಕವನ್ನು ತಮ್ಮ ಪ್ರಭಾವದಿಂದ ತಂದು, ರಾಜನಿಗೆ ಸ್ನಾನಕ್ಕಾಗಿ ಕೊಟ್ಟರು. ಸ್ನಾನ ಮಾಡಿ ನಿಂತ ಅವನಿಗೆ ಕಳ್ಳರಾಜನಿಗಾಗಿ ಮಡಿಸಿಟ್ಟಿದ್ದ ಬಟ್ಟೆಗಳನ್ನು ತಂದು ಕೊಟ್ಟರು. ಅದನ್ನು ಹಾಕಿಕೊಂಡು ನಿಂತ ಅವನಿಗೆ ನಾಲ್ಕು ತೆರದ ಗಂಧಗಳನ್ನು ಇಟ್ಟಿದ್ದ ಭರಣಿಯನ್ನು ತಂದುಕೊಟ್ಟರು. ಗಂಧವನ್ನು ತೊಡೆದುಕೊಂಡು ನಿಂತ ಅವನಿಗೆ ಚಿನ್ನದ ಪೆಟ್ಟಿಗೆಯಲ್ಲಿ ರತ್ನದ ಬೀಸಣಿಗೆಗಳ ಮೇಲೆ ಇರಿಸಿದ್ದ ನಾನಾ ಪುಷ್ಪಗಳನ್ನು ತಂದು ಕೊಟ್ಟರು. ಹೂಗಳನ್ನು ಅಲಂಕರಿಸಿಕೊಂಡು ನಿಂತಾಗ, "ಇನ್ನೇನು ಮಾಡೋಣ?" ಎಂದು ಕೇಳಿದರು.

ರಾಜನು ತನಗೆ ಹಸಿವಾಗಿರುವುದನ್ನು ತಿಳಿಸಿದನು. ಅವರು ಹೋಗಿ, ಕಳ್ಳರಾಜನಿಗಾಗಿ ಸಜ್ಜುಗೊಳಿಸಿದ್ದ ನಾನಾ ಉತ್ತಮರಸ ಭೋಜನಗಳನ್ನು ತಂದು ಕೊಟ್ಟರು. ಸ್ನಾನ ಮಾಡಿ, ಗಂಧ ಲೇಪಿಸಿ ಕೊಂಡು, ಉಡುಪುಟ್ಟು, ಅಲಂಕರಿಸಿಕೊಂಡ ರಾಜನು ನಾನಾ ಉತ್ತಮ ರಸಭೋಜನಗಳನ್ನು ಉಂಡನು. ಯಕ್ಷರು ಕಳ್ಳರಾಜನಿಗಾಗಿ ಇರಿಸಿದ್ದ

ಸುವಾಸನೆಯು ಕುಡಿಯುವ ನೀರನ್ನು ತಂದುಕೊಟ್ಟರು; ನೀರಿದ್ದ ಸುವರ್ಣ ಭೃಂಗಾರವನ್ನೂ ಕುಡಿಯಲು ಚಿನ್ನದ ಬಟ್ಟಲುಗಳನ್ನೂ ತಂದರು.

ಆಗ ಅವನು ನೀರು ಕುಡಿದು, ಬಾಯಿ ಮುಕ್ಕಳಿಸಿ, ಕೈ ತೊಳೆಯುವಾಗ, ಕಳ್ಳರಾಜನಿಗಾಗಿ ಅಣಿಮಾಡಿದ್ದ ಐದುಸುಗಂಧಗಳಿಂದ ಸುತ್ತಿದ ತಾಂಬೂಲವನ್ನು ತಂದು ಕೊಟ್ಟರು. ಅದನ್ನು ತಿಂದು ಕುಳಿತಿರುವಾಗ, "ಇನ್ನೇನು ಮಾಡೋಣ?" ಎಂದು ಪ್ರಶ್ನಿಸಿದರು. "ಹೋಗಿ, ಕಳ್ಳರಾಜನ ತಲೆಯ ಬಳಿಯಿರುವ ಮಂಗಲಖಡ್ಗವನ್ನು ತನ್ನಿರಿ" ಎನ್ನಲು, ಅದನ್ನೂ ಹೋಗಿ ತಂದರು.

ರಾಜನು ಖಡ್ಗವನ್ನು ಹಿಡಿದು, ಆ ಸತ್ತವನನ್ನು ನೇರವಾಗಿ ನಿಲ್ಲಿಸಗೊಳಿಸಿ, ತಲೆಯ ನಡುವೆ ಕತ್ತಿಯಿಂದ ಹೊಡೆದು ಎರಡು ಪಾಲು ಮಾಡಿ, ಇಬ್ಬರು ಯಕ್ಷರಿಗೆ ಸಮವಾಗಿ ಹಂಚಿಕೊಟ್ಟನು. ಕೊಟ್ಟಾದ ಮೇಲೆ ಖಡ್ಗವನ್ನು ತೊಳೆದು, ಸನ್ನಾಹಮಾಡಿಕೊಂಡು ನಿಂತನು.

ಆಗ ಆ ಯಕ್ಷರು ಮನುಷ್ಯಮಾಂಸವನ್ನು ತಿಂದು, ಒಳ್ಳೆಯ ಹಿತವಾಗಿ, ಸಂತೋಷಗೊಂಡು,"ಮಹಾರಾಜ, ಇನ್ನೇನು ಮಾಡೋಣ?" ಎಂದು ಪ್ರಶ್ನಿಸಿದರು.

" ಹಾಗಾದರೆ, ನೀವು ನಿಮ್ಮ ಪ್ರಭಾವದಿಂದ ನನ್ನನ್ನು ಕಳ್ಳರಾಜನು ಮಲಗುವ ಮನೆಯಲ್ಲಿ ಇಳಿಸಿರಿ. ಈ ಅಮಾತ್ಯರನ್ನೂ ಅವರವರ ಮನೆಗಳಲ್ಲಿ ನಿಲ್ಲಿಸಿರಿ."

ಅವರು " ಒಳ್ಳೆಯದು, ದೇವ" ಎಂದು ಒಪ್ಪಿ, ಹಾಗೆಯೇ ಮಾಡಿದರು.

ಆ ವೇಳೆಯಲ್ಲಿ ಕಳ್ಳರಾಜನು ಅಲಂಕೃತವಾದ ಶಯನಗೃಹದಲ್ಲಿ ತುಂಬಾ ಬೆಲೆಬಾಳುವ ಹಾಸಿಗೆಯ ಮೇಲೆ ಮಲಗಿ ನಿದ್ರಿಸುತ್ತಿದ್ದನು. ಮೈಮರೆತು ಮಲಗಿದ್ದ ಅವನ ಹೊಟ್ಟೆಯನ್ನು ರಾಜನು ಕತ್ತಿಯ ಅಗಲದಿಂದ ಹೊಡೆದನು. ಅವನು ಭಯಗೊಂಡು ಎಚ್ಚರವಾಗಿ, ದೀಪದ ಬೆಳಕಿನಲ್ಲಿ ಶೀಲವಂತಮಹಾರಾಜನನ್ನು ಗುರುತಿಸಿ, ಹಾಸಿಗೆಯಿಂದ ಎದ್ದು, ಧೈರ್ಯವನ್ನು ತಂದುಕೊಂಡು ನಿಂತು, " ಮಹಾರಾಜ,

ಇಂತಹ ರಾತ್ರಿಯಲ್ಲಿ, ಕಾವಲಿನವರಿದ್ದು ಬಾಗಿಲು ಮುಚ್ಚಿರುವ ಮನೆಯಲ್ಲಿ, ಕಾವಲಿನವರು ಅವಕಾಶ ಕೊಡದಿರುವಲ್ಲಿ, ನೀನು ಖಡ್ಗವನ್ನು ಸನ್ನಾಹಮಾಡಿಕೊಂಡು ಅಲಂಕೃತನಾಗಿ ಈ ಹಾಸಿಗೆಯ ಬಳಿಗೆ ಹೇಗೆ ತಾನೆ ಬಂದೆ?" ಎಂದು ರಾಜನಿಗೆಂದನು.

ರಾಜನು ತಾನು ಬಂದ ರೀತಿಯೆಲ್ಲವನ್ನೂ ವಿಸ್ತಾರವಾಗಿ ಹೇಳಿದನು. ಅದನ್ನು ಕೇಳಿ, ಕಳ್ಳರಾಜನ ಮನಸ್ಸು ಕಲಕಿತು. "ಮಹಾರಾಜ, ನಾನು ಮನುಷ್ಯನಾದರೂ ನನಗೆ ನಿನ್ನ ಗುಣ ತಿಳಿಯಲಿಲ್ಲ. ಪರರ ರಕ್ತಮಾಂಸವನ್ನು ತಿನ್ನುವ ಕ್ರೂರ ಕಠೋರ ಯಕ್ಷರು ನಿನ್ನ ಗುಣಗಳನ್ನು ಬಲ್ಲರು. ನರೇಂದ್ರ, ಈ ರೀತಿಯ ಶೀಲಸಂಪತ್ತಿಯಿರುವ ನಿನಗೆ ನಾನು ದ್ರೋಹಮಾಡುವುದಿಲ್ಲ" ಎಂದು ಖಡ್ಗವನ್ನು ಕೊಂಡು ಶಪಥಮಾಡಿ, ರಾಜನ ಕ್ಷಮೆಯನ್ನುಕೊಂಡು ಅವನನ್ನುದೊಡ್ಡ ಹಾಸಿಗೆಯ ಮೇಲೆ ಮಲಗಿಸಿ, ತಾನು ಚಿಕ್ಕಮಂಚದಲ್ಲಿ ಮಲಗಿದನು.

ರಾತ್ರಿ ಕಳೆದು ಬೆಳಗಾಗಿ ಸೂರ್ಯ ಉದಯಿಸಲು ಡಂಗುರ ಹೊಯಿಸಿ, ಎಲ್ಲಾ ಸೈನ್ಯವನ್ನೂ ಅಮಾತ್ಯಬ್ರಾಹ್ಮಣಗೃಹಪತಿಗಳನ್ನೂ ಒಟ್ಟುಗೂಡಿಸಿ, ಅವರೆದುರಿಗೆ ಪೂರ್ಣಚಂದ್ರನನ್ನು ಆಕಾಶದಲ್ಲಿ ಎತ್ತುವಂತೆ ಶೀಲವಂತರಾಜನ ಗುಣಗಳನ್ನು ತಿಳಿಸುತ್ತಾ, ಪರಿಷೆಯ ನಡುವಿನಲ್ಲಿಯೇ ಪುನಃ ರಾಜನ ಕ್ಷಮೆಯನ್ನು ಕೊಂಡು, ರಾಜ್ಯವನ್ನು ಒಪ್ಪಿಸಿ, "ಇಂದಿನಿಂದ ನಿನಗೆ ಉಂಟಾದ ಚೋರರ ಉಪದ್ರವ ನನ್ನ ಭಾರ, ನನ್ನ ರಕ್ಷಣೆಯನ್ನು ಕೊಂಡು ನೀನು ರಾಜ್ಯವಾಳು" ಎಂದು ಹೇಳಿ, ಆ ನಿಂದೆಯನ್ನು ಮಾಡಿದವನಿಗೆ ಆಜ್ಞೆಮಾಡಿ, ತನ್ನ ಬಲವಾಹನವನ್ನು ತೆಗೆದುಕೊಂಡು, ತನ್ನ ರಾಷ್ಟ್ರಕ್ಕೆ ಹೋದನು.

ಶೀಲವಂತ ಮಹಾರಾಜನಾದರೋ ಅಲಂಕಾರ ವೈಭವಗಳಿಂದ ಬೆಳ್ಗೊಡೆಯ ಕೆಳಗೆ ಶರಭದ ಕಾಲುಗಳುಳ್ಳ ಕಾಂಚನಪರ್ಯಂಕದಲ್ಲಿ ಕುಳಿತು, ತನ್ನ ಸಂಪತ್ತನ್ನು ಗಮನಿಸುತ್ತಾ "ನಾನು ವೀರ್ಯದಿಂದ ಕೆಲಸಮಾಡದೆ ಇದ್ದಿದ್ದರೆ ಇಂತಹ ಈ ಸಂಪತ್ತೂ ಸಾವಿರ ಅಮಾತ್ಯರು ಬದುಕುವುದೂ ಆಗುತ್ತಿರಲಿಲ್ಲ. ಕಳೆದು ಹೋಗಿದ್ದ ಈ ಯಶಸ್ಸನ್ನು

ವೀರ್ಯದ ಬಲದಿಂದ ನಾನು ಮರಳಿ ಪಡೆದೆ, ಸಾವಿರ ಅಮಾತ್ಯರಿಗೆ ಜೀವದಾನ ಮಾಡಿದೆ. ಆಸೆಯನ್ನು ಬಿಡದೆ ವೀರ್ಯದಿಂದ ಕೆಲಸ ಮಾಡುವುದೇ ತಕ್ಕುದು. ವೀರ್ಯದಿಂದ ಕೆಲಸಮಾಡಿದವನಿಗೆ ಹೀಗೆಯೇ ಫಲ ಕೈಗೂಡುತ್ತದೆ" ಎಂದು ಚಿಂತಿಸಿ, "ಆಸೆಯಿಟ್ಟು ಕೆಲಸಮಾಡು. ಪಂಡಿತನಾದವನು ಆಸೆಬಿಟ್ಟು ಗೋಳಾಡುವುದಿಲ್ಲ. ನಾನು ಬಯಸಿದಂತೆ ನನಗೆ ಆಯಿತೆಂಬುದನ್ನು ಇಂದು ನನ್ನಲ್ಲೇ ಕಾಣುತ್ತೇನೆ." ಎಂದು ಎದೆ ತುಂಬಿಬಂದು ಹೇಳಿದನು.

ಹೀಗೆ ಬೋಧಿಸತ್ತ್ವನು ಎದೆ ತುಂಬಿಬಂದು ಹೇಳಿ, ಜೀವವಿರುವ ತನಕ ಪುಣ್ಯಗಳನ್ನು ಮಾಡುತ್ತಿದ್ದು, ಕರ್ಮಕ್ಕೆ ಅನುಸಾರವಾಗಿ ಹೋದನು.

# ತ್ರಿಪರ್ಯಸ್ತ ಮೃಗ

ಹಿಂದೆ ರಾಜಗೃಹದಲ್ಲಿ ಒಬ್ಬ ಮಗಧರಾಜನು ರಾಜ್ಯವಾಳುತ್ತಿದ್ದನು. ಆಗ ಬೋಧಿಸತ್ತ್ವನು ಜಿಂಕೆಯ ಹೊಟ್ಟೆಯಲ್ಲಿ ಜನ್ಮತಾಳಿ, ಜಿಂಕೆಗಳ ಪರಿವಾರದೊಡನೆ ಕಾಡಿನಲ್ಲಿ ವಾಸಿಸುತ್ತಿದ್ದನು. ಆಗ ಅವನ ತಂಗಿ ತನ್ನ ಮಗನನ್ನು ಅವನ ಬಳಿ ಕರೆದುತಂದು, "ಅಣ್ಣ, ಈ ನಿನ್ನ ಸೋದರಳಿಯನಿಗೆ ಮೃಗಮಾಯೆಯನ್ನು ಕಲಿಸು" ಎಂದಿತು. ಬೋಧಿಸತ್ತ್ವನು ಒಳ್ಳೆಯದೆಂದು ಅದಕ್ಕೆ ಉತ್ತರಕೊಟ್ಟು, "ಹೋಗಪ್ಪಾ, ಇಂತಹವೇಳೆಯಲ್ಲಿ ಬಂದು ಕಲಿಯಬಹುದು" ಎಂದನು. ಅದು ಮಾವನು ಹೇಳಿದ ವೇಳೆಯನ್ನು ಮೀರದೆ, ಅದರ ಬಳಿಸಾರಿ ಮೃಗಮಾಯೆಯನ್ನು ಕಲಿತಿತು.

ಅದು ಒಂದು ದಿವಸ ಕಾಡಿನಲ್ಲಿ ತಿರುಗುತ್ತಾ ಪಾಶಕ್ಕೆ ಸಿಕ್ಕಿಬಿದ್ದು, ಸಿಕ್ಕಿಬಿದ್ದ ಕೂಗನ್ನು ಕೂಗಿತು. ಜಿಂಕೆಗಳ ಗುಂಪು ಓಡಿಹೋಗಿ, "ನಿನ್ನ ಮಗ ಪಾಶದಲ್ಲಿ ಸಿಕ್ಕಿಬಿದ್ದ" ಎಂದು ಅದರ ತಾಯಿಗೆ ತಿಳಿಸಿದುವು.

ಆ ಹೆಣ್ಣುಜಿಂಕೆ ಅಣ್ಣನ ಹತ್ತಿರ ಹೋಗಿ, "ಅಣ್ಣ, ನಿನ್ನ ಸೋದರಳಿಯನು ನಿನ್ನಿಂದ ಮೃಗಮಾಯೆ ಕಲಿತಿತೇನು?" ಎಂದು ಪ್ರಶ್ನಿಸಿತು.

ಬೋಧಿಸತ್ತ್ವನು "ನಿನ್ನ ಮಗನಿಗೇನೂ ಕೇಡಾಗುವುದೆಂದು ಎಣಿಸಬೇಡ. ಅದು ಮೃಗಮಾಯೆಯನ್ನು ಚೆನ್ನಾಗಿ ತಿಳಿದಿದೆ. ಇಷ್ಟರಲ್ಲೇ ಅದು ನಗುನಗುತ್ತಾ ಬರುತ್ತದೆ" ಎಂದು ಹೇಳಿ, "ಬೆನ್ನಿನ ಮೇಲೂ, ಎರಡು ಪಕ್ಕಗಳ ಮೇಲೂ, ಹೀಗೆ ಮೂರು ವಿಧಗಳಲ್ಲೂ ಮಲಗುವುದು ಅನೇಕ ಮಾಯೆಗಳನ್ನು ಬಲ್ಲ ಆ ಮೃಗಕ್ಕೆ ಗೊತ್ತು. ಎಂಟು ಗೊರಸುಗಳನ್ನೂ ಅದು ಉಪಯೋಗಿಸಬಲ್ಲದು. ಅರ್ಧರಾತ್ರಿಯಲ್ಲಿ ಹೊರತು ಅದು ಕುಡಿಯುವುದಿಲ್ಲ. ಉಸಿರು ಹಿಡಿದು ನೆಲದ ಮೇಲೆ ಮಲಗಬಲ್ಲದು. ಈ ಆರು ಕಲೆಗಳೂ ನನ್ನ ಸೋದರಳಿಯನಿಗೆ ಚೆನ್ನಾಗಿ ಗೊತ್ತು" ಎಂದನು.

ಹೀಗೆ ಬೋಧಿಸತ್ತ್ವನು ತನ್ನ ಸೋದರಳಿಯನು ಮೃಗಮಾಯೆಗಳನ್ನು ಚೆನ್ನಾಗಿ ಕಲಿತಿರುವುದನ್ನು ತಿಳಿಸುತ್ತಾ ತಂಗಿಯನ್ನು ಸಂತೈಸಿದನು.

ಆ ಜಿಂಕೆಯ ಮರಿ ಪಾಶದಲ್ಲಿ ಸಿಕ್ಕಿಬಿದ್ದರೂ ಒದ್ದಾಡದೆಯೇ ಒಂದು ಮಗ್ಗುಲಾಗಿ, ಕಾಲುಗಳನ್ನು ಹರಡಿ ಮಲಗಿ, ಕಾಲಿನ ಹತ್ತಿರದ ಎಡೆಯನ್ನು ಗೊರಸುಗಳಿಂದ ಹೊಡೆದು, ಮಣ್ಣುಹುಲ್ಲುಗಳನ್ನು ಮೇಲೆಬ್ಬಿಸಿ, ಮಲಮೂತ್ರಗಳನ್ನು ಮಾಡಿ, ತಲೆಯನ್ನು ಕೆಳಗೆ ಬೀಳಿಸಿ, ನಾಲಿಗೆಯನ್ನು ನೀಡಿ, ಮೈಯನ್ನು ಬೆವರಿನಿಂದ ನೆನೆಸಿ, ಉಸಿರುಹಿಡಿದು ಹೊಟ್ಟೆಯೂದಿಸಿಕೊಂಡು, ಕಣ್ಣುಗಳನ್ನು ಹೊರಳಿಸಿ, ಕೆಳಮೂಗಿನ ಹೊಳ್ಳೆಯಿಂದ ಉಸಿರಾಡುತ್ತಾ ಮೇಲುಮೂಗಿನ ಹೊಳ್ಳೆಯಿಂದ ಉಸಿರು ಹಿಡಿದು, ಮೈಯನ್ನೆಲ್ಲಾ ಸ್ತಬ್ಧವಾಗಿಮಾಡಿ, ಸತ್ತಂತೆ ಕಾಣಿಸಿಕೊಂಡಿತು. ನೀಲಿ ನೊಣಗಳು ಕೂಡ ಅದಕ್ಕೆ ಬಂದು ಮುತ್ತಿದುವು. ಅಲ್ಲಲ್ಲೇ ಕಾಗೆಗಳೂ ಎರಗಿದವು.

ಬೇಡನು ಬಂದು, ಅದರ ಹೊಟ್ಟೆಯನ್ನು ಕೈಯಿಂದ ಹೊಡೆದು, "ಬೆಳಗ್ಗೆಯೇ ಸಿಕ್ಕಿಬಿದ್ದಿರಬೇಕು. ವಾಸನೆ ಹುಟ್ಟಿಬಿಟ್ಟಿದೆ" ಎಂದು ಅದನ್ನು ಕಟ್ಟಿದ್ದ ಹಗ್ಗವನ್ನು ಬಿಚ್ಚಿ, "ಇಲ್ಲಿಯೇ ಇದನ್ನು ಬಗೆದು, ಮಾಂಸವನ್ನು ಕೊಂಡು ಹೋಗುವೆನು" ಎಂದು ನಿಶ್ಚಿಂತೆಯಾಗಿ ಕೊಂಬೆ ಎಲೆಗಳನ್ನು ಕೂಡಿಸತೊಡಗಿದನು.

ಜಿಂಕೆಮರಿ ಎದ್ದು, ನಾಲ್ಕು ಕಾಲುಗಳಲ್ಲಿ ನಿಂತು, ಮೈಯನ್ನು ಒದರಿ, ಕೊರಳನ್ನು ನೀಡಿ, ಮಹಾವಾತದಿಂದ ಕತ್ತರಿಸಲ್ಪಟ್ಟ ಬಲಾಹಕ ಮೋಡದಂತೆ ವೇಗವಾಗಿ ತಾಯಿಯ ಹತ್ತಿರ ಹೋಯಿತು.

# ವಾತಮೃಗ

ಹಿಂದೆ, ವಾರಾಣಸಿಯ ರಾಜನಾದ ಬ್ರಹ್ಮದತ್ತನಿಗೆ ಸಂಜಯನೆಂಬ ತೋಟಗಾರನಿದ್ದನು.

ಆಗ ಒಂದು ವಾತಮೃಗವು ಆ ಉದ್ಯಾನಕ್ಕೆ ಬಂದು, ಸಂಜಯನನ್ನು ಕಂಡು ಓಡುತ್ತಿತ್ತು. ಸಂಜಯನಾದರೂ ಅದನ್ನು ಗದರಿಸದೆ ಹೋಗಗೊಟ್ಟನು. ಅದು ಪುನಃಪುನಃ ಬಂದು ಉದ್ಯಾನದಲ್ಲೇ ತಿರುಗುತ್ತಿತ್ತು.

ತೋಟಗಾರನು ಉದ್ಯಾನದ ನಾನಾ ತೆರದ ಹೂಹಣ್ಣುಗಳನ್ನು ದಿನದಿನವೂ ರಾಜನಿಗೆ ತೆಗೆದುಕೊಂಡು ಹೋಗುತ್ತಿದ್ದನು.

ಆಗ ಒಂದು ದಿವಸ ರಾಜನು "ಅಯ್ಯಾ ತೋಟಗಾರ, ನಿನ್ನ ತೋಟದಲ್ಲಿ ಏನಾದರೂ ಆಶ್ಚರ್ಯ ಕಂಡುದುಂಟೆ ?" ಎಂದು ಅವನನ್ನು ಕೇಳಿದನು.

"ದೇವ, ಬೇರೇನೂ ಕಾಣೆ. ಆದರೆ ಒಂದು ವಾತಮೃಗ ಬಂದು, ತೋಟದಲ್ಲಿ ತಿರುಗುವುದು. ಇದನ್ನು ಕಾಣುವೆನು."

"ಅದನ್ನು ಹಿಡಿಯಲು ನಿನಗೆ ಆಗುವುದೆ ?"

"ಸ್ವಲ್ಪ ಜೇನುತುಪ್ಪ ದೊರಕಿದರೆ, ಈ ರಾಜನಿವೇಶನದೊಳಕ್ಕೂ ಅದನ್ನು ಕರೆತರಲು ಆಗುವುದು."

ರಾಜನು ಅವನಿಗೆ ಜೇನುತುಪ್ಪ ಕೊಡಿಸಿದನು. ಅವನು ಅದನ್ನು ತೆಗೆದುಕೊಂಡು ತೋಟಕ್ಕೆ ಹೋಗಿ, ವಾತಮೃಗವು ತಿರುಗಾಡುವೆಡೆಯಲ್ಲಿ ಹುಲ್ಲಿಗೆ ಜೇನುತುಪ್ಪ ಬಳಿದು, ಮರೆಯಾದನು. ಮೃಗವು ಬಂದು, ಜೇನುತುಪ್ಪ ಬಳಿದ ಹುಲ್ಲನ್ನು ತಿಂದು, ರಸದ ಆಸೆಗೆ ಸಿಕ್ಕಿ, ಬೇರೆಯ ಕಡೆ ಹೋಗದೆ ತೋಟಕ್ಕೇ ಬರುತ್ತಿತ್ತು.

ತೋಟಗಾರನು ಅದಕ್ಕೆ ಜೇನುಬಳಿದ ಹುಲ್ಲಿನಮೇಲೆ ಆಸೆ ಹುಟ್ಟಿದುದನ್ನು ತಿಳಿದು, ಅನುಕ್ರಮವಾಗಿ ತನ್ನನ್ನು ಕಾಣಿಸಿಕೊಂಡನು. ಅದು ಅವನನ್ನು ಕಂಡು, ಕೆಲವು ಹಗಲು ಓಡುತ್ತಾ, ಪುನಃಪುನಃ ಕಾಣುತ್ತಾ ವಿಶ್ವಾಸ ಹೊಂದಿ, ಅನುಕ್ರಮವಾಗಿ ಉದ್ಯಾನಪಾಲನ ಕೈಯ್ಯಲ್ಲಿದ್ದ ಹುಲ್ಲನ್ನು ತಿನ್ನಲು ತೊಡಗಿತು. ಅವನು ಅದಕ್ಕೆ ವಿಶ್ವಾಸವುಂಟಾದುದನ್ನು

ತಿಳಿದು, ರಾಜನಿವೇಶನದವರೆಗಿನ ದಾರಿಯಲ್ಲಿ ಮುರಿದ ಕೊಂಬೆಗಳನ್ನು ದಟ್ಟವಾಗಿ ಚೆಲ್ಲಿಸಿ, ಜೇನುತುಪ್ಪದ ಬುರುಡೆಯನ್ನು ಹೆಗಲಿನಲ್ಲಿ ಸಿಕ್ಕಿಸಿ, ಹುಲ್ಲಿನ ಕಂತೆಯನ್ನು ಕಂಕುಳಿನ ಬಳಿಯಿರಿಸಿ, ಜೇನುತುಪ್ಪ ಬಳಿದ ಹುಲ್ಲನ್ನು ಮೃಗದ ಎದುರೆದುರಿಗೆ ಚೆಲ್ಲುತ್ತಾ, ರಾಜನಿವೇಶನದೊಳಕ್ಕೇ ಬಂದನು.

ಮೃಗವು ಒಳಕ್ಕೆ ಬಂದೊಡನೆ ಬಾಗಿಲು ಮುಚ್ಚಿದರು. ಆ ಮೃಗ ಮನುಷ್ಯರನ್ನು ಕಂಡು ನಡುಗುತ್ತಾ ಮರಣಭಯದಿಂದ ಹೆದರಿ, ನಿವೇಶನದೊಳಗೆ ಹೋಗಿ, ಅಲ್ಲಿಂದಿಲ್ಲಿಗೆ ಓಡಿಯಾಡಿತು.

ರಾಜನು ಪ್ರಾಸಾದದಿಂದ ಕೆಳಗಿಳಿದು, ಅದು ನಡುಗುವುದನ್ನು ಕಂಡು, "ವಾತಮೃಗವೆಂಬುದು ಮನುಷ್ಯರನ್ನು ಕಂಡ ಸ್ಥಳಕ್ಕೆ ಏಳು ಹಗಲು ಹೋಗುವುದಿಲ್ಲ, ಗದರಿಸಿದ ಸ್ಥಾನಕ್ಕೆ ಜೀವವಿರುವ ತನಕ ಹೋಗುವುದಿಲ್ಲ. ಹೀಗೆ ದಟ್ಟಡವಿಯನ್ನು ಆಶ್ರಯಿಸಿರುವ ವಾತಮೃಗವು ರಸದ ಆಸೆಗೆ ಸಿಕ್ಕಿಬಿದ್ದು ಇಂತಹ ಸ್ಥಳಕ್ಕೆ ಬಂದಿದೆ. ರಸದ ಆಸೆಗಿಂತ ಕೇಡಾದುದು ಈ ಲೋಕದಲ್ಲಿ ಇಲ್ಲ" ಎಂದು ಹೇಳಿ, ಆ ಮೃಗವನ್ನು ಪುನಃ ಕಾಡಿಗೇ ಕಳಿಸಿದನು.

# ವರ್ತಕ

ಹಿಂದೆ, ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ತ್ವನು ಸಾವು ಹುಟ್ಟುಗಳಿಗೆ ವಶನಾಗಿ ತಿರುಗುತ್ತಾ ವರ್ತಕ ಪಕ್ಷಿಯ ಹೊಟ್ಟೆಯಲ್ಲಿ ಜನ್ಮತಾಳಿದನು.

ಆಗ ವರ್ತಕಗಳ ಬೇಡನೊಬ್ಬನು ಕಾಡಿನಿಂದ ಬಹಳ ವರ್ತಕಗಳನ್ನು ತಂದು, ಮನೆಯಲ್ಲಿರಿಸಿ, ಆಹಾರ ಕೊಟ್ಟು, ಬೆಲೆ ತೆಗೆದುಕೊಂಡು, ಬಂದವರ ಕೈಯಲ್ಲಿ ವರ್ತಕಗಳನ್ನು ಮಾರಾಟಮಾಡುತ್ತಾ ಜೀವನ ಮಾಡಿಕೊಂಡಿದ್ದನು.

ಅವನು ಒಂದು ದಿವಸ ಬಹು ವರ್ತಕಗಳೊಡನೆ ಬೋಧಿಸತ್ತ್ವನನ್ನೂ ಹಿಡಿದು ತಂದನು. ಬೋಧಿಸತ್ತ್ವನು "ನಾನು ಇವನು ಕೊಡುವ ಆಹಾರವನ್ನೂ ನೀರನ್ನೂ ಸವಿದರೆ, ಇವನು ನನ್ನನ್ನು ಹಿಡಿದು, ಬಂದ ಜನರಿಗೆ ಕೊಡುವನು. ನಾನು ಅವುಗಳನ್ನು ಸವಿಯದಿದ್ದರೆ, ತೆಳ್ಳಗಾಗುವೆನು. ನಾನು ತೆಳ್ಳಗಿರುವುದನ್ನು ಕಂಡು, ಜನರು ನನ್ನನ್ನು ಕೊಳ್ಳುವುದಿಲ್ಲ. ಹೀಗೆ ನನಗೆ ಕ್ಷೇಮವಾಗುವುದು. ಈ ಉಪಾಯ ಮಾಡುವೆನು" ಎಂದು ಚಿಂತಿಸಿ, ಹಾಗೆಯೇ ಮಾಡಿ ತೆಳ್ಳಗಾಗುತ್ತಾ ಮೂಳೆಚಕ್ಕಳ ಮಾತ್ರವಾಯಿತು.

ಬೇಡನು ಬೋಧಿಸತ್ತ್ವನನ್ನು ಬಿಟ್ಟು ಉಳಿದವುಗಳನ್ನು ಮಾರಿದ ಮೇಲೆ, ಬೋಧಿಸತ್ತ್ವನನ್ನು ಹೊರಗೆ ತಂದು, ಬಾಗಿಲ ಹತ್ತಿರ ನಿಂತು, ಕೈಮೇಲೆ ಇಟ್ಟುಕೊಂಡು, "ಈ ವರ್ತಕಕ್ಕೆ ಏನಾಗಿದೆ?" ಎಂದು ಅವಲೋಕಿಸತೊಡಗಿದನು.

ಆಗ, ಅವನು ಎಚ್ಚರ ತಪ್ಪಿದುದನ್ನು ತಿಳಿದು, ಬೋಧಿಸತ್ತ್ವನು ರೆಕ್ಕೆಗಳನ್ನು ಹರಡಿ ಮೇಲೆದ್ದು, ಕಾಡಿಗೇ ಹೋದನು.

ವರ್ತಕಗಳು ಅದನ್ನು ಕಂಡು, "ಏನು, ಕಾಣುತ್ತಿರಲಿಲ್ಲವಲ್ಲ? ಎಲ್ಲಿ ಹೋಗಿದ್ದೆ?" ಎಂದು ಕೇಳಿದವು.

"ಬೇಡನು ನನ್ನನ್ನು ಹಿಡಿದಿದ್ದನು."

"ಏನು ಮಾಡಿ, ಬಿಡುಗಡೆ ಪಡೆದೆ?" ಎಂದು ಅವು ಕೇಳಿದವು.

ಬೋಧಿಸತ್ತ್ವನು "ನಾನು ಅವನು ಕೊಟ್ಟ ಆಹಾರವನ್ನು ತೆಗೆದುಕೊಳ್ಳದೆ, ನೀರನ್ನು ಕುಡಿಯದೆ, ಉಪಾಯವನ್ನು ಚಿಂತಿಸಿ ಮುಕ್ತನಾದೆ" ಎಂದು ಹೇಳಿ, "ಚಿಂತಿಸದವನು ಏನೂ ವಿಶೇಷ ಪಡೆಯುವುದಿಲ್ಲ. ಚಿಂತಿಸಿದವನಿಗೆ ಏನು ಫಲ ಬಂತು, ನೋಡಿ. ಸಾವಿನಿಂದಲೂ ಸೆರೆಯಿಂದಲೂ ನಾನು ಬಿಡುಗಡೆ ಪಡೆದೆ" ಎಂದು ಹೀಗೆ ತಾನು ಮಾಡಿದುದನ್ನು ತಿಳಿಸಿತು.